ಸಂಸ್ಥಾಪಕರು:
ಬುರ್ಲಿ ಬಿಂದುಮಾಧವ
(ಧಾರವಾಡ)

ಸಂಪಾದಕ:
ಬುರ್ಲಿ ಗೋವಿಂದ

# ಉಕ್ಕಿನ ಮನುಷ್ಯ

( ಸ್ಟಾಲಿನ್ )

ಲೇಖಕ: ಶ್ರೀ. ಎಂ. ಹರಿದಾಸ



ಮಿಂಚಿನ ಬಳ್ಳಿಯ ೬ನೆಯ ವರುಷದ ೩ನೆಯ ಕುಡಿ

---

# ಉಕ್ಕಿನ ಮನುಷ್ಯ

## ರಶಿಯಾದ ಸರ್ವಾಧಿಕಾರಿ ಸ್ಟಾಲಿನ್




ಬರೆದವರು :

ಶ್ರೀ. ಎಂ. ಹರಿದಾಸ



ಸಾಹಿತ್ಯ ಪ್ರಸಾರ ಸಂಘ ಲಿ.

ಆಗಿಹಾಳ್ಗವೆ

ಸಂ: ೧೯೪೪ ★ ಬೆಲೆ: ೨—೦—೦

ಮಿಂಚಿನ ಬಳ್ಳಿಯ ೭ನೆಯ ವರುಷದ ೪ನೆಯ ಕುಡಿಯು

ಪ್ರಪಂಚದ ಶಾಂತಿಗೆ ಸುಲಭ ಮಾರ್ಗ

# ಗಾಂಧೀವಾದ

ಶ್ರೀ. ಪಿ. ಎಸ್. ನಾರಾಯಣರಾಯರು, ಬೆಂಗಳೂರು

ಬೇಗನೇ ಪ್ರಕಟವಾಗುವದು



ಪ್ರಕಾಶಕರು
ಬಿ. ಜಿ. ಅವಧಾನಿ
ಮಿಂಚಿನ ಬಳ್ಳಿಯ ಚಾವಡಿ
ಧಾರವಾಡ

ಮುದ್ರಕರು
ಕೆ. ಜಿ. ರಾಯದುರ್ಗ
ಮೋಹನ ಮುದ್ರಣಾಲಯ
ಧಾರವಾಡ

# ಪ್ರಕಾಶಕರ ಮಾತು

ಈ 'ಉಕ್ಕಿನ ಮನುಷ್ಯ' ಮಿಂಚಿನ ಬಳ್ಳಿಯ ೭ನೆಯ ವರುಷದ ೩ನೆಯ ಕುಡಿಯು. ಇದು ಇದಕ್ಕೂ ಮೊದಲು ಪ್ರಕಟವಾಗಬೇಕಿತ್ತು. ಆದರೆ ಕೆಲವಾರು ಕಾರಣಗಳಿಂದ ಈಗ ಪ್ರಕಟವಾಗಬೇಕಾಯಿತು. ನಮ್ಮ ಸಹೃದಯರಾದ ಚಂದಾದಾರರು ಈ ತಡೆಯನ್ನು ಕ್ಷಮಿಸಬೇಕೆಂದು ಬಿನ್ನವಿಸಿಕೊಳ್ಳುವೆವು.

ರಶಿಯವು ಜಗತ್ತಿನಲ್ಲಿಯೇ ಬಲಿಷ್ಠವಾದ ರಾಷ್ಟ್ರವೆಂದು ಈಗ ನಡೆಯುತ್ತಿದ್ದ ಯುದ್ಧದಿಂದ ಕಂಡುಬಂದಿದೆ. ಜಗತ್ತಿನಲ್ಲಿಯೇ ಅತಿ ಬಲಿಷ್ಠವಾದ ಹಿಟ್ಲರ್-ಜರ್ಮನಿಯೊಡನೆ ರಶಿಯವು ಹೋರಾಟ ನಡೆಯಿಸಿ, ತನ್ನ ಸತ್ವವನ್ನು ತೋರಿಸಿ, ತನ್ನ ಅಸ್ತಿತ್ವವನ್ನು ಎಂದಿನಂತೆಯೇ ಉಳಿಸಿಕೊಂಡು ಬಾಳಬೇಕೆಂದು ಅವ್ಯಾಹತವಾಗಿ ಹೆಣಗಾಡುತ್ತಲಿದೆ. ಇಂಥ ರಾಷ್ಟ್ರವನ್ನು ನಿರ್ಮಾಣಮಾಡಿದ ಶ್ರೇಯಸ್ಸು ಯಾರಿಗೆ ಸಲ್ಲಬೇಕೋ ಅಂಥ ಧೀರೋದಾತ್ತನಾದ ಸ್ಟಾಲಿನ್ ಮಹಾಪುರುಷನ ಚರಿತ್ರೆಯೇ ಈ 'ಉಕ್ಕಿನ ಮನುಷ್ಯ.'

ಈ ಯುದ್ಧಮಯ ಕಾಲದಲ್ಲಿ ಇಂಥ ರಾಷ್ಟ್ರನಿರ್ಮಾಪಕನ ಚರಿತ್ರೆಯು ಅವಶ್ಯವಾಗಿ ಓದಲೇ ಯೋಗ್ಯವೆಂದು ನಾವು ಭಾವಿಸಿ ಇದನ್ನು ಪ್ರಕಟಿಸಿದ್ದೇವೆ. ಇದನ್ನು ನಮಗೆ ಬರೆದುಕೊಟ್ಟಂಥ ಶ್ರೀ. ಎಂ. ಹರಿದಾಸ ಇವರಿಗೆ ನಾವು ಅತ್ಯಂತ ಉಪಕೃತರಾಗಿರುವೆವು. ಶ್ರೀ. ಹರಿದಾಸರು ತಮ್ಮ ದೈನಂದಿನ ಕಾರ್ಯಕಲಾಪಗಳ ಶ್ರಮವನ್ನು ಲೆಕ್ಕಿಸದೆ, ಇದನ್ನು ನಮಗಾಗಿ ಅತ್ಯಂತ ಪರಿಶ್ರಮದಿಂದ ಬರೆದುಕೊಟ್ಟಿದ್ದಾರೆ. ಇವರು ಇನ್ನೂ ತೀರ ತರುಣರು. ಜಗತ್ತಿನಲ್ಲಿ ಈಗ ಉದ್ಭೂತವಾದ ಅನೇಕ ಮಹತ್ವದ ಸಮಸ್ಯೆಗಳನ್ನು ಇವರು ಸೂಕ್ಷ್ಮರೀತಿಯಿಂದ, ಸಂಯಮದಿಂದ ತರ್ಕಿಸಿ ತಮ್ಮ ವಿಚಾರಲಹರಿಗಳನ್ನು ರೂಪಿಸಿಗೊಳ್ಳುತ್ತಿದ್ದಾರೆ. ಇಂಥವರು ಇನ್ನೂ ಅನೇಕ ಗ್ರಂಥಗಳನ್ನು ಕನ್ನಡಿಗರಿಗೆ ನೀಡಲೆಂದು ಹಾರೈಸುತ್ತೇವೆ. ಇವರು ಈ ಕೃತಿಯನ್ನು ನಮಗಾಗಿ ದಯಪಾಲಿಸಿದ್ದಕ್ಕೆ ಮಿಂಚಿನ ಬಳ್ಳಿಯು ಹೆಮ್ಮೆ ಪಡುತ್ತಲಿದೆ.

ಎಂಥ ದುರ್ಘಟ ಕಾಲವಿದು! ಎಂದು ಎಲ್ಲರೂ ಬಾಯಿ ಬಾಯಿ ಬಿಡುತ್ತಲಿದ್ದಾರೆ. ದಿನದಿನಕ್ಕೆ ಎಲ್ಲವೂ ದುರ್ಮಿಳವಾಗಿ ದೊರೆಯುತ್ತಿದೆ. ಅದರಲ್ಲಿಯಂತೂ ಕಾಗದದ ಕೊರತೆ ಹೇಳತೀರದು. ಆದರೂ ನಾವು ಧೈರ್ಯ

ದಿಂದ ನಮ್ಮ ಕೃತಿಗಳನ್ನು ಪ್ರಕಟಿಸುತ್ತ ಸಾಗಿದ್ದೇವೆ. ಇದೇ ವರುಷವೇ ಚಂದಾ ಹಣವನ್ನು ಹೆಚ್ಚಿಸುವ ವಿಚಾರವಿತ್ತು. ಆದರೂ ನಾವು ಚಂದಾ ಹಣ ಹೆಚ್ಚಿಸದೆ ಬಿಡಿ ಪ್ರತಿಗಳ ಬೆಲೆ ಹೆಚ್ಚಿಸಿದ್ದೇವೆ. ಇದರ ಸೌಲಭ್ಯವನ್ನರಿತು ಚಂದಾದಾರರಾಗಿ ಸಹಾಯ ನೀಡಬೇಕೆಂದು ಭಾಷಾಭಿಮಾನಿಗಳಲ್ಲಿ ಬೇಡಿಕೊಳ್ಳುತ್ತೇವೆ.

ಈ ವರ್ಷದ ಇನ್ನೊಂದು ಪುಸ್ತಕ ಪ್ರಕಟವಾದರೆ ಈ ವರುಷ ಮುಗಿದಂತಾಯಿತು. ಆ ಪುಸ್ತಕದಲ್ಲಿ ಮುಂದಿನ ವರುಷದ ಚಂದಾ ಹಣ ಹೆಚ್ಚಿಸಿದ ವಿಷಯವನ್ನು ಬರೆಯುತ್ತೇವೆ. ಎಲ್ಲರೂ ಗಮನಿಸಬೇಕಾಗಿ ಬಿನ್ನಹ.

—ಪ್ರಕಾಶಕರು

## ಪರಿವಿಡಿ

# ಲೇಖಕನ ಅರಿಕೆ



ಗಾಂಧೀಜಿ ಆಶ್ರಮದಲ್ಲಿ (ಸೆರೆಮನೆಯಲ್ಲಿ) ಇದ್ದಾಗ ಸೋವಿಯೆಟ್ ಯೂನಿಯನ್ ಮತ್ತು ಅದರ ನಾಯಕನ ಚರಿತೆಯನ್ನು ಅಭ್ಯಸಿಸುತ್ತಿದ್ದೆ. ಶ್ರೀ. ಬುರ್ಲಿಯವರು ಒಂದು ಆದಕ್ಕೊಂದು ಚೇತನಸ್ವರೂಪ ಕೊಟ್ಟರು. ಅದರಿಂದಲೇ ಇಂದು ಈ ಪುಸ್ತಕವು ಹೊರಬಿದ್ದಿದೆ. ಮಿಂಚಿನ ಬಳ್ಳಿಯ ಹಣತೆಯ ಸರದಲ್ಲಿ ಈ ಮಿಂಚುಹುಳುವು ಬೆಳಗುವಂತೆ ಮಾಡಿದುದಕ್ಕಾಗಿ ಶ್ರೀ. ಬುರ್ಲಿಯವರಿಗೂ, ಮಿತ್ರ ಚುಳಕಿಯವರಿಗೂ ಋಣಿ.

'ಉಕ್ಕಿನ ಮನುಷ್ಯ'ನ ಚಿತ್ರವನ್ನು ಕನ್ನಡನಾಡಿನ ನನ್ನ ಅಣ್ಣತಮ್ಮಂದಿರ, ಅಕ್ಕತಂಗಿಯರ ತಾವರೆ ಕೈಗಳಲ್ಲಿಟ್ಟಿದ್ದೇನೆ. ನಮ್ಮ ರಾಷ್ಟ್ರದ ವಿಮೋಚನೆಗಾಗಿ ನಮ್ಮ ಜನಾಂಗದ ಉದ್ಧಾರಕ್ಕಾಗಿ ಬದ್ಧಕಂಕಣರಾಗಿರೆಂದೇ ನನ್ನರಿಕೆ. ಈ ದೃಷ್ಟಿಯಿಂದ ಸ್ಟಾಲಿನ್‌ನ ವ್ಯಕ್ತಿತ್ವವು ಪ್ರೇರಕವಾದರೆ ನನ್ನ ಆಶೆ ಈಡೇರಿದಂತೆಯೇ ಸರಿ.

ಹುಬ್ಬಳ್ಳಿ, ೧೦-೫-೪೪ — ಎಂ. ಹರಿದಾಸ

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧ | ೧ | ಸರಕಾರವ್ರು | ಸರಕಾರವು |
| ೧ | ೭ | ನಾಡಿದ | ಆಡಿದ |
| ೭ | ೬ | ಡಿಸೆಂಬರ ೨೩ನೇ | ಡಿಸೆಂಬರ ೨೧ನೇ |
| ೭ | ೨೫ | ಜುಗಶಪಿಲ್ಲಿ | ಜುಗುಶಪಿಲ್ಲಿ |
| ೩೫ | ೨೦ | ಟಿಫ್ಲಿಸ್ | ಟಿಫ್ಲಿಸ್ |
| ೫೨ | ೮ | ಜಾಗತಿಕ ಯುದ್ಧವಲ್ಲ | ಜಾಗತಿಕ ಸ್ವಾತಂತ್ರ್ಯ ಯುದ್ಧವಲ್ಲ |
| ೬೫ | ೯ | ಉಕ್ರೋಸಿಯಾ ಪ್ರಾಂತ | ಉಕ್ರೇಸಿಯಾ ಪ್ರಾಂತ |
| ೭೪ | ೧೮ | ಒಳಸಂಚುಗಾರ ತೋಫಿಗೆ | ಒಳಸಂಚುಗಾರರ ತೋಫಿಗೆ |
| ೭೮ | ೨೨ | ಮಾತಿ ತ್ಯಾಗ | ಮಾಡಿದ ತ್ಯಾಗ |
| ೮೧ | ೧ | ಪೂರದವರೆಂಬುದೂ | ಪೂರದವರಾರೆಂಬುದೂ |
| ೯೭ | ೨೦ | ಕೊಪ್ಪೊಸೊವೊಲ್ಕ | ಕೊಪೊಸೊವೊಸ್ಕ |
| ೧೧೨ | ೬ | ಜಮೀನ್ದಾರರ, | ಜಮೀನ್ದಾರರಲ್ಲಿ, |
| ೧೧೪ | ೧೩ | ಪಿಚ್ಛೇದನಕ್ಕಾ ಅರ್ಜಿ | ಪಿಚ್ಛೇದನಕ್ಕೂ ಅರ್ಜಿ |
| ೧೧೯ | ೨೨ | ಹೊಟ್ಟೆ ಹೊರೆದುಕೊಂಡರು | ಹೊಟ್ಟೆ ಹೊರೆದುಕೊಂಡಳು |
| ೧೨೭ | ೧೩ | ಗರ್ಭಿಣಿಯಾದೊಡನೆಯೇ | ಗರ್ಭಿಣಿಯುರಾದೊಡನೆಯೇ |
| ೧೩೨ | ೭ | ಜಿನೊವಿಲ್ | ಜಿನೊವಿವ್ |
| ೧೪[illegible] | ೨೫ | ಆ್ಯಂಟಿಕಮಿಂಟನ್ನ | ಆ್ಯಂಟಿಕಮಿಂಟರ್ನ್ |

—

## ಉಕ್ಕಿನ ಮನುಷ್ಯ—ಸ್ಟಾಲಿನ್



“ ಜಾಗತಿಕ ಸಾಮ್ಯವಾದಕ್ಕಾಗಿ ನೆತ್ತರಿನ ಕೊನೆಯ
ಹನಿಯನ್ನು ಸುರಿಸಲು ಸಿದ್ಧನಿದ್ದೇನೆ ”

ವೀರಮಾತೆ—ಕೆಥೆರಿನಾ



ಸ್ಟಾಲಿನ್ನನ ದೇಹದಾರ್ಢ್ಯ, ಛಲ, ಧೈರ್ಯ ಎಲ್ಲವೂ
ತಾಯಿಯಿಂದ ಇಳಿದು ಬಂದ ನಿಧಿ

# ಉಕ್ಕಿನ ಮನುಷ್ಯ



## ಸ್ಟಾಲಿನ್ನನ ವ್ಯಕ್ತಿತ್ವ

'ಮಾತು, ಮಾತು, ಬರೇ ಪೊಳ್ಳುಮಾತು; ಗಾಳಿ ಮಾತು. ಸರಕಾರವು ದೇಶದಲ್ಲಿ ನೆತ್ತರದ ಕಾಲುವೆಯನ್ನು ಹರಿಸಿರುವಾಗ ಅದರೊಡನೆ ಸ್ನೇಹವೇ! ಜನಸಾಮಾನ್ಯರ ಮತದಾನ-ಹಕ್ಕನ್ನು ಮನ್ನಿಸದ ರಾಜ್ಯಘಟನೆಯನ್ನು ಸ್ವೀಕರಿಸುವುದೇ? ಛೇ, ಎಂದೆಂದಿಗೂ ಆಗಹೋಗದಮಾತು. ಸಂಧಾನ ವಿಲ್ಲ—ಸಂಗ್ರಾಮವೇ ಸರಿ. ಸಶಸ್ತ್ರಬಂಡಾಯವೇ ಗತಿ—ರಶಿಯಕ್ಕೆ ಆಗ ಬೇಕಾದ ಮಂಗಲಾರತಿ'

ತಾಮ್ಮರ್ಫೋರ್ ಕ್ರಾಂತಿಕಾರರ ಸಭೆಯಲ್ಲಿ ಜೋಸೆಫ್ ಆಡಿದ ವೀರಾವೇಶದ ನುಡಿಗಳಿವು. ಅವನ ಈ ಗುಡುಗಿಗೆ ಸಭೆ ನಡುಗಿತು. ಎಲ್ಲರೂ ಮುಗ್ಧರಾಗಿ ಹೋದರು. ಅವನ ಗಾಂಭೀರ್ಯ, ಭಾವವೈಖರಿ ಕಂಡು ಆ ಮಹಾ ಲೆನಿನ್ ಕೂಡಾ ತಲೆದೂಗಿ ರಶಿಯದ ಭಾಗ್ಯಭಾನು ಈತನೇ ಎಂದು ಮೈದಡವಿದನಂತೆ!

ಲೆನಿನ್‌ನ ಮಾತು ಅಕ್ಷರಶಃ ನಿಜವಾಗಿ ಪರಿಣಮಿಸಿತು. ಜೋಸೆಫ್‌ನು ದೇಶವತ್ಸಲನಾಗಿ ಅಹೋರಾತ್ರಿ ದುಡಿದ. ಅಖಿಲ ರಶಿಯದ ಕಣ್ಣುಗೊಂಬೆ ಯಾದ. ತನ್ನ ಸ್ವಪ್ರಯತ್ನದಿಂದ, ಸ್ವಸಾಹಸದಿಂದ, ಸೇವಾತ್ಯಾಗಗಳಿಂದ ಒಂದೊಂದೇ ಸೋಪಾನವನ್ನೇರಿ ಅತ್ಯುನ್ನತ ಪದವಿಗೇರಿದ. ರಶಿಯದ ಸರ್ವಾಧಿಕಾರಿಯೂ ಆದ. ರಶಿಯದ ಅನಭಿಷಿಕ್ತ ದೊರೆಯೆಂದರೂ ಸರಿಯೆ. ಹದಿನೆಂಟು ಕೋಟಿ ಪ್ರಜೆಗಳ ಮಧ್ಯೆ ಜೋಸೆಫನು ತಾರೆಗಳ ನಡುವಿನ ಚಂದ್ರ

ನಂತೆ ವಿರಾಜಮಾನನಾಗಿದ್ದಾನೆ. ಈ ನಕ್ಷತ್ರದ ಪ್ರಭೆ ಭೂಲೋಕದ ಜನರ ಕಣ್ಣನ್ನು ಕುಕ್ಕಿದೆ; ಕುಕ್ಕುತ್ತಿದೆ. ಈ ಬೆಳಕು ಕರುಣೆಯಿಂದ ಕೈಹಿಡಿದು ನಡೆಸುವ ಕೈದೀವಿಗೆಯಾಗಲೆಂದು ಮಾನವಕೋಟಿಯೆಲ್ಲ ಈ ಮಹಾ ಪುರುಷನ ಕಡೆ ಕೈಚಾಚುತ್ತಿದೆ.

## ವೀರನ ಬಾಳು

ಬಾಲ್ಯದಲ್ಲೇ ದೇಶದ ಹೀನಸ್ಥಿತಿ, ಜನರ ಗೋಳು ಕಂಡು ಜೊಸೆಫನ ಮನಸ್ಸು ತಲ್ಲಣಗೊಂಡಿತು. ಜೀವ ಈ ರೀತಿ ಕುದಿಯುತ್ತಿದ್ದಾಗ ಸಾಮ್ಯವಾದದ ಗಂಧ-ಗಾಳಿ ಬೀಸಿತು. ಆ ವಿಷಯ ವಿಚಾರಗಳು ಅವನ ಹೃದಯಗಹ್ವರ ಸೇರಿದುವು. ದಿನದಿನಕ್ಕೆ ಅದರ ಮೇಲಿನ ಶ್ರದ್ಧೆ ಬೆಳೆಯಿತು. ತನ್ನ ಜೀವನದ ಆದರ್ಶವಾಗಿಯೂ ಅದನ್ನು ಜೊಸೆಫ್ ಆರಿಸಿಕೊಂಡ. ಆಮೇಲೆ ಈ ಸಂಕಲ್ಪಸಿದ್ಧಿಗಾಗಿ ಬಡಿದಾಡಿದ. ಅವನ ಈ ಹೋರಾಟವು ಬಹಳ ಘನವಾದುದು. ಅದೊಂದು ದೊಡ್ಡ ತಪಸ್ಸೆಂದರೂ ಅತಿಶಯೋಕ್ತಿಯಾಗಲಿಕ್ಕಿಲ್ಲ. ಈ ಧ್ಯೇಯಸಾಧನೆಯ ಪಥದಲ್ಲಿ ಬಂದ ಅಡ್ಡಿ ಆತಂಕಗಳನ್ನು ಅರಿತರೆ ಅದೆಷ್ಟು ಘೋರವಾದುದೆಂದು ಮನವರಿಕೆಯಾಗುತ್ತದೆ. ಶಿಕ್ಷೆ, ಕಾರಾಗೃಹವಾಸ, ದೇಶಭ್ರಷ್ಟತೆ ಮೊದಲಾದ ಹಿಂಸೆ, ಅತ್ಯಾಚಾರ, ದಬ್ಬಾಳಿಕೆಗಳಿಗೆ ಅವನು ಈಡಾದ. ಮನೆಯಿಲ್ಲದೆ ಊರೂರು ಅಲೆದು, ಕೈಗೆ ಸಿಕ್ಕಿದುದನ್ನು ಉಂಡು ತಿಂದು ವನವಾಸ ಜೀವನ ನಡೆಸಿದ ಕೌರವನ ಕಣ್ಣಿಗೆ ಬೀಳದಂತೆ ವಿರಾಟನಗರಿಯಲ್ಲಿ ಅಜ್ಞಾತವ್ಯಕ್ತಿಗಳಾಗಿ ಬಾಳಿದ ಪಾಂಡವರ ಸ್ಥಿತಿ ಜೊಸೆಫನಿಗೂ ಒದಗಿದೆ. ಪೋಲೀಸರ ದೃಷ್ಟಿಯಿಂದ ಪಾರಾಗಲು ಅವನು ಕೋಬ, ಸಿಜಾರ್ಜ್, ಚಿಜಿಕೊವ್, ಇವನೊವಿಚ್ ಎಂಬ ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು ತಲೆ ತಪ್ಪಿಸಿಕೊಂಡ. ಇದರಂತೆ ಇನ್ನೂ ಅನೇಕ ವಿಪತ್ತುಗಳು ಸಾಗರದ ಅಲೆಗಳಂತೆ ಅವನ ಜೀವನದ ದಡವನ್ನು ಅಪ್ಪಳಿಸಿವೆ. ಅಂಜುಕುಳಿಜನವಾಗುತ್ತಿದ್ದರೆ ಹೇಳಹೆಸರೂ ಉಳಿಯುತ್ತಿದ್ದಿಲ್ಲ. ಜೊಸೆಫನು ಮಾತ್ರ ಕುಸಿಯಲಿಲ್ಲ. ಬಂಡೆಗಲ್ಲಿನಂತೆ ಅಚಲವಾಗಿ ಎದೆಗೊಟ್ಟು ನಿಂತ. ಅವನ ಬಾಳು ಕೈಸೋತುದಲ್ಲ. ಸಂಕಟಗಳಿಗೆ ಜೀವಜೀವನವನ್ನು ಒಡ್ಡಿ, ಸಹಿಸಿ, ಜಯಿಸಿದ ವೀರನ ಬಾಳು.

**ಲೆನಿನ್‌ನ ನಾಮಕರಣ**

ಜೋಸೆಫನ ಈ ಕಾಲದ ಹೋರಾಟವು ಬಹಳ ಅದ್ಭುತ. ಒಂದು ದೊಡ್ಡ ರೋಮಾಂಚಕಾರಿ ಕಥೆ; ಕಾದಂಬರಿಯಂತಿದೆ. ಯಾವುದಕ್ಕೂ ಅವನು ಒಗ್ಗಲಾರ. ಯಾವುದರಿಂದಲೂ ಅವನ ಚೇತನ ಕುಗ್ಗದು. ಉಕ್ಕಿನ ಹಾಗೆಯೇ. ಇದನ್ನು ಕಂಡ ಲೆನಿನ್ ಮೆಚ್ಚಿ 'ಸ್ಟಾಲಿನ್' ಎಂಬ ಹೆಸರಿನಿಂದ ಕರೆಯತೊಡಗಿದನು. ಲೆನಿನ್‌ನ ಈ ನಾಮಕರಣವು ಬಹಳ ತಾರ್ಕಿಕ. ಜೋಸೆಫನನ್ನು ಚೆನ್ನಾಗಿ ಬಲ್ಲವರಿಗೂ ಒಪ್ಪಲಾರದು. ಏಕೆಂದರೆ ರಶಿಯನ ಭಾಷೆಯಲ್ಲಿ ಈ ಶಬ್ದಕ್ಕೆ 'ಉಕ್ಕಿನ ಮನುಷ್ಯ' ನೆಂದೇ ಅರ್ಥ. ಅಂದಿನಿಂದ ಉಳಿದೆಲ್ಲ ಹೆಸರುಗಳು ಹಿನ್ನೆಲೆ ಸೇರಿ ಇದೊಂದೇ ಹೆಸರು ಪ್ರಸಿದ್ಧಿ ಹೊಂದಿತು.

ಸ್ಟಾಲಿನ್‌ನನ್ನು ಕಂಡವರು ಮಾತ್ರ ಆ ಉಕ್ಕಿನ ಶಕ್ತಿ ಅವನ ದೇಹದಲ್ಲಿಯೇ ಮಿದುಳಿನಲ್ಲಿಯೇ ಎಂದು ಗಲಿಬಿಲಿಗೊಂಡಿದ್ದಾರೆ. ಎರಡನ್ನೂ ಪಡೆದ ಜೀವಿಗಳು ಕಡಮೆ. ಸ್ಟಾಲಿನ್ ಆ ಭಾಗ್ಯಪಡೆದುಕೊಂಡು ಬಂದ ಪುಣ್ಯಾತ್ಮ. ಅವನ ಶರೀರ ಸ್ವಲ್ಪ ಸ್ಥೂಲ. ಗಿಡ್ಡ, ಆಳು. ಆದರೆ ಮೈಕಟ್ಟು ಚೆನ್ನಾಗಿದೆ. ಚಂದ್ರಕಾಂತಶಿಲೆಯಿಂದ ಕೆತ್ತಿದ ವಿಗ್ರಹದಂತಿದೆ ಆ ಮೋರೆ. ಆ ಶಿಲಾಮುಖದಲ್ಲಿ ಕಾಣುವ ಭಾವವು, ಭೀಷಣ. ದೃಢಸಂಕಲ್ಪವುಳ್ಳ ಮನುಷ್ಯ ಈತನೆಂದು ಎದ್ದುಕಾಣುತ್ತಿದೆ. ಹಿಮಾಲಯದಂತೆ ಅಚಲ. ಸ್ಥಿರಬುದ್ಧಿಯುಳ್ಳ ವ್ಯಕ್ತಿ ಸ್ಟಾಲಿನ್. ಒಮ್ಮೆ ಒಂದು ನಿರ್ಧಾರಕ್ಕೆ ಬಂದ ಮೇಲೆ ಆಕಾಶವು ಕಳಚಿಬಿದ್ದರೂ ಅವನ ಮನಸ್ಸು ಬದಲಾಗದು. ಒಂದುದು ಬರಲಿ, ಅದಕ್ಕೆ ಎದೆಗೊಟ್ಟು ನಿಲ್ಲುವ ಕೆಚ್ಚು; ಛಲ. ವಜ್ರದೇಹದಲ್ಲಿ ಇಂಥ ಕಠೋರ ಮನಸ್ಸಿದೆ. ಅಂದ ಬಳಿಕ ಅವನನ್ನು ಉಕ್ಕಿನ ಮನುಷ್ಯನೆಂದು ಲೆನಿನ್ ಕರೆದುದರಲ್ಲಿ ಅತ್ಯುಕ್ತಿಯಾದರೂ ಏನು?

**ರಾಷ್ಟ್ರನಿರ್ಮಾಣ**

ಸ್ಟಾಲಿನ್ನನ ಜೀವನಸಂಗ್ರಾಮಕ್ಕಿಂತಲೂ ದೊಡ್ಡದು ಅವನ ರಾಷ್ಟ್ರ ಪರಿಷ್ಕರಣ ಕಾರ್ಯ. ಕಾರ್ಲಮಾರ್ಕ್ಸನು ಸಾಮ್ಯವಾದದ ಆದರ್ಶ ಜೀವಿ; ಆ ಕಿಡಿ ಬಿತ್ತಿದ ಮಹಾತ್ಮ. ಅದು ಕನಸಿನ ಗಂಟಲ್ಲ; ಸ್ಥಾಪಿಸಲು ಶಕ್ಯವೆಂದು ನಂಬಿ, ರಶಿಯದಲ್ಲಿ ತಂದು ಚೆಲ್ಲಿದ ಮಹಾಮಹಿಮನು ಲೆನಿನ್.

ಆ ಕಿಡಿ ನೊಂದು ಹೋಗದಂತೆ ತನ್ನ ಜೀವನದ ಹಣತೆಯನ್ನೇ ಮಾಡಿ ಸೇವಾತ್ಯಾಗಗಳೆಂಬ ಸೊಡರೆಣ್ಣೆ ಎರೆದು, ಅದು ನಂದಾದೀಪವಾಗುವಂತೆ ಬೆಳಗಿಸಿದ ಯಶಸ್ಸು, ಸಾಹಸ, ಬಲ್ಮೆ ಎಲ್ಲ ಸ್ಟಾಲಿನ್ನನದು. ನವ ರಶಿಯಾ ರಾಷ್ಟ್ರದ ನಿರ್ಮಾಣಪುರುಷನು ಸ್ಟಾಲಿನ್.

ಇಸ್ರಾಯೇಲ ಗುಲಾಮರನ್ನು ಮೋಶೆ ವಿಮೋಚನೆಗೊಳಿಸಿದನೆಂದು ನಾವು ಓದಿದ್ದೇವೆ. ಹತ್ತಿಪ್ಪತ್ತೈದು ವರುಷಗಳ ಹಿಂದೆ ರಶಿಯದ ಸ್ಥಿತಿ ಯಾದರೂ ಹೀಗೆಯೇ ಇತ್ತು. ದೇಶ ಬಹಳ ಹಿಂದುಳಿದುದು. ಜನ ಕಣ್ಣಿದ್ದೂ ಕುರುಡರು. ಬಡತನ, ರೋಗರುಜೆ, ದಾಸ್ಯಗಳಿಂದ ತೊಳಲಿ ಬಳಲುತ್ತಿರುವ ಜನಾಂಗ. ಅಜ್ಞಾನಾಂಧಕಾರ, ಮಾನವನ ಪ್ರಗತಿಗೆ ಅಡ್ಡಿ ಯಾಗಿರುವ ಸಂಕೋಲೆಗಳು. ಈ ಪಾಶಗಳಿಂದ ಒದ್ದಾಡುತ್ತಿರುವ ಸಕಲ ಗುಲಾಮರೇ ಸೈ. ಯುಗಯುಗಾಂತರಗಳ ಆ ಬಂಧನದಿಂದ ರಶಿಯನ ರನ್ನು ಬಿಡಿಸಿ ವಿಮೋಚನೆಗೊಳಿಸಿ, ಉದ್ಧರಿಸಿದ ಈ ಜೊಸೆಫನು ಆ ಮೋಶೆಗೆ ಏನು ಕಡಿಮೆ ? ಪ್ರಾಯಶಃ ಸ್ಟಾಲಿನ್ನನ ಕೆಲಸ, ವಿಶ್ವದ ಇತಿ ಹಾಸದಲ್ಲಿ ಯಾವ ದೊರೆ, ದೈವ, ದೇವರು ಮಾಡದ ಮಹತ್ಕಾರ್ಯ. ಮಹಾಯಜ್ಞವೆಂದರೂ ಸರಿಯೆ.

## ಕರ್ಮಯೋಗಿ

ಕಳೆದ ೪೦ ವರ್ಷಗಳಿಂದ ಸ್ಟಾಲಿನ್ ದೇಶಸೇವಾಕಾರ್ಯತತ್ಪರನಾಗಿ ದ್ದಾನೆ. ಕೈಯಲ್ಲಿ ರಾಜ್ಯಸೂತ್ರವಿದೆ. ಬಯಸುತ್ತಿದ್ದರೆ ಅವನು ಮತ್ತೊಬ್ಬ ಘಜನಿ ಮಹಮ್ಮದನಾಗಬಹುದಿತ್ತು. ಬಂಗಾರದ ಬಟ್ಟಲಲ್ಲಿ ಉಣಬಹು ದಿತ್ತು; ತಿನಬಹುದಿತ್ತು. ಆದರೆ ಇವು ಯಾವುವೂ ಇಲ್ಲ. ನೆಪೋಲಿಯನ್ನ ನಂತೆ ಸ್ಟಾಲಿನ್ ಆಡಂಬರ ಜೀವಿಯಲ್ಲ. ಮುಸೋಲಿನಿಯಂತೆ ಶೃಂಗಾರ ರಾವಣನೂ ಅಲ್ಲ. ಅವನದು ಸರಳಜೀವನ. ಇರುವುದು ಸಾಮಾನ್ಯ ಜನ ರಂತೆ. ನಡೆನುಡಿಯಲ್ಲಿ, ವೇಷಭೂಷಣದಲ್ಲಿ ವಿಲಾಸದ ಕುರುಹುಗಳು ಕಾಣಿ ಸವು. ಯಾವ ರಾಯನ ಕಾಲಕ್ಕೋ ಮಾಡಿಸಿದ ಹಸುರು ಚೊಣ್ಣವೊಂದಿದೆ. ಹಳೇಕಾಲದ ಕೋಟೂ ಒಂದಿದೆ. ಹೊಸ ಉಡಿಗೆ-ತೊಡಿಗೆಗಳಲ್ಲಿ ಮೆರೆಯಲು ಅವನಿಗೆ ಇಷ್ಟವಿಲ್ಲ. ಆಶೆ, ಲೋಭ, ಸಂಪತ್ತುಗಳು ಅವನ ಸಮೀಪ ಸುಳಿ

ದಿಲ್ಲ. ಅವನು ಕರ್ಮಯೋಗಿ. ದೇಶದ ಕಲ್ಯಾಣಕ್ಕಾಗಿ ಕಾರ್ಯಪ್ರವೃತ್ತನು ಆಗಿದ್ದಾನೆ.

## ಕೌಟುಂಬಿಕ ಜೀವನ

ಕೌಟುಂಬಿಕ ಹೊರೆ ಸ್ಟಾಲಿನ್‌ನ ಹೆಗಲ ಮೇಲಿಲ್ಲ; ಪ್ರಾಯಶಃ ಪರಿವ್ರಾಜಕ ಕಾರ್ಯಕ್ಕೆ ಇದರಿಂದ ಅವನಿಗೆ ಅನುಕೂಲವಾಗಿದ್ದರೂ ಆಗಿರಬಹುದು. ಆದರೆ ಇಷ್ಟರಿಂದಲೇ ಅವನು ಬಾಲಸನ್ಯಾಸಿಯೆಂದು ತಿಳಿಯುವುದು ತಪ್ಪು. ಸ್ಟಾಲಿನ್ ಎರಡು ಬಾರಿ ವಿವಾಹವಾಗಿದ್ದಾನೆ. ಮೊದಲನೆಯ ಬಾರಿ ಮದುವೆಯಾದುದು ೧೯೦೩ರಲ್ಲಿ. 'ಕೆಥೆರಿನಾ ಸ್ವಾನಿ' ಅವನ ಹೆಂಡತಿ. ಈಕೆ ಒಂದು ಗಂಡು ಮಗುವನ್ನು ಹಡೆದು ನಿಮೋನಿಯಾಜ್ವರದಿಂದ ೧೯೦೭ರಲ್ಲಿ ತೀರಿಕೊಂಡಳು. ಈಗ ಈ ಹುಡುಗ 'ಯಶಾ'ನಿಗೆ ಇಪ್ಪತ್ತೆರಡು ವಯಸ್ಸು. ಇಂಜಿನಿಯರನಾಗಿದ್ದಾನೆ. ಕೆಥೆರಿನಾ ಅಗಲಿದ ಎರಡು ವರುಷಗಳ ಮೇಲೆ ಸ್ಟಾಲಿನ್ ನಾದಿಯಾ ನೆರೆಜೀವನಳನ್ನು ಕೈಹಿಡಿದ. ಈಕೆಯಿಂದ ಎರಡು ಮಕ್ಕಳು ಜನಿಸಿದುವು. ಮಗನ ಹೆಸರು ವಾಸ್ಯಾ. ಮಗಳಿಗೆ ಸ್ವೆತಲಾನಾ ಎಂಬ ಮುದ್ದು ಹೆಸರನ್ನಿಟ್ಟಿದ್ದಾನೆ. ದುರದೃಷ್ಟದಿಂದ ನಾದಿಯಾ ಕೂಡ ೧೯೩೨ರಲ್ಲಿ ಮೃತ್ಯುಮುಖ ಸೇರಿದಳು. ಅವಳ ಸಾವಿನ ಸಂಬಂಧವಾಗಿ ಒಂದು ದೊಡ್ಡ ದಂತಕಥೆಯೇ ಹಬ್ಬಿಕೊಂಡಿದೆ. ನಾದಿಯಾ ಶಬರಿಯಂತೆ ಎಲ್ಲ ಅನ್ನಪಾನಗಳ ಸವಿನೋಡಿ ಗಂಡನಿಗೆ ಉಣಬಡಿಸುತ್ತಿದ್ದಳಂತೆ. ಯಾರಾದರೂ ತನ್ನ ಪತಿಯನ್ನು ಕೊಲ್ಲಲು ವಿಷ ಹಾಕಬಹುದೆಂಬ ಅಂಜಿಕೆ ಅವಳಿಗೆ. ಹೀಗೆ ಮಾಡುತ್ತಿದ್ದಾಗಲೇ ಒಮ್ಮೆ ವಿಷಾನ್ನವನ್ನು ಭುಂಜಿಸಿ ಅವಳು ಹಾಸಿಗೆ ಹಿಡಿದುಬಿಟ್ಟಳು. ಸ್ವೆತಲಾನಳ ಮುದ್ದುಮೊಗ ನೋಡಿ ಸ್ಟಾಲಿನ್ ನಾದಿಯಾಳ ವಿರಹವನ್ನು ಸಹಿಸಿದ್ದಾನೆ. ಹೀಗೆನ್ನಲು ಕಾರಣವಿಷ್ಟೆ. ಮಗಳ ಮೇಲೆ ಅವನಿಗೆ ಬಾರೀ ಕೊಂಡಾಟ. ಅವಳೊಂದಿಗೆ ಊಟ ಮಾಡುವುದೆಂದರೆ ಅವನಿಗೆ ಬಲು ಇಷ್ಟ. ವಾಸ್ಯಾ ಕೂಡ ತಂದೆಯೊಡನೆ ವಾಸಿಸುತ್ತಿದ್ದಾನೆ. ಕ್ರೆಮಲಿನ್ ಕೋಟೆಯೇ ಅವರ ನಿವಾಸಸ್ಥಳ. ಈ ಕೋಟೆಯಲ್ಲಿ ೪೦,೬೦ ಮನೆಮಠಗಳಿವೆ. ಆದರೆ ಸ್ಟಾಲಿನ್ ಮತ್ತು ಅವನ ಸಂಸಾರ, ಮೂರು ಕೋಣೆಗಳನ್ನು ಮಾತ್ರ ಹಿಡಿದಿದ್ದಾರೆ. ಅವನ ಮನೆ

ಸ್ಥಿತಿಗತಿಯನ್ನು ನೋಡಿದರೆ ಈ ಕೋಣೆಗಳನ್ನು ಬಾಡಿಗೆಗೆ ಹಿಡಿದಿರಬೇಕೆಂದು ಅನ್ನಿಸುತ್ತಿದೆಯಂತೆ.

## ಜ್ಞಾನಿ

ಸ್ಟಾಲಿನ್ ಶಂಖಹುಳು. ಕ್ರೆಮ್ಲಿನ್ ಕೋಟೆಯಿಂದ ಹೊರಗೆ ಬರಲಾರ. ಬಂದರೆ ಅಮವಾಸೆಗೊಮ್ಮೆ ಹುಣ್ಣಿಮೆಗೊಮ್ಮೆ. ಆಗಲೂ ನಾಲಗೆ ಬಿಗಿ. ಮಿತಭಾಷಿ, ಗಂಭೀರ ಮನುಷ್ಯ. ೧೯೨೭ರಿಂದ ೩೭ರ ವರೆಗೆ ಏಳೆಂಟು ವಿದೇಶಿ ಸುದ್ದಿಗಾರರೊಡನೆ ಮಾತನಾಡಿದ್ದರೆ ವಿಶೇಷವಾಯಿತು. ಆದರೆ ಒಮ್ಮೆ ಸಂಭಾಷಣೆಗೆ ಕುಳಿತನೆಂದರೆ ೪, ೫, ೬ ತಾಸುಗಳ ವರೆಗೆ ಮಾತನಾಡುವನು. ಮಾತಿನಲ್ಲಿ ಶೃಂಗಾರವಿಲ್ಲ, ಸರಸವಿಲ್ಲ, ಎದೆಯ ಗುಹೆಯಿಂದ ಒಂದೊಂದೇ ಮಾತು ಮಾಣಿಕವನ್ನು ತೆಗೆದು, ತೂಗಿ ತೂಗಿ ಚೆಲ್ಲುವನೋ ಏನೋ ಎಂದೆನಿಸುತ್ತಿದೆ. ಅವನ ಪಾಂಡಿತ್ಯ ಅಗಾಧವಾದುದು. ಯಾವ ವಿಷಯ ಬೇಕು ? ಯಾವ ರಾಷ್ಟ್ರದ ವಿಚಾರ ಬೇಕು ? ಎಲ್ಲವೂ ತುದಿನಾಲಿಗೆಯಲ್ಲಿದೆ. ಅವನ ಅನುಭವವು ರಶಿಯದಷ್ಟೇ ವಿಶಾಲ. ಕಾಸ್ಪಿಯನ ಸಮುದ್ರದಷ್ಟೇ ಆಳ. ಇತಿಹಾಸ ಅವನ ಪ್ರೀತಿಯ ವಿಷಯ. ಶೇಕ್ಸ್‌ಪಿಯರ್, ಪ್ಲೇಟೋ, ಗಯಟೆ, ಚಾಸರ ಇವರ ಕೃತಿ ಕವನಗಳನ್ನು ಎತ್ತಿಕೊಂಡು ವಿಮರ್ಶಿಸ ಬಲ್ಲ. ರಾಜಕಾರಣದಲ್ಲಿ ಸ್ಟಾಲಿನ್‌ನಿಗಿದ್ದ ಹಿಡಿತ ಇನ್ನೊಬ್ಬರಿಗೆ ಉಂಟೋ ಇಲ್ಲವೋ !

## ಕೆಣಕಿ ಕೆಟ್ಟ ಹಿಟ್ಲರ್

ರಶಿಯವು ಲೋಕದಲ್ಲಿರುವ ಒಂದೇಒಂದಾದ ಸಾಮ್ಯವಾದೀರಾಷ್ಟ್ರ. ಆದರ ನೆರೆಹೊರೆಯಲ್ಲಿರುವ ಬಂಡವಲು ರಾಷ್ಟ್ರಗಳಿಗೆಲ್ಲ ಆದರ ಮೇಲೆ ದೃಷ್ಟಿ, ಹಗೆತನ. ಸಾಮ್ಯವಾದೀ ಬೀಜದ ಹುಟ್ಟಡಗಿಸಬೇಕೆಂಬ ಹುಚ್ಚು ಹುಮ್ಮಸ್ಸು ಆ ರಾಷ್ಟ್ರಗಳಿಗೆ. ಈ ದುರುದ್ದೇಶದಿಂದ ಹಿಟ್ಲರ್ ಇಂದು ರಶಿಯದ ಮೇಲೆ ದಂಡೆತ್ತಿ ಬಂದಿದ್ದಾನೆ. ಝೆಂಗಿಜ್‌ಖಾನ, ನೆಪೋಲಿಯನರ ನಂತರ ರಶಿಯಕ್ಕೆ ಈ ರೀತಿಯ ಗಂಡಾಂತರ ಬಂದುದು ಇಂದೇ ಸರಿ. ಈ ಕುತ್ತಿನಿಂದ ದೇಶವನ್ನು ಉಳಿಸಲು ಸ್ಟಾಲಿನ್ ಅಹೋರಾತ್ರಿ ದುಡಿಯುತ್ತಿದ್ದಾನೆ. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ಅಸಂಖ್ಯ ರಶಿಯನರು ಪ್ರಾಣವನ್ನರ್ಪಿಸಿರುವರು. ರಶಿ

ಯನರ ಧೈರ್ಯ, ಅವರ ಬಲಿದಾನದಿಂದ ಇಡೀ ಜಗತ್ತು ವಿಸ್ಮಯಗೊಂಡಿದೆ. ಅವರ ಪಂಥ ಪರಾಕ್ರಮಗಳಿಗೆ ತಲೆದೂಗಿದೆ. ಲಕ್ಷಗಟ್ಟಲೆ ಜೀವ ಕೊಟ್ಟು ರಶಿಯದ ಜೀವ ಉಳಿಸಬೇಕಾಗಿದೆ ಸ್ಟಾಲಿನ್. ಹತ್ತಿಪ್ಪತ್ತು ವರುಷಗಳಲ್ಲಿ ಅನ್ನ ನೀರು ತೊರೆದು, ರಕುತ ಸುರಿಸಿ ಕಟ್ಟಿದ ರಾಷ್ಟ್ರ! ಬಿಡಲಿಕ್ಕಾಗುತ್ತದೆಯೇ ? ಹಿಟ್ಲರ್, ಈ ಕಲಿಭೀಮನನ್ನು ಕೆಣಕಿ ಕೆಟ್ಟ.

ಸ್ಟಾಲಿನ್‌ನಿಗೆ ೬೪ ವರುಷಗಳು ತುಂಬಿದುವು. ೧೯೪೩ ಡಿಸೆಂಬರ ೨೧ನೇ ತಾರೀಖು ಅವನ ೬೫ನೇ ಜನ್ಮ ದಿನ. ರಶಿಯನರಿಗೆ ಅದೊಂದು ದೊಡ್ಡ ಹಬ್ಬ. ಬಹಳ ಸಂಭ್ರಮದಿಂದ ಈ ಉತ್ಸವವನ್ನಾಚರಿಸುವರು. ತಮ್ಮ ನಾಯಕನ ಮೇಲೆ ಅವರಿಗೆ ಅಷ್ಟೊಂದು ಆದರ. ಆದರೆ ಸ್ಟಾಲಿನ್ ಭಾಗ್ಯಶಾಲಿ. ಅವನ ದಿವ್ಯನಾಮ ಕಸ್ತೂರಿಯಂತೆ ಪ್ರಪಂಚದ ಎಲ್ಲ ಭಾಗಗಳಿಗೂ ವ್ಯಾಪಿಸಿದೆ. ದಾಸ್ಯಕೂಪದಲ್ಲಿ ತೊಳಲಾಡುವ ಹಿಂದುಸ್ಥಾನದ ರೈತರು, ಬಂಡವಲಗಾರರ ಕಾಲಡಿ ಬಿದ್ದಿರುವ ಅಮೇರಿಕದ ಕೂಲಿಕಾರರು, ಹಿಟ್ಲರನ ಮಂಗಮುಷ್ಟಿಯೊಳಗೆ ಸಿಕ್ಕಿರುವ ಯುರೋಪಿನ ಜನತೆ ಎಲ್ಲರೂ ಸ್ಟಾಲಿನ್ನನ ಹುಟ್ಟುಹಬ್ಬವನ್ನಾಚರಿಸಿ ಅವನ ಬಗ್ಗೆ ವಿಶ್ವಾಸದ ಮಾತುಗಳನ್ನಾಡುತ್ತಾರೆ. ಈ ಮಹಾನುಭಾವನಿಂದ ತಮ್ಮ ಮುಕ್ತಿಯಾಗಲಾರದೇ ಎಂದು ಅವರ ಹೃದಯದ ಒಳಗಿನ ಒಳಧ್ವನಿಯೊಂದು ಕೇಳಿಸುತ್ತಿದೆ.

---

## ಬಾಲ್ಯ, ವಿದ್ಯಾಭ್ಯಾಸ

ಸ್ಟಾಲಿನ್ ಏಶಿಯದ ಬೆಳಕು. ಕಾಕೇಶಿಯ ಬೆಟ್ಟದ ಜೀವ. ಜಾರ್ಜಿಯಾ ಪ್ರಾಂತಕ್ಕೆ ಸೇರಿದ ಗೋರಿ ನಗರವು ಅವನ ಜನ್ಮಸ್ಥಳ. ಅವನು ಹುಟ್ಟಿದುದು ೧೮೭೯ರಲ್ಲಿ. ಮಾತಾಪಿತರು ಈ ಸುಪುತ್ರನಿಗೆ ಜೊಸೆಫ್‌ನೆಂದು ನಾಮಕರಣ ಮಾಡಿದರು. ಜೊಸೆಫನು ರಾಜಕೀಯ ರಂಗಕ್ಕೆ ಕಾಲಿಟ್ಟ ಮೇಲೆ ಬೇರೆ ಬೇರೆ ಹೆಸರುಗಳನ್ನಿಟ್ಟುಕೊಂಡು ಪೋಲೀಸರ ಕಣ್ಣಿಗೆ ಮಣ್ಣೆರಚಿದುದು ಸರ್ವಶ್ರುತ.

**ತಂದೆ ತಾಯಿ**

ಸ್ಟಾಲಿನ್‌ನ ತಂದೆ ವಿಸ್ಸಾರಿಯೋನ ಜುಗುಶ್‌ವಿಲ್ಲಿ. ಅವನ ತಾಯಿಯ ಹೆಸರು ಕೆಥೆನಾ ಜೋರ್ಗವಾನಾ. ವಿಸ್ಸಾರಿಯೋನನು ಮೊಚ್ಚೆಗಾರ.

ಬೂಟು ಹೊಲಿದು ಜೀವನ ನಡೆಸುತ್ತಿದ್ದ. ಕೊನೆಕೊನೆಗೆ ಕಾರ್ಖಾನೆಯಲ್ಲಿ ಕೂಲಿಕಾರನಾಗಿಯೂ ದುಡಿದಿರುವನಂತೆ. ಅವನು ನಿರಕ್ಷರಕುಕ್ಷಿ. ಕೆಥೆರಿನಾ ಆದರೂ ಅಷ್ಟೆ. ಈ ಬಡ ದಂಪತಿಗಳಿಗೆ ಸ್ಟಾಲಿನ್‌ನೊಬ್ಬನೇ ಮಗನಲ್ಲ. ಇನ್ನೂ ಕೆಲವು ಹುಟ್ಟಿದ್ದುವು. ಆದರೆ ಬದುಕುವ ಋಣ ಬೇಕಲ್ಲ! ಅಳಿ ದುಳಿದವನು ಸ್ಟಾಲಿನನೊಬ್ಬನೇ. ಹೀಗಾಗಿ ಅವನ ತಂದೆ ತಾಯಿಗೆ ಪುತ್ರ ವಾತ್ಸಲ್ಯ ಬಹಳ. ದುರದೃಷ್ಟದಿಂದ, ಜೋಸೆಫನು ಜಗದ್ವಂದ್ಯ ವ್ಯಕ್ತಿ ಯಾಗುವ ವರೆಗೆ ವಿಸ್ಸಾರಿಯೋನು ಬದುಕಲಿಲ್ಲ. ಆ ಮಹಾ ತಾಯಿ ಮಾತ್ರ ಮಗನ ಶ್ರೇಯಸ್ಸನ್ನು ಕಂಡು ನಲಿದಾಡಿ, ೧೯೩೭ರಲ್ಲಿ ಟಿಫ್ಲಿಸ್ಸಿನಲ್ಲಿ ಲೀನ ಳಾದಳು. ಆದೇನೇ ಇರಲಿ ಈ ಗಂಡಹೆಂಡತಿ ಸ್ಟಾಲಿನ್‌ನ ಬಾಲ್ಯದಲ್ಲಿ ಅತಿ ಶಯ ಪ್ರೇಮ ತೋರಿದ್ದಾರೆ. ಕೆಥೆರಿನಾ ಮಗನನ್ನು ಅಗಲಿ ಇರಗೊಳಿಸ ಇರಲಾರಳು. ಈತ ತಾಯಿಯ ತೋಳತೊಟ್ಟಿಲ ಮಗುವಾಗಿ ಬೆಳೆದ. ಆ ತಾಯಿಯ ಕೈಗಳು ಸ್ಟಾಲಿನ್ನನ ಮೇಲೆ ತುಂಬಾ ಪರಿಣಾಮ ಮಾಡಿವೆ ಯೆಂದೆನ್ನುತ್ತಾರೆ. ಶಿವಾಜಿಯ ತಾಯಿ ಜೀಜಾಬಾಯಿಯಂತೆ ಈ ಮಹಾ ತಾಯಿಯ ಪ್ರಭಾವ ಸ್ಟಾಲಿನ್ನನ ಮೇಲೆ ಬಿದ್ದಿದೆಯೆಂದೆನ್ನುವವರುಂಟು.

### ಮಾತೃನಿಧಿ

ಕೆಥೆರಿನಾ ಒಕ್ಕಲಿಗರ ಹೆಣ್ಣುಮಗಳು. ಕಾಕೇಶಿಯಾ ಬೆಟ್ಟಗಳಲ್ಲಿ ವಾಸಿಸುತ್ತಿರುವ ಒಂದು ಪಂಗಡಕ್ಕೆ ಸೇರಿದ ಸ್ತ್ರೀ. ಗುಂಪುಗಟ್ಟಿ ಸಂಚರಿ ಸುವ ಈ ಜನ ದೃಢಕಾಯರು. ಹೆಣ್ಣು ಗಂಡು ಎಲ್ಲ ಧೀರರು. ಸ್ವಭಾ ವವೂ ಉಗ್ರ. ದಯೆ ದಾಕ್ಷಿಣ್ಯ ಕಡಮೆ. ಹಿಂಸಾಚರಣೆಗೆ ಹಿಂದುಮುಂದೆ ನೋಡವುದಿಲ್ಲ. ತಾಯಿಯಲ್ಲಿರುವ ಈ ಗುಣ ಲಕ್ಷಣವೆಲ್ಲ ಸ್ಟಾಲಿನ್ ಪಡೆ ದಿದ್ದಾನೆ. ತಂದೆಗಿಂತ ಅವನಲ್ಲಿ ತಾಯಿಯ ಹೋಲಿಕೆಯೇ ಹೆಚ್ಚಾಗಿದೆ. ಅವನ ದೇಹದಾರ್ಢ್ಯ, ಛಲ, ಎಲ್ಲವೂ ತಾಯಿಯಿಂದ ಇಳಿದುಬಂದ ನಿಧಿ.

### ಇಗರ್ಜಿ ಶಾಲೆಗೆ ಪ್ರವೇಶ

ಸ್ಟಾಲಿನ್ನನ ಮಾತಾಪಿತರಿಗೆ ಓದು ಬರಹ ಜ್ಞಾನವಿಲ್ಲ. ಆದರೆ ಮಗನು ವಿದ್ಯಾವಂತನಾಗಬೇಕೆಂಬ ಹಂಬಲ್ಲ, ಮನೆಯಲ್ಲೂ ಬಡತನ. ಬೆವರು ಸುರಿಸಿ ಗಳಿಸಿದ ಕೆಲವು ನಾಣ್ಯಗಳು ಉದರನಿಮಿತ್ತಕ್ಕೇ ಹರಹರ. ಫೀಕೊಟ್ಟು ವಿದ್ಯಾಭ್ಯಾಸ ನಡೆಸುವುದು ಕಠಿಣ. ಇದನ್ನರಿತ ವಿಸ್ಸಾರಿ

ಯೋನ ಸ್ಟಾಲಿನನ್ನು ಗೋರಿನಗರದಲ್ಲಿರುವ ಧರ್ಮಾರ್ಥ ಇಗರ್ಜಿ ಶಾಲೆಗೆ ಕಳಿಸಿಕೊಟ್ಟ. ಮಗನು ಪಾದ್ರಿಯಾಗಬೇಕೆಂದು ವಿಸ್ಸಾರಿಯೋನು ಬಯಸಿದಂತೆ ಕಾಣುತ್ತಿದೆ. ಆಂದಿನ ಕಾಲದಲ್ಲಿ ಧರ್ಮೋಪದೇಶಕರದು ಸುಖಜೀವನ. ಅವರಿಗೆ ಕೋಟೆಪೇಟೆಯಲ್ಲಿ ಮಾನಮನ್ನಣೆ. ವಿಲಾಸ, ವೈಭವದ ಜೀವನವನ್ನು ಪಾದ್ರಿಗಳು ನಡೆಸುತ್ತಿದ್ದರು. ಇದನ್ನರಿತರೆ ವಿಸ್ಸಾರಿಯೋನನ ಮನಸ್ಸು ಆ ಕಡೆ ಹರಿದುದರಲ್ಲಿ ಆಶ್ಚರ್ಯವೇನು? ಅಂತೂ ಇಂತೂ ಗೋರಿ ಪ್ರಾಥಮಿಕ ಶಾಲೆಯಲ್ಲಿ ಸ್ಟಾಲಿನ್ನನ ವಿದ್ಯಾಭ್ಯಾಸ ಆರಂಭವಾಯಿತು.

ಗೋರಿನಗರದ ಸುತ್ತುಮುತ್ತಲೂ ಗುಡ್ಡಗಾಡುಗಳಿವೆ. ಹಿಮಾಚ್ಛಾದಿತ ಗಿರಿಗಳಿಂದ, ನದಿನದಗಳಿಂದ ಗೋರಿನಗರವು ಕಣ್ಮನವನ್ನು ಸೆಳೆಯುವುದು. ಈ ಸೃಷ್ಟಿಸೌಂದರ್ಯವು ಸ್ಟಾಲಿನ್ನನ ಚಿತ್ತವನ್ನು ಆಕರ್ಷಿಸಿದುವೋ ಏನೋ! ಶಾಲೆಗೆ ಬಿಡುವಿದ್ದಾಗಲೆಲ್ಲ ಈ ಗುಡ್ಡಗಳಿಗೆ ಅವನ ಓಡಾಟ ಹೆಚ್ಚಿತು. ಅಲ್ಲಿಗೆ ತೆರಳಿದ ಸ್ಟಾಲಿನ್ನನು ಮಾಡಿದ ಕೆಲಸವೇನು ಗೊತ್ತೇ? ಪರ್ವತದ ತಪ್ಪಲು ಪ್ರದೇಶಗಳಲ್ಲಿ ಮೇಯುತ್ತಿದ್ದ ಕುರಿಗಳನ್ನು ಬೆದರಿಸುವುದು, ಬೆಟ್ಟ ವಾಸಿಗರ ಕುದುರೆಗಳ ಬೆಂಬತ್ತಿ ಅವುಗಳ ಬೆನ್ನನ್ನೇರಿ ಸವಾರಿ ಮಾಡುವುದು; ಇವೇ ಮೊದಲಾದ ಕಿಡಿಗೇಡಿತನ. ಇವನೊಂದಿಗೆ ಇನ್ನಿತರ ಸಮವಯಸ್ಕರಾದ ಹುಡುಗರೂ ಕೂಡಿಕೊಂಡರು. ಮತ್ತೆ ಕೇಳುವದೇನು? ಪುಂಡಾಟಿಕೆಗೇ ಆರಂಭ. ಎಲ್ಲರ ಬಾಯಿಂದಲೂ 'ತುಂಟ' ಎಂದೆನ್ನಿಸಿಕೊಂಡ. ಸಾಧು ಸತ್ಪುರುಷನಾಗಬೇಕೆಂಬ ತಂದೆಯ ಆಶೆಯೇನು? ಸ್ಟಾಲಿನ್ ಮಾಡುತಿದ್ದುದಾದರೂ ಏನು? ದಿನದಿಂದ ದಿನಕ್ಕೆ ಆ ಗುಡ್ಡಗಾಡು ಜನರ ಧೈರ್ಯ, ದರ್ಪ, ಕಠೋರ ಭಾವ ಅವನಲ್ಲೂ ಮನೆ ಮಾಡಿದವು.

ಆದರೆ ಇಷ್ಟರಿಂದಲೇ ಸ್ಟಾಲಿನ್ ಓದಿಗೆ ತಿಲಾಂಜಲಿ ಎರೆದನೆಂದು ತಿಳಿಯಬಾರದು. ದಿನನಿತ್ಯದ ಪಾಠ ಸಾಗಿಯೇ ಸಾಗುತ್ತಿತ್ತು. ತರಗತಿಯಲ್ಲಿ ಅವನು ಹಿಂದೆ ಬೀಳಲೂ ಇಲ್ಲ. ಅದರ ಬದಲು ಉಳಿದೆಲ್ಲ ವಿದ್ಯಾರ್ಥಿಗಳಿಗಿಂತ ಹೆಚ್ಚಿನ ಪ್ರತಿಭೆ ತೋರಿದನು. ಇದನ್ನು ಕಂಡ ಧರ್ಮಾಧಿಕಾರಿಗಳು

ಮೆಚ್ಚಿ, ಟಿಫ್ಲಿಸ್ ನಗರದಲ್ಲಿರುವ ದೊಡ್ಡ ಇಗರ್ಜಿ ಶಾಲೆಗೆ ಅವನನ್ನು ಕಳಿಸಲು ನಿರ್ಧರಿಸಿದರು.

ಟಿಫ್ಲಿಸ್ ನಗರವು ದೊಡ್ಡದು. ಸಾವಿರಾರು ಜನರು ವಾಸಿಸುವ ಪಟ್ಟಣ. ಯುರೋಪಿನ ಇನ್ನಿತರ ರಾಷ್ಟ್ರಗಳ ಪ್ರಜೆಗಳೂ ಅಲ್ಲಿಗೆ ಬಂದು ಹೋಗುವರು. ಯುರೋಪಿಯನ್ನರ ಸಂಪರ್ಕದಿಂದ ಆ ನಗರಕ್ಕೆ ಸ್ವಲ್ಪ ಆಧುನಿಕ-ಗಾಳಿ ಸೋಂಕಿದೆ. ನಾಟಕ ಶಾಲೆಗಳು, ಕ್ಲಬ್‌ಗಳು, ವಾರ್ತಾಪತ್ರಿಕೆಗಳು, ಗ್ರಂಥ ಭಾಂಡಾರಗಳು ಎಲ್ಲವೂ ಇವೆ ಈ ಹೊಸ ವಾತಾವರಣದಲ್ಲಿ ಸ್ಟಾಲಿನ್ ಎಳೆತನದ ಹುಂಬತನವನ್ನು ಬಿಟ್ಟು ಅಭ್ಯಾಸದಲ್ಲಿ ಆಸ್ಥೆ ವಹಿಸಿದ. ಅವನು ಪಾದ್ರಿಯಾಗುವ ಮನುಷ್ಯ. ಆದುದರಿಂದ ಹೆಚ್ಚಾಗಿ ಧರ್ಮಶಾಸ್ತ್ರಗಳ ಕಡೆ ಲಕ್ಷ್ಯ ಹಾಕಬೇಕಾಗಿತ್ತು. ಆದರೆ ಸ್ಟಾಲಿನ್ ಅದರೊಂದಿಗೆ ಕೆಲವು ರಾಜಕೀಯ ಗ್ರಂಥಗಳನ್ನು ಓದಲಾರಂಭಿಸಿದನು. ಅವುಗಳಲ್ಲಿ ಕಾರ್ಲ್‌ಮಾರ್ಕ್ಸನ ಪುಸ್ತಕಗಳು ಮುಖ್ಯ. ದಿನದಿನಕ್ಕೆ ಸ್ಟಾಲಿನ್ನನಿಗೆ ಅವುಗಳ ಮೇಲಿನ ಅಭಿರುಚಿ ಬಲವಾಯಿತು. ಕೊನೆಗೆ ಅವನ ಮನಃಪ್ರವೃತ್ತಿಯೇ ಬದಲಾಗಿ ಬಿಟ್ಟಿತು. ಸ್ಟಾಲಿನ್ನನ ಜೀವನದ ಮೇಲೆ ಪ್ರಭಾವ ಬೀರಿದ ಆ ತತ್ವವಿಚಾರಗಳೇನೆಂಬುದನ್ನು ನೋಡೋಣ.

### ಕಾರ್ಲ್ ಮಾರ್ಕ್ಸ

ಕಾರ್ಲ್‌ಮಾರ್ಕ್ಸನು ೧೯ನೇ ಶತಮಾನದ ಆದಿಯಲ್ಲಿ (೧೮೧೮) ಜರ್ಮನಿಯಲ್ಲಿ ಜನಿಸಿದ ವಿಭೂತಿ. ದೊಡ್ಡ ತತ್ವಜ್ಞಾನಿ. ಸಾಕ್ರೆಟಿಸ್, ಪ್ಲೇಟೋ ಕನಫ್ಯೂಜಿಯಸ್, ಮುಂತಾದವರುಗಳಂತೆ ಸಮಾಜಶಾಸ್ತ್ರ ಪಂಡಿತ; ತಾರ್ಕಿಕ ವಾದಿ. ಆದರೆ ಕಾರ್ಲ್‌ಮಾರ್ಕ್ಸನು ಎಲ್ಲವನ್ನೂ, ಎಂದರೆ ರಾಜ್ಯ, ರಾಜಕಾರಣ, ಜನಜೀವನ ಮೊದಲಾದವುಗಳನ್ನು ಆರ್ಥಿಕ ಬಳ್ಳದಿಂದ ಅಳೆಯುತ್ತಾನೆ. ಮಾನವೀ ಕೋಟಿಯ ದುಃಖ ದುಮ್ಮಾನಗಳಿಗೆ ಬಂಡವಲ ಪದ್ಧತಿಯೇ ಮೂಲವೆಂದು ಅವನ ಮತ.

### ಬಂಡವಲು ಪದ್ಧತಿ

ಯಾಂತ್ರಿಕ ಯುಗವಾರಂಭವಾದೊಡನೆಯೇ ಈ ಬಂಡವಲುಗಾರ ಪದ್ಧತಿ ರೂಪಗೊಂಡಿತು. ಬಾಡವಾಳಗಾರರು ನಾಯಿಕೊಡೆಗಳಂತೆ ತಲೆ ಎತ್ತಿದರು. ದೇಶದ ಹೊಲ, ನೆಲ, ಕಣಿ ಕಾರಖಾನೆಗಳೆಲ್ಲ ಅವರ ಕೈ

ಯೊಳಗೆ ಸೇರಿತು. ಈ ಬಂಡವಾಳಗಾರರಿಗೆ ಲಾಭದ ಕಡೆ ದೃಷ್ಟಿ. ಕೂಲಿಕಾರರಿಗೆ ಕೇವಲ ಉದರ ನಿರ್ವಾಹಕ್ಕೆ ಮಾತ್ರ ವೇತನ. ಲಾಭವೆಲ್ಲ ಶ್ರೀಮಂತರ ಬೊಕ್ಕಣಕ್ಕೇ ಸೈ. ಈ ವ್ಯತ್ಯಾಸದಿಂದ ಯಜಮಾನರು ಕುಬೇರರಾಗುತ್ತಿದ್ದಾರೆ. ಕೈ ಹಿಡಿಯಲ್ಲೆಣಿಸುವಷ್ಟು ಮಂದಿ ಧನಕನಕ ಒಡವೆ ವಸ್ತುಗಳನ್ನು ಕೂಡಿಹಾಕಿ, ಭೋಗಿಸಿ, ಬಹು ಜನರನ್ನು ಆಳುತ್ತಿರುವರು. ಅವರ ವೈಭವವೇನು? ವಿಲಾಸವೇನು? ಮಹಲುಗಳು ಉಪ್ಪರಿಗೆ ಮನೆ, ಮೆತ್ತನೆಯ ಹೂವಿನ ಹಾಸಿಗೆಯೇನು? ಆದರೆ ಬಹು ಸಂಖ್ಯಾಕರಾದ ಬಡ ಜನರ ಸ್ಥಿತಿ ಹೇಗಿದೆ? ಅವರ ಜೀವನಮಟ್ಟ ಕೆಳಕ್ಕೆ ಇಳಿಯುತ್ತಿದೆ. ಕಷ್ಟನಷ್ಟಗಳು ಹೆಚ್ಚಾಗುತ್ತಿವೆ. ಆಸ್ತಿ, ಪಾಸ್ತಿ, ಬದುಕು, ಭಾಗ್ಯ, ಮನೆ ಮಾರು ಯಾವ್ವೂ ಇಲ್ಲ. ಗುಲಾಮರಿಗಿಂತಲೂ ಅವರ ಸ್ಥಿತಿ ದುಃಖದಾಯಕ. ಇತ್ತಂಡದವರೂ ಪ್ರತ್ಯೇಕ ಎರಡು ವರ್ಗಗಳಿಗೆ ಸೇರಿದ ಮಂದಿ. ಈ ಎರಡು ಪಂಗಡಗಳೊಳಗೆ ಮಧುರ ಬಾಂಧವ್ಯವಿಲ್ಲ. ಇದಕ್ಕೆ ಮಾರ್ಕ್ಸು ವರ್ಗಕಲಹವೆಂದೂ ಹೇಳುತ್ತಾನೆ.

**ಬಂಡವಲುವಾದದ ಮರಿ**

ಬಂಡವಲ ಪದ್ಧತಿಯ ಭೂತ ಚೇಷ್ಟೆ ಅಲ್ಲಿಗೇ ಮುಗಿಯಲಿಲ್ಲ. ವ್ಯಕ್ತಿ ಒಡೆತನಕ್ಕೊಳಗಾದ ಕಾರ್ಖಾನೆಗಳ ಸಂಖ್ಯೆ ಬೆಳೆಯಿತು. ಉತ್ಪಾದನೆ ಅಧಿಕವಾಯಿತು. ಆ ವಸ್ತುಗಳನ್ನು ಕೊಂಡುಕೊಳ್ಳುವ ಜನವಿಲ್ಲ. ಕೊಂಡುಕೊಳ್ಳುವ ಜನರಾದರೂ ಯಾರು? ಜನಸಾಮಾನ್ಯರು. ಹೊಟ್ಟೆಬಟ್ಟೆಗೇ ಅವರಿಗೆ ಏಳೂ ಹನ್ನೊಂದು. ಹೀಗೆ ಅವರ ಜೀವನ ಮಟ್ಟವು ಇಳಿಮುಖವಾಗಿರುವಾಗ, ಆ ಸಾಮಗ್ರಿಗಳನ್ನು ಕೊಳ್ಳುವದಾದರೂ ಹೇಗೆ? ಈ ಬಿಕ್ಕಟ್ಟನ್ನು ಅನುಭವಿಸಿದ ಬಂಡವಾಳಗಾರರು ರಾಜ್ಯದ ಹೊರಗೆ ಅಬಲ ಜನರಿಂದ ತುಂಬಿದ ದೇಶಗಳ ಕಡೆ ಕಣ್ಣಿಟ್ಟರು. ಸರಿ; ಅಲ್ಲಿಗೆ ಸಾಮಾನುಗಳನ್ನು ಹೇರಿಕೊಂಡು ಹೊರಟರು. ವ್ಯಾಪಾರ ನಿರಾತಂಕವಾಗಿ ನಡೆಯಲು ಮೊದಮೊದಲು ಊರ ಆಳರಸರಿಂದ ಸವಲತ್ತು ಬೇಡಿದರು. ತಮ್ಮ ಕಾಲು ಸ್ವಲ್ಪ ಭದ್ರವಾದೊಡನೆಯೇ ಸೇನೆ ಕಟ್ಟಿದರು. ಕೊನೆಗೆ, ಆ ರಾಜ್ಯವನ್ನೇ ನುಂಗಿ ನೀರು ಕುಡಿದು ತಮ್ಮ ವಸ್ತುಗಳಿಗೆ ಅದು ಕೇವಲ ಸಂತೆಯಾಗುವಂತೆ ಮಾಡಿದರು. ಇದು ಬಂಡವಲು ಪದ್ಧತಿಯ ಮರಿ—ಸಾಮ್ರಾಜ್ಯವಾದ.

ಈ ಸಾಮ್ರಾಜ್ಯವನ್ನು ಕಾಪಾಡಿಕೊಳ್ಳಲು ಪ್ರಭುತ್ವ, ಸೇನೆ, ನೌಕ ಪಡೆ, ವಿಮಾನದಳ ಮೊದಲಾದವುಗಳೆಲ್ಲ ಹನುಮನ ಬಾಲದಂತೆ ಬೆಳೆಯುತ್ತ ಹೋದವು. ಇಂಥ ಪರಿಸ್ಥಿತಿಯಲ್ಲಿ ಇನ್ನಿತರ ಬಂಡವಾಳಗಾರರೊಡ ಮೇಲಾಟ ಬಿತ್ತು. ಈರ್ಷೆಯಿಂದ ಕಲಹವೆದ್ದಿತು. ತಮ್ಮ ಶತ್ರುಗಳ ನಾ ಮಾಡಿ ತಾವೇ ಜಗಜ್ಜೇತರಾಗಬೇಕು, ಆಳಬೇಕು, ಬಾಳಬೇಕು ಎಂಬ ಆ ಆಕಾಂಕ್ಷೆಯಿಂದ ಕತ್ತಿ ಕಟ್ಟಿದರು. ಯುದ್ಧದಿಂದ ಕೊಲೆ, ರಕುತಪಾತ ಅಶಾಂತಿಗಳು ತಲೆದೋರಿ ಜನರು ದುಃಖಾಂಬುಧಿಯಲ್ಲಿ ಮುಳುಗಿದರು ಪ್ರಜೆಗಳ ಕಣ್ಣೀರೇ ಅನ್ನವಾಯಿತು. ಬುದ್ಧದೇವ ನುಡಿದಂತೆ, 'ಮಾನವ ಕೋಟಿ ಸುರಿಸಿದ ಕಣ್ಣೀರು ಮುನ್ನೀರಿಗಿಂತ ಹೆಚ್ಚು.'

## ಮಾರ್ಕ್ಸನ ಸಿದ್ಧಾಂತ

ಮಾನವ ಕೋಟಿಯು ಈ ಕಷ್ಟನಿಷ್ಠುರಗಳ ಪರಿಹಾರಕ್ಕೆ ಮಾರ್ಕ್ಸ ಕೆಲವು ಉಪಾಯಗಳನ್ನು ಸೂಚಿಸಿರುವನು. ಅವು ಮಾರ್ಕ್ಸ ಸಿದ್ಧಾಂತ ಗಳೆಂದು ಪ್ರತೀತಿ ಹೊಂದಿವೆ. ಪ್ರಚಲಿತ ಆರ್ಥಿಕ ಪರಿಸ್ಥಿತಿಯು ಆಮೂಲಾಗ್ರ ಬದಲಾವಣೆಯೇ ಅವನ ದಿವ್ಯೌಷಧಿ. ಇದನ್ನು ಸಾಧಿಸುವುದಾದರೂ ಹೇಗೆ? ಮಾರ್ಕ್ಸನ ಉತ್ತರ—ವಿಪ್ಲವ. ಈ ಕ್ರಾಂತಿಯ ಕಹಳೆಯನ್ನು ಊದುವವ ರಾದರೂ ಯಾರು? ಆ ಭಾರ ಜನಸಾಮಾನ್ಯರ ಹೆಗಲ ಮೇಲೆ. ಕೂಲಿ ಕಾರರು ಸಶಸ್ತ್ರ ಬಂಡಾಯ ಹೂಡಿ, ಬಂಡವಾಳಗಾರರನ್ನು ಅಧಿಕಾರ ಗದ್ದುಗೆಯಿಂದ ದೂಡಿ, ರಾಜ್ಯಸೂತ್ರ ಹಿಡಿದು, ಸರ್ವಜನ ಸುಖ ಸಾಧಿಸ ಬೇಕೆಂದವನ ವಾದ.

ಸರ್ವ ಜನರ ಕ್ಷೇಮ ಚಿಂತನೆಯಿಂದ ಸಮಷ್ಟಿ ಸಿದ್ಧಾಂತವನ್ನು ಪಾಲಿಸಬೇಕೆಂದೂ ಸೂಚಿಸಿರುವನು. ಇದು ಬಂಡವಲು ಪದ್ಧತಿಗೆ ತೀರ ವಿರುದ್ಧವಾಗಿದೆ. ಧನೋತ್ಪಾದನೆಯ ಸಾಧನಗಳನ್ನು ಎಂದರೆ—ಕಣಿ, ಕಾರಖಾನೆ, ಬ್ಯಾಂಕು, ವಿಮಾ, ವ್ಯಾಪಾರ, ವ್ಯವಹಾರ, ಉದ್ಯೋಗ ಮೊದಲಾದವುಗಳನ್ನು ರಾಷ್ಟ್ರದ ಸ್ವಾಮಿತ್ವಕ್ಕೆ ಒಳಪಡಿಸಬೇಕು. ವ್ಯಕ್ತಿ ಒಡೆತನವನ್ನು ನಿರ್ಮೂಲಗೊಳಿಸಬೇಕು. ಈ ರೀತಿಯ ವ್ಯವಸ್ಥೆಗೆ ಉತ್ಪಾ ದನೆಯ ಸಾಧನಗಳ ರಾಷ್ಟ್ರೀಕರಣವೆಂದು ಹೆಸರು. ಇವುಗಳೆಲ್ಲ ಯಾವು ದಕ್ಕಾಗಿ? ಅಖಿಲ ರಾಷ್ಟ್ರಕ್ಕೇ ಕಲ್ಯಾಣವಾಗಬೇಕೆಂಬ ಸದುದ್ದೇಶದಿಂದ.

ದೇಶದ ಸರ್ವ ಸಂಪತ್ತು, ಪ್ರಜೆಗಳ ಸೊತ್ತು. ಒಬ್ಬಿಬ್ಬರದಲ್ಲ ಎಲ್ಲರಿಗೂ ಅದರ ಫಲ ದೊರೆಯುವುದು ಅವಶ್ಯ. ಎಂದರೆ, ಸರ್ವಜನರ ಹಿತವಾದಂತೆಯೇ ಸರಿ. ಆ ದೃಷ್ಟಿಯಿಂದ ಸಂಪತ್ತಿನ ಸರಿಯಾದ ವಿತರಣ ಮಾಡುವುದು ಸಮಷ್ಟಿ ತತ್ವದ ಜೀವಾಳವಾಗಿದೆ.

## ಮಾರ್ಕ್ಸನ ಸಮಾಜ

ಮಾರ್ಕ್ಸನ ಈ ಅರ್ಥಶಾಸ್ತ್ರ, ಈ ರಾಜನೀತಿ ಶಾಸ್ತ್ರ ಇವುಗಳೆಲ್ಲ ಒಂದು ಹೊಸ ಸಮಾಜ ರಚನೆಗೆ ತಳಹದಿ. ಸಮತ್ವ ಆದರ್ಶ-ಸಮಾಜದ ಜೀವಧರ್ಮ. ಈಗ, ನಮ್ಮ ಸಮಾಜದಲ್ಲಿ ತರತಮಭಾವ ತುಂಬಿತುಳು ಕಾಡುತ್ತಿದೆ. ದುಡ್ಡಿದ್ದ ದೊಡ್ಡಪ್ಪನವರು—ಕೆಲವರು. ಶ್ರೀಮಂತಿಗೆ ಕೆಲವರಲ್ಲಿ ಮಾತ್ರ. ಬಹು ಜನರಿಗೆ ತಿನ್ನಲು ಅನ್ನ, ಮಾನ ಮುಚ್ಚಿಕೊಳ್ಳಲು ಅರಿವೆ ಅಂಚಡಿ, ಇರಲು ಮನೆ ಇವು ಇಲ್ಲ. ಇದರಿಂದ ಶ್ರೀಮಂತರ ಮೇಲೆ ಬಹುಸಂಖ್ಯಾಕರಾದ ಬಡಜನರಿಗೆ, ನಿರ್ಗತಿಕ ಜನರಿಗೆ ದ್ವೇಷ, ಅಸೂಯೆ,ತಿರಸ್ಕಾರವುಂಟಾಗಿದೆ. ಈ ವ್ಯತ್ಯಾಸವೇ ಉಭಯವರ್ಗಗಳೊಳಗಿನ ಪ್ರತ್ಯೇಕೀಕರಣಗಳಿಗೆ ಕಾರಣವಾಗಿರುವುದು. ಆದರೆ ಮಾರ್ಕ್ಸನ ಸಮಾಜವ್ಯವಸ್ಥೆ ಅದನ್ನು ಪರಿಹರಿಸುವುದು. ಧನೋತ್ಪಾದನೆಯ ಸಾಧನಗಳ ರಾಷ್ಟ್ರೀಕರಣ—ವಿತರಣದಿಂದ ಐಶ್ವರ್ಯ, ಪ್ರಭುತ್ವ, ಅಧಿಕಾರ ಒಂದೇ ಕಡೆಗೆ ಕೂಡಲು ಅಶಕ್ಯ, ಕೆಲವರಿಗೆ ಉದ್ಯೋಗ, ಕೆಲವರಿಗೆ ನಿರುದ್ಯೋಗ, ಕೆಲವರ ಬೊಕ್ಕಸ ಹಿರಿದು, ಹೆಚ್ಚಿನವರ ಕೈ ಬರಿದು ಆಗುವಂತಿಲ್ಲ. ದೇಶದ ಸಂಪತ್ತು ಎಲ್ಲರದು. ಎಲ್ಲರೂ ಅದನ್ನು ಪಡೆಯಲು, ಭೋಗಿಸಲು ಅರ್ಹರು. ಎಲ್ಲರೂ ಸಮಾನರು. ಎಲ್ಲರಿಗೂ ಸಮಾನವಾದ ಅಧಿಕಾರ, ಸೌಲಭ್ಯ, ಅನುಕೂಲ. ಅಂದಬಳಿಕ, ಅಲ್ಲೂ ಬಡವ ಬಲ್ಲಿದನೆಂಬ ಪ್ರಶ್ನೆ ಏಳುವುದಾದರೂ ಹೇಗೆ? ಇವರು ಮೇಲು, ಇವರು ಕೀಳು ಎಂಬ ಭಿನ್ನಭಾವ, ಪಂಕ್ತಿಭೇದಗಳಿಗೂ ಅವಕಾಶವಿಲ್ಲ. ಇಂಥ ವಾತಾವರಣದಲ್ಲಿ ಪ್ರಜೆಗಳಲ್ಲಿ ವೈಯಕ್ತಿಕ ಸ್ವಾರ್ಥ, ಲೋಭ, ಅತ್ಯಾಶೆಗಳು ಅಳಿದು, ಸಮಾಜದ ಹಿತಚಿಂತನೆಯು ಉದಾತ್ತಭಾವ ಬೇರೂರಲು ಆಸ್ಪದವಿದೆ; ಅವರು ಪರಸ್ಪರ ಪ್ರೀತಿ ಸೌಹಾರ್ದ, ಬಂಧುಭಾವದಿಂದ ಬಾಳಲು ಅನುಕೂಲವಿದೆ ಎಂಬ ಈ ಮಾತು ಸುಳ್ಳಲ್ಲ. ಅಂದು,

ಇಡೀ ಸಮಾಜದ ಉದ್ಧಾರವಾದ ಹಾಗೆ. ದೇಶ ಸುಭಿಕ್ಷೆಯ ಮೆಟ್ಟಲು ಏರಿದ ಹಾಗೆ.

## ವಿಶ್ವಧರ್ಮ

ಈ ಘನ ತತ್ವ, ಒಂದು ಜಾತಿಗೆ, ಒಂದು ಜನಾಂಗಕ್ಕೆ, ಒಂದು ದೇಶಕ್ಕೆ ಅನ್ವಯಿಸುವಷ್ಟು ಸಂಕುಚಿತವಾದುದಲ್ಲ. ಅದರ ವ್ಯಾಪ್ತಿ ಇಡೀ ವಿಶ್ವಕ್ಕೇ. ಮಾರ್ಕ್ಸನದು ವಿಶ್ವಧರ್ಮ. ವಿಶ್ವದಲ್ಲೇ ಆಚರಣೆಯಲ್ಲಿ ತಂದರೆ, ಬಂದರೆ, ವಿಶ್ವದ ಇತಿಹಾಸದಲ್ಲಿ ಒಂದು ಸ್ವರ್ಣ ಅಧ್ಯಾಯವು ಆರಂಭವಾಗುವುದು. ನಿರುದ್ಯೋಗ, ದಾರಿದ್ರ್ಯ, ದಾಸ್ಯದಿಂದ ಎಲ್ಲ ದೇಶದ ನಾಗರಿಕರೂ ಮುಕ್ತರಾಗುವರು. ಯುದ್ಧ, ರಕ್ತಪಾತ, ಅಶಾಂತಿಯ ಬೇನೆ ಬೇಗೆಗಳು ನಿಲ್ಲುವವು. ರಾಷ್ಟ್ರ ರಾಷ್ಟ್ರಗಳ ಜನ, ಪ್ರೇಮದಿಂದ, ವಿಶ್ವಾಸದಿಂದ ವಿಶ್ವ ಕುಟುಂಬಿಗಳಾಗಿ ಬದುಕಬಹುದು. ಹಾಗೆ ಬದುಕಿ, ಬಾಳಿ, ಆಳಿ, ಆ ಸ್ವರ್ಗವನ್ನು ಈ ಮೃತ್ಯುಲೋಕಕ್ಕೆ ಇಳಿಸಿರಿ ಎಂಬದೇ ಮಾರ್ಕ್ಸನ ದಿವ್ಯ ಸಂದೇಶ.

## ಮಾರ್ಕ್ಸನ ಪ್ರಭಾವ

ಮಾರ್ಕ್ಸನ ಈ ಕ್ರಾಂತಿಕಾರಕ ತತ್ವವಿಚಾರಗಳು ಯುರೋಪಿನಲ್ಲೆಲ್ಲ ಸುಂಟರಗಾಳಿಯಂತೆ ಸುಳಿದಿದ್ದುವು. ಪ್ರಾಯಶಃ ಫ್ರೆಂಚ್ ರಾಜ್ಯಕ್ರಾಂತಿಯಾದ ಮೇಲೆ ಕ್ರಾಂತಿಯ ಕಿಡಿ ಯುರೋಪಿನಲ್ಲಿ ಮತ್ತೊಮ್ಮೆ ಶೀಘ್ರವಾಗಿ ಹಬ್ಬಿದುದು ಇಂದೇ. ಔದ್ಯೋಗಿಕ ಪ್ರಗತಿ ಹೊಂದಿದ ದೇಶಗಳಲ್ಲಿ, ಬಂಡವಾಳ ಪದ್ಧತಿಯು ತಾಂಡವವಾಡುತ್ತಿರುವ ರಾಷ್ಟ್ರಗಳಲ್ಲಿ ಕೂಲಿಕಾರ ಜನ ಸಾಮಾನ್ಯರು ಮಾರ್ಕ್ಸನನ್ನು ಆರಾಧಿಸತೊಡಗಿದರು. ಅವನ ಶಾಸ್ತ್ರಕ್ಕೆ ಮನಸೋಲದ ಪಂಡಿತನೇ ಇಲ್ಲ. ಭಿನ್ನ ವಿಚಾರಗಳಿದ್ದ ವಿರೋಧಿಗಳು ಕೂಡ ಎಷ್ಟೋ ವಿಷಯಗಳಲ್ಲಿ ಮಾರ್ಕ್ಸನಿಗೆ ಮನ್ನಣೆ ಕೊಡುತ್ತಿದ್ದಾರೆ. ಒಂದಿಲ್ಲೊಂದು ರೂಪದಲ್ಲಿ ಅವನ ತತ್ವದ ಕೆಲವಂಶಗಳನ್ನು ಸ್ವೀಕರಿಸಿದ್ದಾರೆ. ಅದರ ಪ್ರಭಾವ ಬೀಳದ ಜನರೇ ಇಲ್ಲ. ಆ ತತ್ವಗಳು ಸ್ಟಾಲಿನ್ನನ ಮನವನ್ನೂ ನಾಟಿದುವು.

ಸ್ಟಾಲಿನ್ನನೂ ದಾರಿದ್ರ್ಯದ ದವಡೆಗೆ ಸಿಕ್ಕಿ ನುಚ್ಚು ನೂರಾದವ. ಮಾತಾಪಿತರ ಹೀನ ದೀನ ಸ್ಥಿತಿ ಕಂಡು ನೊಂದವ. ಮನೆಗೆ ಸಮೀಪ

ವಿರುವ ಗುಡ್ಡಗಾಡುಗಳಲ್ಲಿ ಅಲೆಯುತ್ತಿದ್ದಾಗ, ಗೋರಿ, ಟಿಫ್ಲಿಸ್ ನಗರಗಳಲ್ಲಿ ತಿರುಗಾಡುತ್ತಿದ್ದಾಗ, ಪ್ರಜೆಗಳು ಪಡುತ್ತಿರುವ ದುಃಖಗಳೂ ಅವನ ಹೃದಯತಂತಿಯನ್ನು ಹಿಡಿದು ಮಿಡಿದಿರಬೇಕು. ಇಂಥ ಸನ್ನಿವೇಶದಲ್ಲಿ ಮಾರ್ಕ್ಸನಾಡಿದ ಮಾತು 'ಹೌದು, ಹೌದು' ಎಂದೆನ್ನಿಸಿರಬೇಕು ಆತನಿಗೆ.

## ಶಾಲೆಯಿಂದ ಉಚ್ಚಾಟನೆ

ವೇದಾಂತ ಹೇಳಬಹುದು. ವ್ಯವಹಾರ ಕಷ್ಟ. ಕಾರ್ಲಮಾರ್ಕ್ಸನ ಗ್ರಂಥಗಳನ್ನು ಓದಿದವರು ಎಷ್ಟು ಮಂದಿಯಿಲ್ಲ? ಒಬ್ಬಿಬ್ಬರೇ? ಲೋಕದ ಇಂದಿನ ಈ ದುಃಖಗಳಿಗೆಲ್ಲ ಅವನ ತತ್ವಪದ್ಧತಿಗಳು ಸಂಜೀವನವೆಂದು ಒಪ್ಪಿಕೊಳ್ಳುವ ಜನರೂ ಬಹಳವಿದಾರೆ. ಆದರೆ ಅವನು ಕಡಿದ ರಸ್ತೆಯಲ್ಲಿ ತೆರಳಿದವರೆಷ್ಟು ಮಂದಿ? ತೆರಳಲೆತ್ನಿಸುವವರೆಷ್ಟು ಮಂದಿ? ಅದಕ್ಕೇ ಅಂದುದು-ನುಡಿಯಂತೆ ನಡೆ ಕಷ್ಟವೆಂದು. ಸ್ಟಾಲಿನ್ ಮಾತ್ರ ಅದಕ್ಕೊಂದು ಅಪವಾದವಾಗಿದ್ದಾನೆ. ಟಾಲಸ್ಟಾಯ್, ರಸ್ಕಿನರ ಗ್ರಂಥಗಳು ಗಾಂಧೀಜಿಯವರ ಮೇಲೆ ಪರಿಣಾಮಮಾಡಿದಂತಾಗಿದೆ ಸ್ಟಾಲಿನ್ನನ ಮೇಲೆ ಮಾರ್ಕ್ಸನ ಗ್ರಂಥಗಳ ಪರಿಣಾಮ. ಸ್ಟಾಲಿನ್ ಅದರ ಸುಳಿಯಲ್ಲಿ ಸಿಲುಕಿದ; ಆ ಹೆದ್ದಾರಿಯಲ್ಲಿ ನಡೆಯಲು ಅವನು ಟೊಂಕ ಕಟ್ಟಿದನು. ವಿದ್ಯಾರ್ಥಿಗಳಿಗೆ ಮಾರ್ಕ್ಸನ ತತ್ವಗಳ ಉಪದೇಶವಾಯಿತು. ಅಲ್ಲಲ್ಲಿ ವಿದ್ಯಾರ್ಥಿಗಳ ಸಭೆ ಜರುಗಿತು. ಮಾರ್ಕ್ಸನ ಸಾಮ್ಯವಾದ ಚರ್ಚಿಸಲ್ಪಟ್ಟಿತು. ಈ ಚಳವಳಿ ಸ್ಟಾಲಿನ್ನನ ಸಂಘಟನೆ ನಾಯಕತ್ವದಿಂದ ವಿರಾಟಸ್ವರೂಪವನ್ನೇ ತಾಳಿತು. ಇದರಿಂದ ಶಾಲಾಧಿಕಾರಿಗಳು ಗಾಬರಿಯಾದರು. ಧರ್ಮಾಧಿಕಾರಿಯಾಗಲು ಶಿಕ್ಷಣ ಹೊಂದುತ್ತಿರುವ ಈ ತರುಣನು ಕ್ರಾಂತಿಗಾಗಿ ಪ್ರೋತ್ಸಾಹಿಸುತ್ತಿದ್ದಾನೆ. ಏನು ಬಂತಪ್ಪಾ ಕಲಿಕಾಲ? ಕ್ರಾಂತಿಗಾಗಿ ಚಡಪಡಿಸುವ ಈತನು ಪಾದ್ರಿಯಾಗಲು ಯೋಗ್ಯನಲ್ಲವೆಂದವರು ನಿರ್ಧರಿಸಿ, ೧೮೯೭ರಲ್ಲಿ ಶಾಲೆಯಿಂದ ಹೊರಗಟ್ಟಿದರು.

## ಸ್ಟಾಲಿನ್ನನ ಧ್ರುವ ಪಥ

ಆಗ ಸ್ಟಾಲಿನ್ನನಿಗೆ ಹತ್ತು ಹದಿನೇಳು ವರುಷ. ಹುಡುಗಾಟಿಕೆಯ ವಯಸ್ಸು. ವಿದ್ಯಾಭ್ಯಾಸ ಇನ್ನೂ ಪೂರ್ಣವಾಗಿಲ್ಲ. ಅಷ್ಟರೊಳಗೇ ಅವನು

ಇಡೀ ಸಮಾಜದ ಉದ್ಧಾರವಾದ ಹಾಗೆ. ದೇಶ ಸುಭಿಕ್ಷೆಯು ಮೆಟ್ಟಲು ಏರಿದ ಹಾಗೆ.

**ವಿಶ್ವಧರ್ಮ**

ಈ ಘನ ತತ್ವ, ಒಂದು ಜಾತಿಗೆ, ಒಂದು ಜನಾಂಗಕ್ಕೆ, ಒಂದು ದೇಶಕ್ಕೆ ಅನ್ವಯಿಸುವಷ್ಟು ಸಂಕುಚಿತವಾದುದಲ್ಲ. ಅದರ ವ್ಯಾಪ್ತಿ ಇಡೀ ವಿಶ್ವಕ್ಕೇ. ಮಾರ್ಕ್ಸನದು ವಿಶ್ವಧರ್ಮ. ವಿಶ್ವದಲ್ಲೇ ಆಚರಣೆಯಲ್ಲಿ ತಂದರೆ, ಬಂದರೆ, ವಿಶ್ವದ ಇತಿಹಾಸದಲ್ಲಿ ಒಂದು ಸ್ವರ್ಣ ಅಧ್ಯಾಯವು ಆರಂಭವಾಗುವುದು. ನಿರುದ್ಯೋಗ, ದಾರಿದ್ರ್ಯ, ದಾಸ್ಯದಿಂದ ಎಲ್ಲ ದೇಶದ ನಾಗರಿಕರೂ ಮುಕ್ತರಾಗುವರು. ಯುದ್ಧ, ರಕುತಪಾತ, ಅಶಾಂತಿಯ ಬೇನೆ ಬೇಗೆಗಳು ಸಿಲ್ಲುವವು. ರಾಷ್ಟ್ರ ರಾಷ್ಟ್ರಗಳ ಜನ, ಪ್ರೇಮದಿಂದ, ವಿಶ್ವಾಸದಿಂದ ವಿಶ್ವ ಕುಟುಂಬಿಗಳಾಗಿ ಬದುಕಬಹುದು. ಹಾಗೆ ಬದುಕಿ, ಬಾಳಿ, ಆಳಿ, ಆ ಸ್ವರ್ಗವನ್ನು ಈ ಮೃತ್ಯುಲೋಕಕ್ಕೆ ಇಳಿಸಿರಿ ಎಂಬದೇ ಮಾರ್ಕ್ಸನ ದಿವ್ಯ ಸಂದೇಶ.

**ಮಾರ್ಕ್ಸನ ಪ್ರಭಾವ**

ಮಾರ್ಕ್ಸನ ಈ ಕ್ರಾಂತಿಕಾರಕ ತತ್ವವಿಚಾರಗಳು ಯುರೋಪಿನಲ್ಲೆಲ್ಲ ಸುಂಟರಗಾಳಿಯಂತೆ ಸುಳಿದಿದ್ದುವು. ಪ್ರಾಯಶಃ ಫ್ರೆಂಚ್ ರಾಜ್ಯಕ್ರಾಂತಿಯಾದ ಮೇಲೆ ಕ್ರಾಂತಿಯ ಕಿಡಿ ಯುರೋಪಿನಲ್ಲಿ ಮತ್ತೊಮ್ಮೆ ಶೀಘ್ರವಾಗಿ ಹಬ್ಬಿದುದು ಇಂದೇ. ಔದ್ಯೋಗಿಕ ಪ್ರಗತಿ ಹೊಂದಿದ ದೇಶಗಳಲ್ಲಿ, ಬಂಡವಾಳ ಪದ್ಧತಿಯು ತಾಂಡವವಾಡುತ್ತಿರುವ ರಾಷ್ಟ್ರಗಳಲ್ಲಿ ಕೂಲಿಕಾರ ಜನ ಸಾಮಾನ್ಯರು ಮಾರ್ಕ್ಸನನ್ನು ಆರಾಧಿಸತೊಡಗಿದರು. ಅವನ ಶಾಸ್ತ್ರಕ್ಕೆ ಮನಸೋಲದ ಪಂಡಿತನೇ ಇಲ್ಲ. ಭಿನ್ನ ವಿಚಾರಗಳಿದ್ದ ವಿರೋಧಿಗಳು ಕೂಡ ಎಷ್ಟೋ ವಿಷಯಗಳಲ್ಲಿ ಮಾರ್ಕ್ಸನಿಗೆ ಮನ್ನಣೆ ಕೊಡುತ್ತಿದ್ದಾರೆ. ಒಂದಿಲ್ಲೊಂದು ರೂಪದಲ್ಲಿ ಅವನ ತತ್ವದ ಕೆಲವಂಶಗಳನ್ನು ಸ್ವೀಕರಿಸಿದ್ದಾರೆ. ಅದರ ಪ್ರಭಾವ ಬೀಳದ ಜನರೇ ಇಲ್ಲ. ಆ ತತ್ವಗಳು ಸ್ಟಾಲಿನ್ನನ ಮನವನ್ನೂ ನಾಟಿದುವು.

ಸ್ಟಾಲಿನ್ನನೂ ದಾರಿದ್ರ್ಯದ ದವಡೆಗೆ ಸಿಕ್ಕಿ ನುಚ್ಚು ನೂರಾದವ. ಮಾತಾಪಿತರ ಹೀನ ದೀನ ಸ್ಥಿತಿ ಕಂಡು ನೊಂದವ. ಮನೆಗೆ ಸಮೀಪ

ವಿರುವ ಗುಡ್ಡಗಾಡುಗಳಲ್ಲಿ ಅಲೆಯುತ್ತಿದ್ದಾಗ, ಗೋರಿ, ಟಿಫ್ಲಿಸ್ ನಗರಗಳಲ್ಲಿ ತಿರುಗಾಡುತ್ತಿದ್ದಾಗ, ಪ್ರಜೆಗಳು ಪಡುತ್ತಿರುವ ದುಃಖಗಳೂ ಅವನ ಹೃದಯತಂತಿಯನ್ನು ಹಿಡಿದು ಮಿಡಿದಿರಬೇಕು. ಇಂಥ ಸನ್ನಿವೇಶದಲ್ಲಿ ಮಾರ್ಕ್ಸನಾಡಿದ ಮಾತು 'ಹೌದು, ಹೌದು' ಎಂದೆನ್ನಿಸಿರಬೇಕು ಆತನಿಗೆ.

## ಶಾಲೆಯಿಂದ ಉಚ್ಚಾಟನೆ

ವೇದಾಂತ ಹೇಳಬಹುದು. ವ್ಯವಹಾರ ಕಷ್ಟ. ಕಾರ್ಲ್‌ಮಾರ್ಕ್ಸನ ಗ್ರಂಥಗಳನ್ನು ಓದಿದವರು ಎಷ್ಟು ಮಂದಿಯಿಲ್ಲ? ಒಬ್ಬಿಬ್ಬರೇ? ಲೋಕದ ಇಂದಿನ ಈ ದುಃಖಗಳಿಗೆಲ್ಲ ಅವನ ತತ್ವಪದ್ಧತಿಗಳು ಸಂಜೀವನವೆಂದು ಒಪ್ಪಿಕೊಳ್ಳುವ ಜನರೂ ಬಹಳವಿದಾರೆ. ಆದರೆ ಅವನು ಕಡಿದ ರಸ್ತೆಯಲ್ಲಿ ತೆರಳಿದವರೆಷ್ಟು ಮಂದಿ? ತೆರಳಲೆತ್ನಿಸುವವರೆಷ್ಟು ಮಂದಿ? ಅದಕ್ಕೇ ಅಂದುದು-ನುಡಿಯಂತೆ ನಡೆ ಕಷ್ಟವೆಂದು. ಸ್ಟಾಲಿನ್ ಮಾತ್ರ ಅದಕ್ಕೊಂದು ಅಪವಾದವಾಗಿದ್ದಾನೆ. ಟಾಲಸ್ಟಾಯ್, ರಸ್ಕಿನರ ಗ್ರಂಥಗಳು ಗಾಂಧೀಜಿಯವರ ಮೇಲೆ ಪರಿಣಾಮಮಾಡಿದಂತಾಗಿದೆ ಸ್ಟಾಲಿನ್ನನ ಮೇಲೆ ಮಾರ್ಕ್ಸನ ಗ್ರಂಥಗಳ ಪರಿಣಾಮ. ಸ್ಟಾಲಿನ್ ಅದರ ಸುಳಿಯಲ್ಲಿ ಸಿಲುಕಿದ; ಆ ಹೆದ್ದಾರಿಯಲ್ಲಿ ನಡೆಯಲು ಅವನು ಟೊಂಕ ಕಟ್ಟಿದನು. ವಿದ್ಯಾರ್ಥಿಗಳಿಗೆ ಮಾರ್ಕ್ಸನ ತತ್ವಗಳ ಉಪದೇಶವಾಯಿತು. ಅಲ್ಲಲ್ಲಿ ವಿದ್ಯಾರ್ಥಿಗಳ ಸಭೆ ಜರುಗಿತು. ಮಾರ್ಕ್ಸನ ಸಾಮ್ಯವಾದ ಚರ್ಚಿಸಲ್ಪಟ್ಟಿತು. ಈ ಚಳವಳಿ ಸ್ಟಾಲಿನ್ನನ ಸಂಘಟನೆ ನಾಯಕತ್ವದಿಂದ ವಿರಾಟಸ್ವರೂಪವನ್ನೇ ತಾಳಿತು. ಇದರಿಂದ ಶಾಲಾಧಿಕಾರಿಗಳು ಗಾಬರಿಯಾದರು. ಧರ್ಮಾಧಿಕಾರಿಯಾಗಲು ಶಿಕ್ಷಣ ಹೊಂದುತ್ತಿರುವ ಈ ತರುಣನು ಕ್ರಾಂತಿಗಾಗಿ ಪ್ರೋತ್ಸಾಹಿಸುತ್ತಿದ್ದಾನೆ. ಏನು ಬಂತಪ್ಪಾ ಕಲಿಕಾಲ? ಕ್ರಾಂತಿಗಾಗಿ ಚಡಪಡಿಸುವ ಈತನು ಪಾದ್ರಿಯಾಗಲು ಯೋಗ್ಯನಲ್ಲವೆಂದವರು ನಿರ್ಧರಿಸಿ, ೧೮೯೭ರಲ್ಲಿ ಶಾಲೆಯಿಂದ ಹೊರಗಟ್ಟಿದರು.

## ಸ್ಟಾಲಿನ್ನನ ಧ್ರುವ ಪಥ

ಆಗ ಸ್ಟಾಲಿನ್ನನಿಗೆ ಹತ್ತು ಹದಿನೇಳು ವರುಷ. ಹುಡುಗಾಟಿಕೆಯ ವಯಸ್ಸು. ವಿದ್ಯಾಭ್ಯಾಸ ಇನ್ನೂ ಪೂರ್ಣವಾಗಿಲ್ಲ. ಅಷ್ಟರೊಳಗೇ ಅವನು

ಓದಿಗೆ ತಿಲಾಂಜಲಿ ಎರೆಯಬೇಕಾಗಿ ಬಂತು. ಸ್ಟಾಲಿನ್ ತಬ್ಬಿಬ್ಬಾಗಲಿಲ್ಲ. ಸ್ವದೇಶ ಬಾಂಧವರು ದಾಸ್ಯಪಂಕದಲ್ಲಿ ತೊಳಲಾಡುತ್ತಿದ್ದಾಗ ಯಾವ ರಾಷ್ಟ್ರದಿಂದೇನು ? ಯಾವ ಧರ್ಮೋಪದೇಶದಿಂದೇನು ? ಅವುಗಳಿಂದ ಬಡವರ ಕಣ್ಣೀರಿನ ಕಾಲುವೆಯನ್ನು ತಡೆಯಲಾಗದು. ತಡೆಯಲು ಉಪಾಯವೊಂದೇ—ಅದು ಉತ್ಕ್ರಾಂತಿ. ಸ್ಟಾಲಿನ್ನನ ಎದೆಯ ದನಿ ಅದನ್ನೇ ನುಡಿಯುತ್ತಿದೆ. ಅವನಲ್ಲಿದ್ದ ಸ್ವಾತಂತ್ರ್ಯ ಮನೋವೃತ್ತಿಯೂ ಈ ಧ್ರುವಪಥವನ್ನು ಹಿಡಿಯುವಂತೆ ಮಾಡಿದೆಯೆಂದೆನ್ನುವವರುಂಟು. ಶಾಲೆಯಲ್ಲಿ ಇದ್ದಾಗಲೂ ಅಧಿಕಾರಿಗಳೆಂದರೆ ಅವನಿಗೆ ಸೇರುತ್ತಿದ್ದಿಲ್ಲವಂತೆ. ಅದೇನೇ ಇರಲಿ, ಮುಖ್ಯವಾಗಿ ಸ್ಟಾಲಿನ್ನನ ಜಡಜೀವನಕ್ಕೆ ವಿದ್ಯುತ್ ಚೇತನವನ್ನಿತ್ತ ಮಹಾರಾಯ ಮಾರ್ಕ್ಸ. ಸ್ಟಾಲಿನ್ ಆ ರಸ್ತೆ ಅರಿಸಿಕೊಂಡಾಯಿತು. ದಾರಿಯೋನೋ ಇಕ್ಕಟ್ಟಾದುದು. ಕೊರಕಲು. ಎಡವಿ ಬೀಳುವ ಭಯವುಂಟು. ಏಟುಗಳೂ ಬೀಳಬಹುದು. ಈಗ ಶಾಲೆಯಿಂದ ಉಚ್ಚಾಟನೆಯಾದುದೂ ಆ ರಸ್ತೆಯಲ್ಲಿ ದೊರೆತ ಒಂದು ಏಟೇ ಆಗಿದೆ; ಆದರೆ ಈ ಕಲ್ಲು ಮುಳ್ಳುಗಳನ್ನು ಕಂಡು, ಅಳ್ಳೆದೆಯವನಂತೆ ಅಂಜಿ, ಮೆಟ್ಟದೆ ಬಿಡುವವನಲ್ಲ ಸ್ಟಾಲಿನ್. ಹಾಗಿದ್ದರೆ, ಧೀರರಾದ ಕಾಕೇಶಿಯ ಬೆಟ್ಟ ನಿವಾಸಿಗಳ ರಕುತ ಅವನ ನರನಾಡಿಗಳಲ್ಲಿ ಹರಿಯುತಿದೆಯೆಂಬ ಮಾತು ಸುಳ್ಳಾಗಬಹುದು.

—

## ಅಂದಿನ ರಶಿಯಾ

ರಶಿಯಕ್ಕೆ ನವನಾಗರಿಕತೆಯ ಗಾಳಿ ಬೀಸಿದುದು ಬಹಳ ತಡವಾಗಿ. ೧೯ನೆಯ ಶತಮಾನದ ಉತ್ತರಾರ್ಧದ ವರೆಗೂ ಕುಂಭಕರ್ಣನಂತೆ ನಿದ್ರೆ ಹೋದ ದೇಶವಿದು. ಎಂದರೆ, ಅಷ್ಟರ ವರೆಗೆ ರಶಿಯವು ಅನಾಗರಿಕ ರಾಷ್ಟ್ರವಾಗಿತ್ತೆಂದರ್ಥವಲ್ಲ. ಕಲೆ, ಕೈಗಾರಿಕೆ, ಕಾವ್ಯ ಮತ್ತು ಸಂಸ್ಕೃತಿಗಳಲ್ಲಿ ಆ ಕಾಲದಲ್ಲೂ ರಶಿಯವು ಶ್ರೇಷ್ಠವಾದ ಸ್ಥಾನ ಪಡೆದಿತ್ತು. ಆದರೆ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಯುರೋಪಿನ ಇನ್ನಿತರ ರಾಷ್ಟ್ರಗಳಿಗಿಂತ ತೀರ ಹಿಂದುಳಿದಿತ್ತೆಂಬ ಮಾತು ಸುಳ್ಳಲ್ಲ. ಇದು ಏಕೆ

ಹೀಗಾಯಿತೆಂಬುದಕ್ಕೆ ಅನೇಕ ಕಾರಣಗಳುಂಟು. ಯುರೋಪು ಮಧ್ಯ ಯುಗದ ಪರೆಯನ್ನು ಕಳಚಿಹಾಕುತ್ತಿದ್ದಾಗ ತಾರ್ತಾರರು ದಂಡೆತ್ತಿ ಬಂದರು. ಹೆಚ್ಚು ಕಡಿಮೆ ಎರಡುನೂರು ವರುಷಗಳ ವರೆಗೆ ರಶಿಯವು ಅವರ ಕಾಲಡಿ ಬಿದ್ದು ಹೋಯಿತು. ಈ ಕಠೋರ ತಾರ್ತಾರರ ಆಳಿಕೆಯಲ್ಲಿ ನೆತ್ತರಿನ ನದಿ ಹರಿಯಿತು ರಶಿಯದಲ್ಲಿ. ಈ ಅವಧಿಯಲ್ಲಿ ದೇಶೋನ್ನತಿಯ ಕಾರ್ಯವೇನೂ ನಡೆಯಲಿಲ್ಲ. ತಾರ್ತಾರರ ಸಾಮ್ರಾಜ್ಯ ಅದುರಿ ಉದುರಿದ ಮೇಲಾದರೂ ದೇಶದಲ್ಲಿ ಶಾಂತಿ ನೆಲೆಸಿತೇ ? ಅದೂ ಇಲ್ಲ. ಅಲ್ಲೊಬ್ಬ ಇಲ್ಲೊಬ್ಬ ತುಂಡರಸರು ತಲೆ ಎತ್ತಿ 'ನಾ-ನೀ' ಪ್ರಾಬಲ್ಯಕ್ಕಾಗಿ ಸೆಣಸಾಡಿದರು. ಈ ಜಗಳಗಳಲ್ಲಿ ಮತ್ತೆ ರಕುತದೋಕುಳಿಯಾಯಿತು. ಕೊನೆಗೆ ಮಾಸ್ಕೋ ಡ್ಯೂಕ್ ರಾಜಮನೆತನದವರು ಪ್ರಾಬಲ್ಯಕ್ಕೆ ಬಂದರು. ತಾರ್ತಾರರ ದಾಸ್ಯಶೃಂಖಲೆ, ಯಾದವೀಕಲಹ, ರಶಿಯದ ಪ್ರಗತಿಗೆ ಅಡೆತಡೆಗಳಾದುವು.

## ಝಾರರ ಪ್ರಭುತ್ವ

ಅಧಿಕಾರಕ್ಕೆ ಬಂದ ಮಾಸ್ಕೋ ರಾಜವಂಶೀಯರು ಝಾರರೆಂದು ಇತಿಹಾಸದಲ್ಲಿ ಪ್ರಸಿದ್ಧಿಹೊಂದಿದ್ದಾರೆ. ಈ ದೊರೆಗಳು ತಮ್ಮ ರಾಜ್ಯ ವಿಸ್ತರಿಸಿ, ಅಖಿಲ ರಶಿಯದಲ್ಲೇ ತಮ್ಮ ಸಾಮ್ರಾಜ್ಯ ಕಟ್ಟಿದರು. ಕೊಲೆ, ಸುಲಿಗೆ, ದರೋಡೆ, ಅಂತಃಕಲಹಗಳಿಂದ ಜರ್ಜರಿತರಾಗಿದ್ದ, ಕಣ್ಣೀರಿನ ಕಾಲುವೆಯಲ್ಲಿ ತೇಲಿಹೋಗಿದ್ದ ಜನ ರಾಷ್ಟ್ರೀಯ ಸ್ವಾತಂತ್ರ್ಯ ಸಂಪಾದಿಸಿದರು. ಆದರೆ ಎಣ್ಣೆ ಬರುವಾಗ ಗಾಣ ಮುರಿಯಿತೆಂಬ ನಾಣ್ಣುಡಿಯಂತೆ ಝಾರ್ ಸರಕಾರ ಪ್ರಜಾಸ್ವಾತಂತ್ರ್ಯದ ಬಲಿ ಕೇಳಿತು. ಝಾರರು ನಿರಂಕುಶ ಪ್ರಭುಗಳಾಗಿ ಬಿಟ್ಟರು; ಸ್ವೇಚ್ಛಾಚಾರಿಗಳಾದರು. ನಾಗರಿಕ ಹಕ್ಕು ಸ್ವಾತಂತ್ರ್ಯ ಇವುಗಳಿಗೆಲ್ಲ ಝಾರನದು ಒಂದೇ ಉತ್ತರ—ಗದೆ. ವಿದೇಶಗಳಲ್ಲಿ ಜನರು ಸಂಪಾದಿಸಿಕೊಂಡ ಹೊಣೆಗಾರ ಸರಕಾರವನ್ನು ರೂಪಿಸುವ ರಶಿಯನರ ಆಶೆ ಈಡೇರಲಿಲ್ಲ. ತಾರ್ತಾರರ ಸಂಕೋಲೆಗಳಿಂದ ಪಾರಾದ ಜನರು ಝಾರನ ಸರ್ವಾಧಿಕಾರಿ ಆಡಳಿತೆಯ ಸುಳಿಯಲ್ಲಿ ಸಿಲುಕಿ ತುಂಬ ಅಸಮಾಧಾನ ಪಟ್ಟರು.

## ಒಕ್ಕಲಿಗರ ಗುಲಾಮಗಿರಿ

ಝಾರರ ಆಳಿಕೆಯಲ್ಲಿ ಎಲ್ಲರಿಗಿಂತ ಹೆಚ್ಚಾಗಿ ದುಃಖಿಕ್ಕೊಳಗಾದವರು

ಬಡ ಒಕ್ಕಲಿಗರು. ಹಿಂದುಸ್ತಾನದಂತೆಯೇ ಅದು ಒಕ್ಕಲಿಗರ ದೇಶ. ವ್ಯವಸಾಯವೇ ಜನರ ಮುಖ್ಯ ಕಸುಬು. ಭಾರತದಂತೆ ಒಂದು ರೀತಿಯ ಗ್ರಾಮಪಂಚಾಯತಿ-ತತ್ವದ ತಳಹದಿಯ ಮೇಲೆ ಅಲ್ಲಿಯೂ ಪ್ರಾಚೀನ ಕಾಲದಲ್ಲಿ ಒಕ್ಕಲುತನ ನಡೆಯುತ್ತಿತ್ತು. ಆದರೆ ಝಾರರು ಗಾದಿ ಏರಿದೊಡನೆಯೇ ಗ್ರಾಮಪಂಚಾಯತಿ ವ್ಯವಸ್ಥೆಯು ಮುರಿದು ಬಿತ್ತು. ತಾರ್ತಾರರೊಡನೆ ಹಾಗು ಇನ್ನಿತರ ಸಮಾನಸ್ಕಂಧರೊಡನೆ ಬಡಿದಾಡಲು ಝಾರ್ ದೊರೆಗಳಿಗೆ ಆಳು, ಕಾಳು, ಅವಶ್ಯ. ಅದಕ್ಕಾಗಿ ಅವರು ಹಳ್ಳಿಯ ಗೌಡರನ್ನು ಕಾಡತೊಡಗಿದರು. ಈ ಸೇವೆಯ ಬದಲು ಹಳ್ಳಿಯ ಗೌಡ ಕುಲಕರ್ಣಿಯರಿಗೆ ವಿಶೇಷಾಧಿಕಾರ, ಉಂಬಳಿ, ಬಹುಮಾನ ಮೊದಲಾದವುಗಳು ದೊರೆತವು. ಬಡರೈತರ ಮೇಲೆ ಗೌಡರದು ಅಧಿಕಾರವಾಯಿತು. ಒಕ್ಕಲಿಗರು ಸ್ವಾತಂತ್ರ್ಯ ಕಳೆದುಕೊಂಡರು. ಮನೆಮಾರಿಲ್ಲದ ಬಡವರಂತೂ ಗೌಡರ ಗುಲಾಮರಾದರು. ಸ್ವೇಚ್ಛೆಯಿಂದ ತಮ್ಮ ಹೊಲಗಳಲ್ಲಿ ಅವರನ್ನು ದುಡಿಸಿ, ನಾಯಿಯಂತೆ ಹಿಡಿಗಂಜಿ ನೀಡುತ್ತಿದ್ದರು. ಬಿಟ್ಟಿ ಕೆಲಸಕ್ಕಂತೂ ಮಿತಿಯಿಲ್ಲ; ಆಯ ಆಳತೆಯಿಲ್ಲ. ಚಿಕ್ಕ ಚಿಕ್ಕ ಅಪರಾಧಗಳಿಗಾಗಿ ಈ ಗೌಡ ಜಮೀನದಾರರದು ಯಮಶಿಕ್ಷೆ. ಬೆನ್ನಿನ ಚರ್ಮ ಸೀಳಿ ರಕುತ ಸುರಿಯುವವರೆಗೂ ಹೊಡೆಯುತ್ತಿದ್ದರು. ಬಡರೈತ ಮೊರೆಯಿಡಬೇಕಾದರೂ ಯಾರಿಗೆ? ಜಮೀನ್ದಾರರೇ ಗ್ರಾಮದ ದೈವ; ದೇವರು; ನ್ಯಾಯಾಧೀಶ. ಅವರ ಮಾತೇ ವೇದವಾಕ್ಯ. ಆಸ್ತಿಪಾಸ್ತಿಯಿಲ್ಲದ ಈ ಒಕ್ಕಲಿಗ ಜೋಗಿ ಜಂಗಮರು ಅವರ ಜಂಗಮ ಸೊತ್ತು. ಪಶುಗಳಿಗಿದ್ದ ಬೆಲೆ ಅವರಿಗಿಲ್ಲ ಸ್ವೇಚ್ಛೆಯಿಂದ ಅವರನ್ನು ಮಾರಿ ಬಿಡುವ ಅಧಿಕಾರ ಜಮೀನ್ದಾರರಿಗೆ. ಸರ್ವಸಾಧಾರಣವಾಗಿ ಅಮೇರಿಕದಲ್ಲಿ ನಿಗ್ರೋಗಳು ಪಟ್ಟ ಕಷ್ಟನಷ್ಟವನ್ನು ರಶಿಯದ ಪ್ರಜೆಗಳು ಅನುಭವಿಸಿದರೆಂದರೆ ಅತ್ಯುಕ್ತಿಯಲ್ಲ.

ಈ ಕ್ರೌರ್ಯ, ಚಿತ್ರಹಿಂಸೆಗಳಿಂದ ಪಾರಾಗಲು ಒಕ್ಕಲಿಗರು ಗುಡ್ಡಗಾಡುಗಳಿಗೆ ಓಡುತ್ತಿದ್ದರು. ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ಬಹಳ ದೂರಕ್ಕೆ ಗುಳೆ ಹೋಗುತ್ತಿದ್ದರು. ಯಾರ ಕಣ್ಣಿಗೆ ಮಣ್ಣೆಸೆದರೂ ಝಾರನ ಕಟ್ಟಳೆಯ ಕಣ್ಣಿಗೆ ಮಣ್ಣೆಸೆಯಲಾದೀತೇ? ಲಾವಣಿ, ಬಿಟ್ಟಿ ತೀರಿಸದೆ ಓಡಿಹೋದರೆ ಅದು ಅಪರಾಧ. ಮತ್ತೆ ಒಕ್ಕಲಿಗರನ್ನು ಹಿಡಿದು ತರುತ್ತಿದ್ದರು.

ಈ ಯಮಯಾತನೆಯಿಂದ ವಿಮೋಚನೆ ಹೊಂದಲು ಒಂದೇ ಉಪಾಯವೆಂದು ಒಕ್ಕಲಿಗರು ಪ್ರತೀಕಾರಕ್ಕಾಗಿ ಕೈಯೆತ್ತಿದರು. ಭೂಮಿ ಒಡೆಯರ ಮನೆ ಮಠ, ಕಾಳು ಕಣಜಗಳಿಗೆ ಬೆಂಕಿ ಕೊಟ್ಟರು. ಸಾಧ್ಯವಾದಲ್ಲಿ ಅವರನ್ನು ಕೊಚ್ಚಿ ಚೆಲ್ಲಿದರು. ಶತಮಾನದಿಂದ ಅವರ ಹೃದಯದಲ್ಲಿ ಹುದುಗಿದ್ದ ದ್ವೇಷದ ಜ್ವಾಲಾಮುಖಿ ಒಮ್ಮೆಯೇ ಬಾಯ್ದೆರೆಯಿತು. ಆ ದಾವಾನಲಕ್ಕೆ ಜಮೀನ್ದಾರರು ಆಹುತಿಯಾಗುತ್ತಬಂದರು. ಕಾಝಿನ್ ಪುಗೂಶೆವ್ ಮೊದಲಾದ ರೈತ ಮುಖಂಡರು ಒಕ್ಕಲಿಗರ ಬೆಂಬಲ ಪಡೆದು, ದೊಡ್ಡ ಪಂಗಡವನ್ನೇ ಕಟ್ಟಿ ಜಮೀನ್ದಾರರನ್ನು ಕಂಡಲ್ಲಿ ಕಡಿದೊಗೆದರು. ಅವರ ಬಂಡಾಯದಿಂದ ಜಮೀನ್ದಾರರ ಗರ್ಭವೇ ಒಮ್ಮೆ ನಡುಗಿಹೋಯಿತು. ಕಾಲಕ್ರಮದಲ್ಲಿ ಈ ಬಂಡಾಯ ರೈತರ ಬಿಡುಗಡೆ ತಂದಿತು. ಟಾಲಸ್ಟಾಯ್ ಮೊದಲಾದ ಪುಣ್ಯ ಪುರುಷರು ಝಾರನ ಕಿವಿ ಹಿಂಡಿ ಗುಲಾಮಗಿರಿಯನ್ನು ಹೊಡೆದೋಡಿಸಿದರು(೧೮೬೧). ಆದರೆ ಈ 'ವಿಮೋಚನೆ' ಕೇವಲ ಪುಸ್ತಕದ ಬದನೇಕಾಯಿಯಾಗಿ ಉಳಿಯಿತಲ್ಲದೆ, ನಿತ್ಯ ವ್ಯವಹಾರದಲ್ಲಿ ರೈತರ ಸ್ಥಿತಿ ಸುಧಾರಿಸಲಿಲ್ಲವೆಂಬುದು ಸತ್ಯ. ಇದರಿಂದ ಬೂದಿ ಮುಚ್ಚಿದ ಕಂಡದಂತೆ ಅಸಮಾಧಾನ ಅವರ ಮನದೊಳಗೆ ಕುದಿಯುತ್ತಿತ್ತು.

### ಕೂಲಿಕಾರರ ಸಂಕಟ

ಝಾರ್ ಸತ್ತೆಯ ಮೇಲೆ ಅಸಂತೋಷಗೊಂಡ ಇನ್ನೊಂದು ವರ್ಗ-ಕೂಲಿಕಾರರು. ರಶಿಯವು ಮಿಕ್ಕೆಲ್ಲ ಪಾಶ್ಚಿಮಾತ್ಯ ರಾಷ್ಟ್ರಗಳಿಗಿಂತ ತಡವಾಗಿ ಔದ್ಯೋಗಿಕ ಬೆಳೆವಣಿಗೆ ಕೈಕೊಂಡ ರಾಷ್ಟ್ರ. ಆದರೆ ತಡವಾಗಿ ಆದರೂ ಉದ್ಯೋಗಗಳು ಆರಂಭದಿಂದಲೇ ದೊಡ್ಡ ಪ್ರಮಾಣದಲ್ಲೇ ಸ್ಥಾಪಿಸಲ್ಪಟ್ಟವು. ಜರ್ಮನಿ, ಬ್ರಿಟನ್, ಅಮೇರಿಕಗಳಂತೆ ರಶಿಯವು ಔದ್ಯೋಗಿಕ ರಾಷ್ಟ್ರವೇನೋ ಆಗಲಿಲ್ಲ. ಆದರೂ ಉದ್ಯೋಗಗಳು ವಿಪುಲವಾಗಿ ಬೆಳೆದವು. ರಶಿಯದಲ್ಲಿ ಔದ್ಯೋಗಿಕ ಪ್ರಗತಿಯ ಗತಿ ಬಹಳ ತೀವ್ರವಾಗಿತ್ತು. ಪರರಾಷ್ಟ್ರಗಳಲ್ಲಿ ನೂರು, ಎರಡು ನೂರು ಕೂಲಿಕಾರರು ದುಡಿಯುವ ಕಣಿ, ಕಾರಖಾನೆಗಳು ಇದ್ದರೆ, ರಶಿಯದಲ್ಲಿ ಸಾವಿರ ಎರಡು ಸಾವಿರ ಕೂಲಿಕಾರರು ಕೆಲಸಮಾಡುವ ದೊಡ್ಡ ದೊಡ್ಡ ಕಾರಖಾನೆಗಳು ರಚಿಸಲ್ಪಟ್ಟವು. ಭಾರೀ ಭಾರೀ ಬಂಡವಳಗಾರರು ತಲೆಯೆತ್ತಿದರು. ರಶಿ

ಯುನ್ ಸರಕಾರವು ಅನೇಕ ಸೌಕರ್ಯ ಸವಲತ್ತುಗಳನ್ನು ಕೊಟ್ಟುದರಿಂದ ಜರ್ಮನಿ, ಬ್ರಿಟನ್ ಮೊದಲಾದ ದೇಶಗಳಲ್ಲಿರುವ ಕುಬೇರರು ರಶಿಯದಲ್ಲಿ ಅಪಾರ ಪಾಲು-ಬಂಡವಾಳವನ್ನು ಸುರಿಸಿದರು.

ರಶಿಯದಲ್ಲಿ ಜೀತದಾಳುಗಳಿಗೇನೂ ಕೊರತೆಯಿಲ್ಲ. ಅವರ ಜೀವನ-ಮಟ್ಟವೂ ಪಾಶ್ಚಾತ್ಯ ರಾಷ್ಟ್ರಗಳಿಗಿಂತ ಕಡಿಮೆ. ಅಧಿಕ ಲಾಭ ಪಡೆಯಲು ದೇಶವಿದೇಶಗಳ ಬಂಡವಾಳಗಾರರು ಅತ್ಯಲ್ಪ ವೇತನ ಕೊಟ್ಟರು. ಇದರಿಂದ ಕೂಲಿಕಾರರು ಆದಿಯಿಂದಲೂ ಅತೃಪ್ತಿಗೊಂಡರು. ದೇಶದಲ್ಲಿ ಔದ್ಯೋಗಿಕ ಪ್ರಗತಿಯಾದಂತೆ ಕೂಲಿಕಾರರ ಸಂಖ್ಯೆ ಬೆಳೆಯಿತು. ಅದರಂತೆ ಅವರ ಶಕ್ತಿ ಬಲಗೊಂಡು ಬಂಡವಾಳಗಾರರೊಡನೆ ಬಡಿದಾಡಲಾರಂಭಿಸಿದರು. ಪ್ರತಿಯೊಂದು ಕಾರಖಾನೆಯ ಕೂಲಿಕಾರರು ಮುಷ್ಕರ ಹೂಡಿದರು. ಅದನ್ನು ಅಪ್ಪಳಿಸಲು ಬಂಡವಾಳಗಾರರು ಪೋಲೀಸ್, ಸೈನ್ಯ, ಕಾಯಿದೆಗಳ ಉಪಯೋಗ ಮಾಡಿಕೊಂಡಾಗ ಸರಕಾರದ ಮೇಲೆಯೇ ಕೂಲಿಕಾರರು ಉರಿದೆದ್ದರು.

## ಅಲ್ಪಸಂಖ್ಯಾಕರ ಸ್ಥಿತಿಗತಿ

ಝಾರರ ಆಳಿಕೆಯಲ್ಲಿ ಇನ್ನೊಂದು ದೊಡ್ಡ ಪ್ರಮಾದವುಂಟಾಗಿದೆ. ಅದು ಆಳುವ ರಶಿಯನ್ನರು ವಿಶಾಲವಾದ ದೇಶದಲ್ಲಿರುವ ವಿವಿಧ ಅಲ್ಪಸಂಖ್ಯಾಕರ ಮೇಲೆ ನಡೆಸಿದ ದಬ್ಬಾಳಿಕೆ. ರಶಿಯ ದೊಡ್ಡ ದೇಶವೆಂದು ಎಲ್ಲರಿಗೂ ಗೊತ್ತು. ಗೋಲದ ಒಂದಾರನೇ ಭಾಗದಷ್ಟಿದೆ ಅದರ ವಿಸ್ತಾರ. ಈ ನೆಲದಲ್ಲಿ ವಾಸಿಸುತ್ತಿರುವವರು ಒಂದೆರಡು ಜಾತಿಯ ಜನರೇ? ರಶಿಯನರು, ತಾತಾರರು, ಬಿಳಿರಶಿಯನರು, ಉಕ್ರೇನಿಯನರು, ಜಾರ್ಜಿಯನರು ತುರುಕರು, ಕಜಕರು, ತಲೀಶರು, ಸವಣರು, ಲಾಕರು, ಎಸ್ಕಿಮೋ ಜನರು ಮೊದಲಾದ ಸಾವಿರಾರು ಜಾತಿ ಪಂಗಡಗಳಿವೆ. ಹೆಚ್ಚು ಕಡಿಮೆ ೧೮೦ ಭಿನ್ನ ಭಿನ್ನ ಜಾತಿ ಜನಾಂಗಗಳ ಜನ ವಾಸಿಸುತ್ತಿರುವ ನಾಡು ರಶಿಯ. ಭಾಷೆ, ವರ್ಣ, ಆಚಾರ ವಿಚಾರಗಳಲ್ಲಿ ತುಂಬಾ ವೈವಿಧ್ಯವಿದೆ. ಬಹುಕಾಲದವರೆಗೆ ಸ್ವತಂತ್ರರಾಗಿ, ಸ್ವೇಚ್ಛಾಚಾರಿಗಳಾಗಿ ಇವರೆಲ್ಲ ಜೀವಿಸಿದ್ದರು. ಇಷ್ಟರವರೆಗೆ ಭದ್ರ ಸರಕಾರದ ಅಧೀನದಲ್ಲಿ, ಒಂದು ಕುಟುಂಬವಾಗಿ ಬಾಳಿದವರಲ್ಲ. ಈಗ ಝಾರ್ ಸರಕಾರವು ಅದನ್ನು ಯತ್ನಿಸಿದಾಗ ಈ ಜನ ಅಸಮಾಧಾನ

ತಾಳಿದರು. ಕೇಂದ್ರ ಸರಕಾರದ ಛತ್ರಚಾಮರದಡಿ ಅಲ್ಪ ಸಂಖ್ಯಾಕರನ್ನೆಲ್ಲ ಬರಗೊಳಿಸಿದುದರಿಂದಲೇ ಅಲ್ಪ ಸಂಖ್ಯಾಕರ ಮೇಲೆ ದಬ್ಬಾಳಿಕೆಯಾಯಿತೆನ್ನುವದಲ್ಲ. ದೇಶವು ತಮ್ಮದು, ಅದರ ಒಡೆಯರು ತಾವು, ಆಳುವ ಹಕ್ಕು ತಮಗೆಂಬ ಬಿಂಕದಿಂದ ರಶಿಯನ್ನರು ವರ್ತಿಸಿದರು.ದೊಡ್ಡ ದೊಡ್ಡ ನೌಕರಿಗಳೆಲ್ಲ ಅವರಿಗೆ ಮೀಸಲು. ಸರಕಾರದ ಸರ್ವಾನುಕೂಲತೆಗಳ ಲಾಭ ದೊರೆಯುತ್ತಿದ್ದುದೂ ರಶಿಯನರಿಗೆ. ಕಣಿ, ಕಾರಖಾನೆ, ಬಂಡವಾಳ ಎಲ್ಲ ಅವರ ಮಂಗಮುಷ್ಟಿಯೊಳಗೆ. ಉಳಿದ ಸಹಸ್ರ ಜಾತಿ ಪಂಗಡಗಳು ರಶಿಯನರ ದಾಸಾನುದಾಸರು. ಇಷ್ಟೇ ಅಲ್ಲ, ರಶಿಯನ್ ಭಾಷೆಯನ್ನು ಉಳಿದ ಜನರ ಮೇಲೆ ಹೇರುತ್ತಿದ್ದರು. ಸ್ವಾಭಿಮಾನವಿದ್ದ ಯಾವ ಜನ ಜಂಗುಳಿಯಾದರೂ ಇದನ್ನು ತಡೆದಾರೆಯೇ?

**ಝಾರನ ದಬ್ಬಾಳಿಕೆ**

ಕ್ರಾಂತಿಯ ಕುಡಿ ಕೊನರಲು ಅಶಾಂತ ರಶಿಯವು ಚೆನ್ನದಂಥ ಭೂಮಿ. ೧೯ನೆಯ ಶತಮಾನದ ಅಂತ್ಯದಲ್ಲಿ ಈ ಕಿಡಿ ರಶಿಯಕ್ಕೆ ಬೀಸಿ, ವ್ಯಾಪಿಸಿದಾಗ, ಅದಕ್ಕೆ ಒಣಹುಲ್ಲೆ ಸಿಕ್ಕಿತು ಸುಡಲಿಕ್ಕೆ. ದೇಶದಾದ್ಯಂತ ಕೃಷಿಕ ಪಕ್ಷ, ಆ ಪಕ್ಷ, ಈ ಪಕ್ಷಗಳು ಉದಯವಾದುವು. ಕೂಲಿಕಾರರು ರಶಿಯನ್ ಸಾಮ್ಯಪ್ರಜಾಪ್ರಭುತ್ವ ಕೂಲಿಕಾರಪಕ್ಷದ (Russian social democratic labour party) ಧ್ವಜದಡಿ ಬಂದರು. ಈ ಪಕ್ಷ ಪಂಗಡಗಳ ಚಟುವಟಿಕೆ, ಪ್ರಭಾವ, ಒತ್ತಡ, ಕೈವಾಡಗಳಿಂದ ದೇಶದಲ್ಲಿ ನವ ಜಾಗೃತಿಯುಂಟಾಯಿತು. ಚಳವಳಿ ಬಲಗೊಂಡಿತು. ಕರಭಾರವನ್ನು ಹೊರಲಾರದೆ ಕಂಗೆಟ್ಟ ರೈತರ ದಂಗೆ, ಬಂಡವಾಳಗಾರರ ಶೋಷಣೆಯಿಂದ ದುಡಿದು, ದುಡಿದು ಮಣ್ಣಾದ ಹಣ್ಣಾದ ಕೂಲಿಕಾರರ ಮುಷ್ಕರ, ಜವಾಬ್ದಾರಿ ಸರಕಾರ ಬೇಕೆಂದು ಬೊಬ್ಬಿಡುವ ವಿದ್ಯಾರ್ಥಿಗಳ ಮತಪ್ರದರ್ಶನ, ಇವು ರಶಿಯದ ದಿನನಿತ್ಯ ಘಟನೆಗಳಾದುವು.

ಈ ವಿರೋಧ ಚಳವಳಿಯನ್ನು ಚಿಗುರಿನಲ್ಲೇ ಚಿವುಟಿ ಬಿಡಲು ಝಾರ್ ಸತ್ತೆಯು ಗದೆಯೆತ್ತಿತು. ಎಷ್ಟೋ ಜನರು ಪ್ರಾಣ ಕಳೆದುಕೊಂಡರು. ಸೆರೆಮನೆ ಕಂಡರು. ಪೂರ್ವ ರಶಿಯದಲ್ಲಿರುವ ನಿರ್ಜನ ಸೈಬೀರಿಯ ಪ್ರಾಂತಕ್ಕೆ ಝಾರ್‌ಶಾಹಿಯು ಒಟ್ಟು ೮ ಲಕ್ಷ ಜನರನ್ನು ಅಟ್ಟಿತಂತೆ.

ಝ್ಹಾರ್ ಸರಕಾರವು ಚಳವಳಿಯನ್ನು ತಾತ್ಕಾಲಿಕವಾಗಿ ಅಪ್ಪಳಿಸಿತು. ಏಕೆಂದರೆ ಅಂದಿನ ಚಳವಳಿಗಳೆಲ್ಲ ಸ್ವಯಂಪ್ರೇರಣೆಯಿಂದ ಸ್ಥಳಿಕ ಜನರು ಕೈಕೊಂಡ ಚಟುವಟಿಕೆ. ಏಕಸೂತ್ರತೆಯಿಂದ, ಏಕ ಕಾಲದಲ್ಲಿ ಅಖಂಡ ದೇಶದಲ್ಲಿ ಚಳವಳಿ ನಡೆದಿರಲಿಲ್ಲ. ಹೀಗಾಗಿ, ಸ್ವಲ್ಪ ಸಮಯದ ವರೆಗೆ ಝ್ಹಾರ್‌ಶಾಹಿಯ ಧ್ವಜ ಹಾರಾಡಿತು. ಆದರೆ ಲಾಠೀ, ಸೆರೆಮನೆ, ದೇಶೋಚ್ಚಾಟನೆಗಳಿಂದ ಜನರ ಹೃದಯದಲ್ಲಿ ಬೆಳಗಲಾರಂಭಿಸಿದ ಸ್ವಾತಂತ್ರ್ಯ ಪ್ರೇಮವನ್ನು ಮಾತ್ರ ಮುರಿಯಲಾಗಲಿಲ್ಲ ಝ್ಹಾರರಿಗೆ. ಆ ಚೇತನ ಅಂತಜ್ವಾಲೆಯಾಗಿ ಉಳಿಯಿತು—ಇನ್ನೊಮ್ಮೆ ಝ್ಹಾರ್ ಸತ್ತೆಯನ್ನು ಸುಟ್ಟು ಹಾಕಲಿಕ್ಕೆ.

### ಜಾರ್ಜಿಯದ ಬಂಡಾಯ

ಸ್ಟಾಲಿನ್ನನ ಜಾರ್ಜಿಯವಂತೂ ಝ್ಹಾರ್ ಸರಕಾರದ ವಿರುದ್ಧ ಬಂಡಾಯವೆದ್ದ ಪ್ರಾಂತ. ಜಾರ್ಜಿಯನ್ನರು ದಕ್ಷಿಣದ ಜನಾಂಗ. ಅವರಿಗೂ ರಶಿಯನರಿಗೂ ಬಹಳ ವ್ಯತ್ಯಾಸವಿದೆ. ಜಾರ್ಜಿಯನರ ನಿಲುವು ಎತ್ತರ. ಕರಿಗೂದಲು. ತುಂಬಿಯಂಥ ಕಪ್ಪು ಕಣ್ಣುಗೋಂಬೆಗಳಿವೆ. ಪರ್ವತಗಳ ತಪ್ಪಲು, ಶ್ರೇಣಿಗಳಲ್ಲಿ ವಾಸಿಸುತ್ತಾರೆ. ಮುಂಗೋಪಿಗಳು; ಕಠೋರರು; ಹಠಮಾರಿಗಳು; ಸ್ವಾತಂತ್ರ್ಯಪ್ರೇಮಿಗಳು. ಝ್ಹಾರನ ಆಳಿಕೆ, ಹುಲಿಗಳನ್ನು ಪಂಜರದೊಳಗಿಟ್ಟಂತಾಯಿತು. ಬೆಂದ ಹುಣ್ಣಿಗೆ ಸಾಸಿವೆ ಬಳಿಯುವಂತೆ, ಜಾರ್ಜಿಯಾಕ್ಕೆ ಝ್ಹಾರರು ಕೇವಲ ರಶಿಯನ್ ಗವ್ಹರ್ನರರನ್ನೇ ಕಳಿಸಿಕೊಟ್ಟರು. ಈ ಅಧಿಕಾರಿಗಳು ಜಾರ್ಜಿಯನರ ಹಕ್ಕು ಬಾಧ್ಯತೆಗಳ ಕಡೆಗೆ ಲಕ್ಷ್ಯಕೊಡುತ್ತಿದ್ದಿಲ್ಲ. ಇದರಿಂದ ರಶಿಯನರ ಮೇಲೆ ಜಾರ್ಜಿಯನರಿಗೆ ಹಗೆತನ ಬಿತ್ತು. ಸಿಟ್ಟನ್ನು ನುಂಗಿ ಸಹಿಸುವ ಜನ ಕಾಕೇಶಿಯನರಲ್ಲ. ಜನರಲ್ಲಿ ಈ ರೀತಿಯ ಭಾವನೆಗಳಿದ್ದಾಗ ಕ್ರಾಂತಿಯ ಬೇರು ಸುಸುಳಲು ಅನುಕೂಲವಾಯಿತು. ೧೮೮೩ರಲ್ಲಿ ಕೆಲವು ಕೂಲಿಕಾರ ಮುಖಂಡರು ಕೂಡಿ ಸಾಮ್ಯವಾದಿ ಪ್ರಜಾಪ್ರಭುತ್ವ ಕೂಲಿಕಾರ ಪಕ್ಷವೊಂದನ್ನು ಸ್ಥಾಪಿಸಿದರು. ಜಾರ್ಜಿಯದಲ್ಲಿ ಅದನ್ನೇ 'ಮೆಸ್ಸಾಮೆ ದಾಸ್ಸಿ' ಪಕ್ಷವೆಂದು ಕರೆಯುತ್ತಿದ್ದರು.

### ಸ್ಟಾಲಿನ್ನನ ಪ್ರವೇಶ

ಈ ಸಂಸ್ಥೆಯ ಹೆಸರೇನೋ ದೊಡ್ಡದು. ಆದರೆ, ಅದರ ಬೆನ್ನುಮೂಳೆ

ಬಲವಿಲ್ಲದುದು. ಮಾರ್ಕ್ಸ್‌ತತ್ವದ ತಿರುಳನ್ನು ಹುರುಳನ್ನು ಅರಿತವರು ವಿರಳ. ಅಖಿಲ ರಶಿಯದ ದೃಷ್ಟಿಯಿಂದ, ದೇಶದಲ್ಲೇ ಕ್ರಾಂತಿಯಾಗಬೇಕೆಂಬ ಉತ್ಕಟೇಚ್ಛೆಯಿಂದ ದುಡಿದವರೂ ಕಡಿಮೆ. ಅಲ್ಲಲ್ಲಿ ಅವರು ಕೆಲವು ಮುಷ್ಕರಗಳನ್ನು ಸಂಘಟಿಸಿದ್ದುದು ನಿಜ. ಆದರೆ ಕೂಲಿಕಾರರ ಅಲ್ಪಸ್ವಲ್ಪ ಬೇಡಿಕೆಗಳು ಮನ್ನಿಸಲ್ಪಟ್ಟೊಡನೆಯೇ ಉದಾಸೀನರಾಗುತ್ತಿದ್ದರು. ಈ ಅಲ್ಪ ವಿಜಯದಿಂದಲೇ ಸ್ವಸಂತುಷ್ಟರಾಗಿಬಿಡುತ್ತಿದ್ದರು. ಬಂಡವಾಳ ಪದ್ಧತಿಯ ಲೋಪದೋಷ, ಸಮತಾ ಧರ್ಮದ ಮೇಲ್ಮೆ ಇವುಗಳನ್ನು ಕೂಲಿಕಾರರಿಗೆ ಬೋಧಿಸಲೂ ಇಲ್ಲ. ೧೮೯೮ರಲ್ಲಿ ಸ್ಟಾಲಿನ್ ಜಾರ್ಜಿಯದ ಪಕ್ಷಕ್ಕೆ ಕಾಲಿಟ್ಟಾಗ ಇದ್ದ ಸ್ಥಿತಿ ಹೀಗೆ:—

ಸ್ಟಾಲಿನ್ ಪ್ರವೇಶಿಸಿದುದೇ ತಡ, ಕೂಲಿಕಾರ ಸದಸ್ಯರಲ್ಲಿ ಜೀವಕಳೆ ತುಂಬಿತು. ಸ್ಟಾಲಿನ್ನನ ಉತ್ಸಾಹ, ಕೆಚ್ಚು ಕಂಡು, ಪಕ್ಷದಲ್ಲಿದ್ದ ತರುಣರೆಲ್ಲರೂ ಅವನ ಕಡೆ ಆಕರ್ಷಿಸಲ್ಪಟ್ಟರು. ಪಕ್ಷದಲ್ಲೂ ಉಗ್ರಗಾಮಿಗಳದೇ ಒಂದು ತಂಡ ತಲೆಯೆತ್ತಿತು. ಮಂದಗಾಮಿಗಳಾದ ಕೆಲವು ಹಿರಿ ಸಾಮ್ಯವಾದಿಗಳಿಗೆ ಇದು ರುಚಿಸಲಿಲ್ಲ. ಸ್ಟಾಲಿನ್ನನ ವಿಚಾರಲಹರಿಯನ್ನು ಅವರು ಖಂಡಿಸಿದರು. ಅವರ ಶಿಥಿಲನೀತಿಯನ್ನು ಇತಿಶ್ರೀ ಮಾಡಲು ಸ್ಟಾಲಿನ್ ಅಹೋರಾತ್ರಿ ಹೋರಾಡಿದನು. ಈ ಹೋರಾಟದಲ್ಲಿ ಅವನಿಗೆ ಅನಿರೀಕ್ಷಿತ ಕಡೆಯಿಂದ ಬೆಂಬಲ ದೊರೆಯಿತು. ಮುಬ್ಬಿನಲ್ಲಿ ಸ್ಟಾಲಿನ್ನನ ಕೈಹಿಡಿದು, ಮೈದಡವಿದ ಮಹಾ ಪುರುಷ ಲೆನಿನ್.

## ಲೆನಿನ್

ರಶಿಯದಲ್ಲಿ ಕ್ರಾಂತಿಯನ್ನೆಬ್ಬಿಸಿ, ವಿಶ್ವದ ಇತಿಹಾಸದಲ್ಲಿ ಹೊಸ ಮನ್ವಂತರ ಸಾಧಿಸಿ, ಅಜರಾಮರವಾದ ಕೀರ್ತಿಗಳಿಸಿದ ಲೆನಿನ್‌ನು ೧೮೭೦ನೇ ಇಸವಿ ಎಪ್ರೀಲ್ ೨೨ರಲ್ಲಿ ಜನ್ಮವೆತ್ತಿದನು. ಅವನು ಹುಟ್ಟಿದುದು ಸಿಂಬ್ರಿಸ್ಕ್ ಪುಣ್ಯಕ್ಷೇತ್ರದಲ್ಲಿ. ಶಿಕ್ಷಕನ ಮಗ. ಮನೆಯಲ್ಲಿ ಅನುಕೂಲವಿದ್ದುದರಿಂದ ಉಚ್ಚಶಿಕ್ಷಣದ ಭಾಗ್ಯ ಲೆನಿನ್ನನಿಗೆ ಲಭಿಸಿತು. ಕಾಝುನ್ ವಿಶ್ವವಿದ್ಯಾಲಯದಲ್ಲಿ ಲೆನಿನ್ ಅಭ್ಯಾಸ ಮಾಡುತ್ತಿದ್ದಾಗ ಒಂದು ಮಹತ್ವದ ಘಟನೆ ಸಂಭವಿಸಿತು. ಝಾರನ ಕೊಲೆಯ ಒಳಸಂಚಿನಲ್ಲಿ ಭಾಗವಹಿಸಿದನೆಂದು ಅವನ ಹಿರಿ ಅಣ್ಣನನ್ನು ಗಲ್ಲಿಗೇರಿಸಿದರು. ಪೋಲೀಸರ ವಕ್ರದೃಷ್ಟಿ ಇಡೀ ಕುಟುಂ-

ಒದ ಮೇಲೆ ಬಿದ್ದು ಲೆನಿನ್ನನೂ ಆಹುತಿಯಾದ. ಶಾಲೆಯಿಂದ ಅವನನ್ನು ಹೊರಗಟ್ಟಿದರು. ಅಣ್ಣನ ಕೊಲೆಯಿಂದ ಲೆನಿನ್ ರೊಚ್ಚಿಗೆದ್ದು ಝಾರನ ಪ್ರಭುತ್ವವನ್ನು ಬುಡುಮೇಲು ಮಾಡಲು ಕ್ರಾಂತಿಯ ಪಥ ಹಿಡಿದ. ೧೮೯೫ ರಲ್ಲಿ ಸರಕಾರವು ಅವನನ್ನು ಸೈಬೀರಿಯಕ್ಕೆ ಗಡೀಪಾರುಮಾಡಿತು. ಅಲ್ಲಿದ್ದಾಗ ಲೆನಿನ್‌ನಿಗೆ ರೂಪಕ ಇವಳ ಪರಿಚಯುವಾಯಿತು. ಕ್ರಾಂತಿಚಟುವಟಿಕೆಯಲ್ಲಿ ಆಸಕ್ತಳಾಗಿದ್ದುದರಿಂದ ರೂಪಕಳನ್ನು ಸೈಬೀರಿಯಕ್ಕೆ ಕಳಿಸಿತ್ತು ಝಾರ್ ಸರಕಾರ. ಸ್ನೇಹದಿಂದ ಪ್ರೇಮ ಬೆಳೆದು ಲೆನಿನ್ ಅವಳನ್ನು ವಿವಾಹವಾದ. ೫ ವರುಷಗಳ ಶಿಕ್ಷೆಯನ್ನು ಅನುಭವಿಸಿದರೂ ಸ್ವದೇಶಕ್ಕೆ ಹಿಂತಿರುಗಲು ಅಸಾಧ್ಯವಾಗಿದ್ದುದರಿಂದ ಲೆನಿನ್ ಸ್ವಿಜರ್ಲೆಂಡಿಗೆ ಒಂದು ಜಿನೆವಾ ನಗರದಲ್ಲಿ ಆಶ್ರಯ ಪಡೆದನು.

ಲೆನಿನ್ ಮೇಧಾವಿ. ಉದ್ದಾಮ ಪಂಡಿತ. ಮಾರ್ಕ್ಸನ ತತ್ವವನ್ನು ಅವನಂತೆ ಸರಿಯಾಗಿ ಅರ್ಥ ಮಾಡಿಕೊಂಡವರಿಲ್ಲ. ಅವನ ದೂರದೃಷ್ಟಿ, ನಿರ್ಣಯಬುದ್ಧಿ, ಅಪಾರವೂ ಅಸಾಧಾರಣವೂ ಅದ್ವಿತೀಯವಾದುದೂ ಆಗಿದೆ. ಝಾರನ ಮುಕುಟಮಣಿಯನ್ನು ಉರುಳಿಸಲು ಅವನದು ಭೀಷ್ಮ ಪ್ರತಿಜ್ಞೆ. ೫ ವರುಷಗಳ ವನವಾಸದಿಂದ ಆ ಧ್ಯೇಯ ಮರೆತಿದ್ದಿಲ್ಲ. ಅದರ ಬದಲು ನಿಷ್ಠೆ ಬೆಳೆದುಬಂದಿದೆ. ಕ್ರಾಂತಿಯ ಬಗೆ ಹೇಗೆ? ತಂತ್ರಮಂತ್ರ ಆವುದು? ಎಂಬದನ್ನು ಹಗಲಿರುಳು ಚಡಪಡಿಸುತ್ತಿದ್ದನು. ಜಿನೆವಾಕ್ಕೆ ಬಂದ ಮೇಲೆ 'ಇಸ್ಕ್ರಾ' ಎಂಬ ಪತ್ರಿಕೆ ಹೊರಡಿಸಿ ತನ್ನ ವಿಚಾರಗಳನ್ನೆಲ್ಲ ಒರೆಯತೊಡಗಿದನು. 'ಇಸ್ಕ್ರಾ' ಎಂದರೆ ಕಿಡಿ. ಈ 'ಕಿಡಿ' ಅಖಿಲ ರಶಿಯದ ನಂದಾದೀಪವಾಗಿ ಬೆಳಗಲಿಯೆಂದು ಲೆನಿನ್ ಸಂದೇಶ ಬೀರಿದನು. ಲೆನಿನ್‌ನ ರಣಕಹಳೆ ದೇಶದ ಮೂಲೆಮೂಲೆಗೂ ಕೇಳಿಸಿತು. ಲೆನಿನ್‌ನ ಬರಹಗಳು ತರುಣರ ರಕುತವನ್ನು ಉಕ್ಕೇರಿಸಿದುವು. ಅವನ ಸಿಡಿಲಿನ ನುಡಿಗೆ ಜಡಜಾಡ್ಯ ಎತ್ತಲೋ ಓಡಿತು. ಅವನ ಮಿಂಚಿನ ವಿಚಾರಶಕ್ತಿಗೆ ಜನ ಕುಣಿದಾಡಿದರು. ಲೆನಿನ್‌ನ ಮಾತು ರಶಿಯದಲ್ಲಿ ವೇದವಾಕ್ಯವಾಗಿ ಪರಿಣಮಿಸಿತು. ಅಖಿಲ ರಶಿಯದ ಚಳವಳಿಯ ಸೂತ್ರಧಾರನಾದ ಲೆನಿನ್. ಪ್ರಾಯಶಃ ಗಾಂಧೀಜಿಯವರನ್ನು ಬಿಟ್ಟರೆ, ಈ ಶತಮಾನದಲ್ಲಿ ಲೆನಿನ್‌ನಂತಹ ಅದ್ಭುತ ವ್ಯಕ್ತಿ, ಮಹಾಪುರುಷ ಇನ್ನೊಬ್ಬ ಜನಿಸಿರುವನೋ ಇಲ್ಲವೋ?

## ಲೆನಿನ್ನನ ವಿಚಾರಗಳು

ಆಗ ರಶಿಯಾದ ಸಾಮ್ಯವಾದೀ ಕೂಲಿಕಾರ ಪಕ್ಷದಲ್ಲಿ ಎರಡು ರೀತಿಯ ವಿಚಾರ ಪ್ರವಾಹಗಳಿದ್ದವು. ಸಾಮ್ಯವಾದೀ ಸಮಾಜದ ರಚನೆ ಅವರೆಲ್ಲರ ಪವಿತ್ರವಾದ ಗುರಿ. ಆದರೆ ಅದರ ಸಾಧನ ವಿಧಿವಿಧಾನಗಳಲ್ಲಿ ಮಾತ್ರ ಭಿನ್ನಾಭಿಪ್ರಾಯಗಳಿದ್ದುವು. ಶಾಂತ ಉಪಾಯವೇ ಶ್ರೇಯಸ್ಕರ ವೆಂದು ಒಂದು ಪಂಗಡದವರ ವಿಚಾರಲಹರಿ. ಸಹಕಾರ ಅವರ ಬೀಜಮಂತ್ರ ಘಟನಾತ್ಮಕ ಚಳವಳಿಯನ್ನು ಅವಲಂಬಿಸಿ, ಬಹುಸಂಖ್ಯಾಕ ಪ್ರಜೆಗಳ ಮತ ಗಳಿಸಿ, ಹೊಸ ಸಮಾಜ ರಚಿಸುವುದು ಹಿತವಿಹಿತವೆಂದು ಅವರ ಅಭಿಪ್ರಾಯ. ಲೆನಿನ್ ಇದಕ್ಕೆ ಕಡುವಿರೋಧಿ. ಆ ರೀತಿಯ ಮತಗಳು ಮಾರ್ಕ್ಸನ ತತ್ವದ ಅಪಾರ್ಥವೆಂದೆನ್ನುತ್ತಾನೆ. ವ್ಯವಸ್ಥಿತ ರಾಜ್ಯ ಸ್ಥಿತಿಯನ್ನು ಮಾರ್ಪಡಿಸ ಬೇಕಾದರೆ, ಬಂಡಾಯವಲ್ಲದೆ ಬೇರೆ ಗತ್ಯಂತರವೇ ಇಲ್ಲ. ಅದನ್ನು ಸಾಧಿಸಲು ತೋಳ್ಬಲ, ಹಿಂಸಾಚರಣೆ ದೋಷವಲ್ಲ. ವಿಪ್ಲವದ ಮುಂದಾಳುಗಳು ಕೂಲಿ-ಕಾರ ಮತ್ತು ರೈತ ಜನಸಾಮಾನ್ಯರು. ಧನಿಕ ಮಧ್ಯಮ ವರ್ಗದವರೊಡನೆ ಜನಸಾಮಾನ್ಯರು ಸಮರಸವಾಗಬೇಕೆಂಬುದಕ್ಕೆ ಲೆನಿನ್ ಒಪ್ಪಲಾರ. ಕೂಲಿ ಕಾರರಲ್ಲಿ ವರ್ಗಕಲಹವನ್ನು ಕೆದರಿ ಆಂದೋಲನಕ್ಕೆ ಅವರನ್ನು ಅಟ್ಟಬೇಕು. ಅವರಿಗೆ ಮಾರ್ಗದರ್ಶಕರಾಗಲು ಪಕ್ಷದ ವರಿಷ್ಠ ಸಮಿತಿ—ಅದಕ್ಕೊಬ್ಬ ಯಜಮಾನ—ಇರುವುದೂ ಅತಿ ಅವಶ್ಯ. ಅಧಿಪತ್ಯ ಸಮಿತಿಯ ಸದಸ್ಯರು ಅತಿ ನಿಷ್ಠಾವಂತರಾಗಿರಬೇಕಲ್ಲದೆ ಧರ್ಮಪ್ರವಾದಿಗಳಂತೆ ಶಿಸ್ತಿನಿಂದ ದುಡಿ ಯಬೇಕು. ಬಂಡಾಯವಾದ ಮೇಲೂ ಪಕ್ಷದ ಅಧಿಪತ್ಯ—ಅದಕ್ಕೊಬ್ಬ ಸರ್ವಾಧಿಕಾರಿ ಇರಬೇಕಾಗಿದೆ. ಅದು ಎಷ್ಟು ಕಾಲದ ವರೆಗೆ? ಸಾಮ್ಯ ವಾದೀ ಸಮಾಜ ರಚಿಸಲ್ಪಡುವ ವರೆಗೆ; ಬಂಡವಾಳದ ಬೇರನ್ನೇ ಕಿತ್ತೊ ಗೆದು ವರ್ಗಕಲಹವಿಲ್ಲದಂತೆ ಮಾಡಿ, ಜನರು ತಂತಮ್ಮ ಕರ್ತವ್ಯವರಿತು ಸರ್ವಜನ ಕ್ಷೇಮ ಚಿಂತನೆಯಿಂದ ಬಾಳುವ ವರೆಗೆ. ಈ ಸೋಪಾನವನ್ನೇರಿ ದೊಡನೆಯೇ ವರಿಷ್ಠ ಸಮಿತಿ—ಸರ್ವಾಧಿಕಾರಿ ಅದೃಶ್ಯರಾಗುವರು. ಇದಕ್ಕೆ ಲೆನಿನ್ನನ ಸಂಘವಾದ ( ಕಮ್ಯೂನಿಝಂ ) ಎಂದೆನ್ನುತ್ತಾರೆ.

## ಗುರುವಿನ ಹೆಜ್ಜೆಯಲ್ಲಿ

ಸ್ಟಾಲಿನ್ ಈ ಮೊದಲೇ ಲೆನಿನ್ನನ ಗುಣಗಾನವನ್ನಾಲಿಸಿದ್ದ ಮಾತ್ರ.

ಹೆಚ್ಚಿನ ಪರಿಜ್ಞಾನವಿರಲಿಲ್ಲ. ಈಗ ಯಾರೋ ಕೆಲವರು ಜಿನೆವಾದಿಂದ 'ಕಿಡಿ' ಯನ್ನು ಸೆರಗಿನಲ್ಲಿ ಕಟ್ಟಿಕೊಂಡು ಬಂದರು ಜಾರ್ಜಿಯಾಕ್ಕೆ. 'ಕಿಡಿ' ಲೆನಿನ್ನನ ವ್ಯಕ್ತಿತ್ವವನ್ನು ಪ್ರದರ್ಶಿಸಿತು. ಸ್ಟಾಲಿನ್ ಬೆಪ್ಪು ಬೆರಗಾಗಿ ಹೋದ. ಏನು ಪ್ರತಿಭೆ, ಏನು ತರ್ಕ, ಏನು ಜ್ಞಾನ! ಸ್ಟಾಲಿನ್ ಮೋಹಿತನಾಗಿ ಬಿಟ್ಟ. ಕ್ರಾಂತಿಯನ್ನೆಬ್ಬಿಸಲು ಹುಟ್ಟಿ ಬಂದ ಕಾರಣಪುರುಷ, ನಾಯಕ, ಈತನೇ ಎಂದು ಅವನಿಗೆ ಮನವಟ್ಟಾಗಿ ಹೋಯಿತು. ಲೆನಿನ್ನನ ಮೇಲೆ ಬಹಳ ಭಯಭಕ್ತಿಯುಂಟಾಯಿತು. ಲೆನಿನ್ ತನ್ನ ಗುರುವೆಂದು ಭಾವಿಸಿ, ಹೃದಯಮಂದಿರದಲ್ಲಿ ಆರಾಧಿಸತೊಡಗಿದನು. ಅಂದಿನಿಂದ ಸ್ಟಾಲಿನ್, ಗುರು ಹಾಕಿದ ಗೆರೆದಾಟಿ ಹೋಗಲಿಲ್ಲ. ಈ ಜಗತ್ತಿನಲ್ಲಿ ಸ್ಟಾಲಿನ್ ಯಾರಿಗಾದರೂ ತಲೆ ಬಾಗಿಸಿದ್ದರೆ ಅದು ಲೆನಿನನೊಬ್ಬನಿಗೇ ಸರಿ.

---

## ಬಂಧನ ಮತ್ತು ಕಾರಾಗೃಹವಾಸ

ಬಂಡವಲು ಪದ್ಧತಿಯು ಜನಿಸಿದಾಗಲೆ ಅದು ತನ್ನ ಮೃತ್ಯುವನ್ನು ಸೆರಗಿನಲ್ಲಿ ಕಟ್ಟಿಕೊಂಡು ಬಂದಿದೆ. ಅದರದು ಭಸ್ಮಾಸುರನ ಅವತಾರ. ಸ್ವಹಸ್ತದಿಂದಲೇ ಅದರ ಅಳಿವು ಖಂಡಿತ. ವಿಪ್ಲವವಾಗುವ ಮಾತು ಸೂರ್ಯ ಚಂದ್ರರಷ್ಟು ಸತ್ಯ. ಮಾರ್ಕ್ಸನು ಅಷ್ಟು ದೃಢ ನಂಬಿಗೆ. ಆದರೆ ವಿಪ್ಲವದ ಹಾದಿ ನಿರೀಕ್ಷಿಸುತ್ತ ಕುಳಿತರೆ ಫಲವಿಲ್ಲ. ಅಷ್ಟರ ವರೆಗೆ ಹಸಿವು ತಡೆದೀತೇ? ಹೋರಾಡಿದರೆ ಕ್ರಾಂತಿಯ ಕಾಳಿ ಬೇಗನೆ ಒಲಿಯದಿರಳು. ಹೋರಾಡದೆ ಇಷ್ಟಾರ್ಥ ಸಿದ್ಧಿಯಾಗದು. ಶಿಶು ಕೂಗದ ವಿನಃ ತಾಯಿ ಮೊಲೆಯುಣಿಸುವ ಗೋಜಿಗೆ ಹೋಗಳು. ಮಗುವಿನ ಕೂಗು ಹಸಿವೆಯ ಹೋರಾಟವೆ. ಅದರಂತೆ ವಿಶ್ವದ ಅಸ್ತಿತ್ವವೂ ಒಂದು ರೀತಿಯ ಹೋರಾಟವನ್ನೇ ಅವಲಂಬಿಸಿದೆ. ಹೋರಾಟವು ಉತ್ಕರ್ಷದ ಹೆದ್ದಾರಿ; ಉದ್ಧಾರದ ಮಾರ್ಗ. ಸ್ಟಾಲಿನ್ನನ ವಿಚಾರ ಹಾಗೆ. ಅದನ್ನು ಕಾರ್ಯಾಚರಣೆಯಲ್ಲಿ ತರಲು ಅವನು ಟೊಂಕ ಕಟ್ಟಿದನು.

## ಟಿಫ್ಲಿಸ್ ಪರಿಷತ್ತು

ಸ್ಟಾಲಿನ್ನನ ಪ್ರಯತ್ನದಿಂದ ೧೯೦೧ನೇ ನವೆಂಬರದಲ್ಲಿ ಟಿಫ್ಲಿಸ್ ನಗರದಲ್ಲಿ ಸಾಮ್ಯವಾದಿಗಳ ಪರಿಷತ್ತು ಕೂಡಿತು. ಕಾಕೇಶಿಯದ ಕ್ರಾಂತಿಕಾರ ಪ್ರಮುಖರೆಲ್ಲರೂ ಸಭೆಗೆ ದಯಮಾಡಿಸಿದ್ದರು. ಸ್ಟಾಲಿನ್‌ನ ಸೂಚನೆಯಂತೆ ಜಾರ್ಜಿಯದ ಸಾಮ್ಯವಾದಿ ಕೂಲಿಕಾರ ಪಕ್ಷವು ಅಖಿಲ ರಶಿಯ ಪಕ್ಷದ ಅಂಗವಾಗಬೇಕೆಂಬುದನ್ನು ಸಭೆ ಒಪ್ಪಿತು. ಕಾಕೇಶಿಯದಲ್ಲಿ ಕೂಲಿಕಾರರ ಸಂಘಟನೆ ಮಾಡಲು ಒಂದು ಕೇಂದ್ರ ಸಮಿತಿ ರಚಿತವಾಯಿತು. ಸ್ಟಾಲಿನ್ ಅದರ ನಾಯಕನಾಗಿ ಆರಿಸಲ್ಪಟ್ಟ. ಇಪ್ಪತ್ತೆರಡು ವರುಷದ ಹುಡುಗ. ಜಾರ್ಜಿಯದ ಕ್ರಾಂತಿ ಚಟುವಟಿಕೆಯ ಸೂತ್ರಧಾರನಾದ.

## ಬ್ರಜೋಲಾ ಪತ್ರಿಕೆ

ಸ್ಟಾಲಿನ್ನನು ರಾಜಕೀಯ ಚಳವಳಿಗೆ ಆರಂಭಿಸಿದಾಗ ಜನ ಸಂಘಟನೆಗೆ ಒಂದು ಪತ್ರಿಕೆ ಅವಶ್ಯವೆಂದು ಮನಗಂಡನು. ಆದರೆ ಸರಕಾರದ ವಿರುದ್ಧ ಪತ್ರಿಕೆಗಳನ್ನು ಮುದ್ರಿಸಲು ಯಾವ ಮುದ್ರಣಾಲಯವೂ ಒಪ್ಪುವಂತಿರಲಿಲ್ಲ. ಸ್ಟಾಲಿನ್ ಇಷ್ಟರಿಂದಲೇ ಸಂಕಲ್ಪಕ್ಕೆ ತಿಲಾಂಜಲಿ ಎರೆಯಲಿಲ್ಲ ಪಾತಾಳಕ್ಕೆ ತೆರಳಿ ಸಂಜೀವನ ತಂದ ಬಭ್ರುವಾಹನನಂತೆ ಎಲ್ಲೋ ಹೋಗಿ ಏನೇನೋ ಮಾಡಿ ಮುದ್ರಣ ಯಂತ್ರ, ಮೊಳೆಗಳನ್ನು ತಂದನು. ೧೯೦೧ರ ಕೊನೆಗೆ 'ಬ್ರಜೋಲಾ' ಪತ್ರಿಕೆ ಪ್ರಕಟವಾಯಿತು. ಅವನೊಡನೆ ಕೂಡಿಕೊಂಡಿದ್ದ ಕೆಲವು ಕ್ರಾಂತಿಕಾರರೇ ಈ ಯಂತ್ರವನ್ನು ತಿರುಗಿಸುತ್ತಿದ್ದರು. ಸ್ಟಾಲಿನ್ ಬರೆಯುತ್ತಿದ್ದ. ಬಹು ರಹಸ್ಯವಾಗಿ ಪತ್ರಿಕೆಯನ್ನು ಕೂಲಿಕಾರರಿಗೆ ಹಂಚುತ್ತಿದ್ದರು. ಸ್ಟಾಲಿನ್ನನು ಈ ಪತ್ರಿಕೆಯ ಮೂಲಕ ಲೆನಿನ್‌ನ ವಿಚಾರಗಳನ್ನು ಅನುಮೋದಿಸುತ್ತ ಬಂದ. ಅವನ ಲೇಖನಗಳು ಕೂಲಿಕಾರರಲ್ಲಿ ನವಜಾಗೃತಿಯನ್ನುಂಟು ಮಾಡಲು ಸಹಾಯವಾದುವು. ಕೂಲಿಕಾರರಿಗೆ 'ಬ್ರಜೋಲಾ' ಸಾಮ್ಯವಾದದ ದೀಕ್ಷೆಯನ್ನಿತ್ತಿತು.

ಪತ್ರಿಕೆ ಜನರ ಮನವನ್ನು ಸೆಳೆಯುವ ಸೂಜಿಗಲ್ಲು. ನಿಪುಣನಾದ ಪತ್ರಿಕೋದ್ಯಮಿ ಮಹಾಜನರ ರೀತಿ ನೀತಿ ಮನೋವೃತ್ತಿನ್ನು ರೂಪಿಸಬಲ್ಲ. ಕಾಲುವೆ ಕಡಿದು ನೀರನ್ನು ಹರಿಸಿದಂತೆ ಜನ ಜೀವನವನ್ನು ಹಾದಿಗೆ ಹಚ್ಚಲು ಪತ್ರಿಕೆಗಿದ್ದಷ್ಟು ಸಂದರ್ಭ, ಅನುಕೂಲತೆ, ಶಕ್ತಿ, ಇನ್ನಾವುದಕ್ಕೂ

ಇಲ್ಲ. ಪತ್ರಿಕೋದ್ಯಮವೊಂದು ಉದ್ಯೋಗ, ಧನ ಸಂಪಾದನೆಯ ಸಾಧನ ವೆಂದರಿತು ವರ್ತಿಸಿದರೆ ಅದರಿಂದ ಜನಸೇವೆಯಾಗದು. ಉಚ್ಚ ಧ್ಯೇಯಗಳಿಗೆ ಅಂಟಿಕೊಂಡ ಪತ್ರಿಕೋದ್ಯಮಿ ನಿಜವಾದ ಪತ್ರಿಕಾಕರ್ತ; ಶ್ರೇಷ್ಠ ಪತ್ರಿಕೋದ್ಯಮಿ. ಅವನೊಬ್ಬ ವೈದ್ಯನಿದ್ದಂತೆ. ವೈದ್ಯರು ಜನರ ನಾಡಿ ಹಿಡಿದು ಯಾವ ರೋಗ ಬಾಧಿಸುತ್ತಿದೆಯೆಂದು ನೋಡಿ ಅದರ ನಿವಾರಣೆಗೆ ತಕ್ಕ ಔಷಧೋಪಚಾರಗಳನ್ನು ಮಾಡುತ್ತಾರೆ. ಪತ್ರಿಕೋದ್ಯಮಿ ರಾಜ್ಯದ ನಾಡಿ ಹಿಡಿದು ಜನರು ಯಾವ ರೋಗದಿಂದ ಬಳಲುತ್ತಿದ್ದಾರೆಂದು ಗೊತ್ತುಮಾಡಿ ಕೊಂಡು ಜನರ ಕ್ಷೇಮ ಚಿಂತನದಿಂದ ಉಚಿತ ಮಾರ್ಗವನ್ನು ತೋರುವನು ಸ್ಟಾಲಿನ್ನನದು ಇಂಥ ದಿವ್ಯ ಮಾರ್ಗ.

## ಬಾಟುಂ ಪಕ್ಷದ ಸ್ಥಾಪನೆ

ಟಿಫ್ಲಿಸಾದಲ್ಲಿ ಕ್ರಾಂತಿಕಾಳಿಯ ಗುಡಿಗೆ ಭದ್ರವಾದ ತಳಹದಿ ಹಾಕಿದ ಮೇಲೆ ಸ್ಟಾಲಿನ್ನನು ೧೯೦೧ನೇ ನವಂಬರದಲ್ಲಿ ಬಾಟುಂಗೆ ಬಂದನು. ಬಾಟುಂ ಕಪ್ಪುಸಮುದ್ರದ ಪೂರ್ವ ಕರಾವಳಿಯಲ್ಲಿರುವ ಬಂದರ. ಪೆಟ್ರೋಲ್ ಎಣ್ಣೆಯ ಕೇಂದ್ರ. ಎಣ್ಣೆ ಶುದ್ಧ ಮಾಡುವ ಅನೇಕ ಕಾರ್ಖಾನೆಗಳು ಅಲ್ಲಿವೆ. ಅವುಗಳಲ್ಲಿ ಮಂಟಶೆವ್ಹ, ರಾತಶೀಲ್ಡ, ಸಿದೆರೆಡಿಸ್ ಮೊದಲಾದವು ಹೆಸರಾದ ಕಾರ್ಖಾನೆಗಳು. ಸಾವಿರಾರು ಕೂಲಿಕಾರರು ಅಲ್ಲಿ ಹಗಲಿರುಳು ದುಡಿಯು ತ್ತಿದ್ದರು. ಅಲ್ಪ ವೇತನದಿಂದ ಕೂಲಿಕಾರರಲ್ಲಿ ಅಸಮಾಧಾನವು ತುಂಬಿತ್ತು. ಆದರೆ ಐಕ್ಯವಿಲ್ಲದೇ ಇದ್ದುದರಿಂದ ಅವರು ಹೆಚ್ಚಿನ ಕೂಲಿಗಾಗಿ ಬೇಡುತಿ ದ್ದಿಲ್ಲ. ಜಗತ್ತಿನಲ್ಲಿ ಬೇಡದೆ ಯಾವುದಾದರೂ ದೊರೆಯುವಂತಿದೆಯೇ?

ಸ್ಟಾಲಿನ್ನನು ಬಾಟುಂಗೆ ಬಂದೊಡನೆಯೇ ಕರಪತ್ರಗಳನ್ನು ಹಂಚಿ ದನು. ಅತೃಪ್ತ ಕೂಲಿಕಾರರು ಅದರಿಂದ ಆಕರ್ಷಿಸಲ್ಪಟ್ಟ ಮೇಲೆ ಅಭ್ಯಾಸ ಕೂಟವನ್ನೇರ್ಪಡಿಸಿ, ಅಲ್ಲಿ ಕೂಲಿಕಾರರ ಹೀನ ದೀನ ಸ್ಥಿತಿಗತಿಗಳನ್ನು ವಿವ ರಿಸಿದನು. ಮುಂದೆ ಒಂದೊಂದೇ ಮೆಟ್ಟಲೇರಿ ಸಾಮ್ಯವಾದದ ಅಟ್ಟಕ್ಕೆ ಅವರನ್ನೆತ್ತಿದ. ದಿನದಿನಕ್ಕೆ ಅಭ್ಯಾಸ ಕೂಟಕ್ಕೆ ಬರುವ ಕೂಲಿಕಾರರ ಸಂಖೆ ಬೆಳೆದು ಕೊನೆಗೆ ಅದೇ ವರುಷ ಡಿಸೆಂಬರ ತಿಂಗಳ ೩೧ನೇ ತಾರೀಖಿನ ದಿನ ಸ್ಟಾಲಿನ್ನನು ಬಾಟುಂ ಸಾಮ್ಯವಾದಿ ಪಕ್ಷವನ್ನು ಸ್ಥಾಪಿಸಿದನು.

## ಮುಷ್ಕರ

ಬೆಣಚು ಕಲ್ಲಿನಲ್ಲಿ ಬೆಂಕಿಯಿದ್ದಂತೆ ಮಾನವನಲ್ಲೂ ಕ್ರಾಂತಿಯ ಕಿಡಿ ಅಡಗಿದೆ. ತಿಕ್ಕಾಟದಿಂದ ಕಲ್ಲಿನಲ್ಲಿ ಬೆಂಕಿ ಹುಟ್ಟುವದು. ಅದರಂತೆ ಅವರಲ್ಲಿದ್ದ ಸುಪ್ತ ಚೇತನವು ತಿಕ್ಕಾಟದಿಂದ ಪ್ರಜ್ವಲಿಸುವುದು. ಸ್ಟಾಲಿನ್ನನ ಚಟುವಟಿಕೆಯಿಂದ ಬಾಟುಂ ಕೂಲಿಕಾರರಲ್ಲಿ ಹೊಸ ಹುರುಪು ಹುಮ್ಮಸ್ಸುಗಳುಂಟಾದವು. ಸಂಘಟನೆಯಿಂದ ಧೈರ್ಯ ಬಂದಿತು. ಜನವರಿ, ಫೆಬ್ರುವರಿಗಳಲ್ಲಿ ಮಂಟಶೆವ್ ಮತ್ತು ರಾತಶೀಲ್ಡ ಕಾರ್ಖಾನೆಗಳ ಕೂಲಿಕಾರರು ಹೆಚ್ಚಿನ ಕೂಲಿಗಾಗಿ ಮುಷ್ಕರ ಹೂಡಿದರು. ಕೂಲಿಕಾರರಲ್ಲಿ ಐಕ್ಯವೆಷ್ಟರ ಮಟ್ಟಿಗಿದ್ದಿತೆಂದರೆ ಕಾರ್ಖಾನೆಗೆ ಒಬ್ಬನೂ ತೆರಳಿರಲಿಲ್ಲ. ಅದು ಸ್ಟಾಲಿನ್ನನ ಸಂಘಟನಾ ಶಕ್ತಿಯ ದ್ಯೋತಕವೆನಬಹುದು !

## ಮತ ಪ್ರದರ್ಶನ

ಈ ಸಂಪಿನಿಂದ ಅಧಿಕಾರಿಗಳು ತಳಮಳಗೊಂಡರು. ಕೂಲಿಕಾರರ ಒಕ್ಕಟ್ಟು, ದಿಟ್ಟತನ ಕಂಡು ಭೀತಿಕಾರುರಾದರು. ಇದೆಲ್ಲ ಜೊಸೆಫ್‌ನ ಕಾರಭಾರ. ಬಾಟುಂ ಕೂಲಿಕಾರರ ತಲೆ ಕೆಡಿಸಿದ್ದಾನೆ. ದೊಡ್ಡ ಕ್ರಾಂತಿಕಾರ ಎಂದು ಗುಪ್ತ ಪೋಲೀಸರು ಅವನ ಜಾತಕ ಬರೆದು ಕಳಿಸಿದರು. ಮುಷ್ಕರದ ಹುಟ್ಟಡಗಿಸಲು ಗವ್ಹರ್ನರನೇ ಬಾಟುಂಗೆ ಬಂದ. ಕೂಲಿಕಾರರಲ್ಲಿ ಭಯಭೀತಿಯನ್ನುಂಟು ಮಾಡಲು ೩೨ ಜನರನ್ನು ಸೆರೆ ಹಿಡಿಯಲಾಯಿತು. ಈ ಬಂಧನದ ನಿಷೇಧಾರ್ಥ ಸ್ಟಾಲಿನ್ನನ ಸೂಚನೆಯಂತೆ ಮರುದಿನ ೪೦೦ ಕೂಲಿಕಾರರು ಮತ ಪ್ರದರ್ಶಿಸಿ ಪೋಲೀಸ ಕಚೇರಿಯ ವರೆಗೆ ಬಂದು ತಮ್ಮ ಬಂಧುಗಳನ್ನು ಬಿಡುಗಡೆ ಮಾಡಬೇಕೆಂದು ಬೇಡಿದರು. ಪೋಲೀಸರು ಅವರಲ್ಲಿ ೩೦೦ ಕೂಲಿಕಾರರನ್ನು ಸೆರೆಹಿಡಿದರು. ಸ್ಟಾಲಿನ್ ಹೋರಾಟವನ್ನು ಅಲ್ಲಿಗೇ ನಿಲ್ಲಿಸಲಿಲ್ಲ. ಮರುದಿನ ಪುನಃ ೪೦೦ ಜನರ ಮೆರವಣಿಗೆ ಹೊರಟಿತು. ಪೋಲೀಸರು ಮತ್ತೆ ಅವರನ್ನು ಬಂಧಿಸಿ ಸೆರೆಮನೆಗೆ ಕಳಿಸಿದರು. ಮುಂದೆ ಸ್ಟಾಲಿನ್ ದೊಡ್ಡ ರಾಜಕೀಯ ಮತ ಪ್ರದರ್ಶನವನ್ನೆ ಸಂಘಟಿಸಿದನು. ಸರ್ವಸಾಧಾರಣ ೬ ಸಾವಿರ ಕೂಲಿಕಾರರು ಈ ಮೆರವಣಿಗೆಯಲ್ಲಿ ಪಾಲುಗೊಂಡರು. ಅಧಿಕಾರಿಗಳು ತಬ್ಬಿಬ್ಬಾಗಿ ಸೈನ್ಯದವರನ್ನು

ಕರೆಸಿಕೊಳ್ಳಬೇಕಾಯಿತು. ಸೈನಿಕರು ರಸ್ತೆಗಳಲ್ಲಿ ತೋಪುಗಳನ್ನು ಇರಿಸಿ ಚದರದೇ ಇದ್ದರೆ ಗುಂಡಿನ ಮಳೆಗರೆಯಲಾಗುವದೆಂದು ಅಬ್ಬರಿಸಿದರು. ಆಗ ಸ್ಟಾಲಿನನಾಡಿದ ನಾಲ್ಕು ವೀರಾವೇಶದ ನುಡಿಗಳು ನಡುಗಿದ ಅಂಜುಕುಳಿಗಳಲ್ಲಿ ರಣೋತ್ಸಾಹವನ್ನುಂಟು ಮಾಡಿದುವು. ನಿಂತಲ್ಲಿಂದ ಒಬ್ಬನೂ ಕದಲಲಿಲ್ಲ. ಕೊನೆಗೆ ಕೂಲಿಕಾರರ ಬೇಡಿಕೆ ಮನ್ನಿಸಲ್ಪಟ್ಟಿತು. ಆರ್ಥಿಕ ಕಾರಣಗಳಿಗಾಗಿ ಎದ್ದ ಮುಷ್ಕರ, ರಾಜಕೀಯ ಸ್ವರೂಪವನ್ನೇ ತಾಳಿತು. ಸಾಮ್ಯವಾದಿಗಳ ತಂತ್ರವಿದೇ.

**ಬಂಧನ-ಶಿಕ್ಷೆ**

ಈ ಮುಷ್ಕರದಿಂದ ಬಾಟುಂ ಸಂತೋಷ ಸಾಗರದಲ್ಲಿ ತೇಲಿತು. ಕೂಲಿಕಾರರಲ್ಲಿ ಉತ್ಸಾಹದ ತೆರೆ ಉಕ್ಕಿತು. ಈ ವಿಜಯ ಅಖಿಲ ಕಾಕೇಶಿಯದ ಮೇಲೆ ಛಾಯೆ ಚೆಲ್ಲದೆ ಇರಲಿಲ್ಲ. ಆ ಕಾಲದಲ್ಲಿ ಸಂಪು ಹೂಡುವುದೆಂದರೆ ದೊಡ್ಡ ಯುದ್ಧ. ಬಹಳ ಎದೆಗಾರಿಕೆ ಬೇಕು. ತೋಪು ತುಬಾಕಿಗಳಿಗಂಜಿದ ಮಂದಗಾಮಿ ಮುಖಂಡರು ತಣ್ಣಗೆ ಕುಳಿತಿದ್ದರು. ಆ ಪರಂಪರೆಯನ್ನು ಮುರಿದ ಸ್ಟಾಲಿನ್ನನನ್ನು ಸರಕಾರವು ಬಿಟ್ಟೀತೇ? ಕೂಲಿಕಾರರನ್ನು ಕುಣಿಸುವ ಈ ಸೂತ್ರಧಾರಿಯ ಆಟ ನಿಲ್ಲಿಸಲು ೧೯೦೩ನೇ ಏಪ್ರೀಲದಲ್ಲಿ ಸೆರೆ ಹಿಡಿದರು. ೨೦ ತಿಂಗಳುಗಳ ವರೆಗೆ ಸ್ಟಾಲಿನ್ ಬಾಟುಂ ಸೆರೆಮನೆ ಅನ್ನವುಂಡ. ಕೈಕಾಲುಗಳಿಗೆ ಬೇಡಿ ಹಾಕಿ ದೇಹವು ಅತ್ತಿತ್ತ ಅಲುಗಾಡದಂತೆ ಬಂಧಿಸಿಡಬಹುದು. ಆದರೆ ಬುದ್ಧಿ ಮನಸುಗಳೆರಡನ್ನು ಬಂಧಿಸಿಡಲಾಗುತ್ತದೆಯೇ? ಸ್ಟಾಲಿನ್ನನ ಇಚ್ಛಾಶಕ್ತಿಯೆದುರು ಅವು ತೃಣ ಸಮಾನ. ಬೇಡಿ ಗೋಡೆಗಳನ್ನು ಮುರಿದು ದಾಟುವ ಶಕ್ತಿ ಅದರದು. ಸ್ಟಾಲಿನ್ನನು ಅದರ ಬಲದಿಂದ ಸೆರೆಮನೆಯ ಹೊರಗಿದ್ದ ಕ್ರಾಂತಿಕಾರರೊಡನೆ ಸಂಬಂಧ ಬೆಳೆಸಿ ಬಾಟುಂ ಪಕ್ಷಕ್ಕೆ ಉಚಿತ ಸಲಹೆಗಳನ್ನೀಯುತ್ತಿದ್ದನು. ಪೋಲೀಸರಿಗೆ ಇದರ ಗಂಧಗಾಳಿ ತಗುಲಿದೊಡನೆಯೇ ಸ್ಟಾಲಿನ್ನನನ್ನು ಕುಟಾಯಿ ಪರ್ವತ ಪ್ರದೇಶದಲ್ಲಿರುವ ಸೆರೆಮನೆಗೊಯ್ದರು. ಆ ಸೆರೆಮನೆಯಲ್ಲಿದ್ದ ಜನರ ತಲೆ ಕೂಡ ತಿರುಗಿದಡನ್ನು ನೋಡಿ ಈ 'ಮಹಾಮಾರಿ'ಯನ್ನು ಆದಷ್ಟು ದೂರ ಅಟ್ಟಿಬಿಡುವದೇ ಲೇಸೆಂದು ತಿಳಿದು ಅಧಿಕಾರಿಗಳು ಮೂರು ವರುಷ ಗಡೀಪಾರು ಶಿಕ್ಷೆ ವಿಧಿಸಿ ಪೂರ್ವ ಸೈಬೇರಿಯಾಕ್ಕೆ ಕಳಿಸಿದರು.

## ಪಲಾಯನ

ಕೆಥೆರಿನಾ ಮಹಾತಾಯಿ ದುಃಖಿಕ್ಕಿಡಾದಳು. ಇರುವವನು ಒಬ್ಬನೇ ಮಗ. ಸೈಬೀರಿಯದಲ್ಲಿ ಬೆವರು ಸುರಿಸಿ ಬಾಳುವ ಆವನ ಕರುಣ ಕಥೆ ಕೇಳಿ ಹೆಣ್ಣು ಜೀವ ತಳಮಳಗೊಂಡಿತು. ಆದರೆ ಸೆರಗಿನಲ್ಲಿ ಅಡಿಕೆ ಕಟ್ಟಿಕೊಂಡಂತೆ ಕಂಗಸ್ಸು ಕಟ್ಟಿಕೊಳ್ಳಲಿಕ್ಕಾಗುತ್ತದೆಯೇ? ಹಂಬಲಿಸಿ ಹಂಬಲಿಸಿ ಕಂಬನಿ ಸುರಿಸುವುದೊಂದೇ ಆಕೆಯ ಪಾಲಿನ ಭಾಗ್ಯ. ಕೆಥೆರಿನಾ ಈ ರೀತಿ ವ್ಯಥೆಯಿಂದ ಕೊರಗುತ್ತಿದ್ದಾಗ ಒಂದು ದಿನ ರಾತ್ರಿ 'ಅಮ್ಮಾ, ಅಮ್ಮಾ' ಎಂದು ಯಾರೋ ಕರೆದು ಬಾಗಿಲು ತಟ್ಟಿದರು. ಹೊರಗೆ ಕಣ್ಣು ಕಾಣದ ಕತ್ತಲೆ. ಹಿಮ ಬೀಳುತ್ತಿದೆ. ಹಿಮಗಾಳಿಗೆ ಮೈ ಕೈ ಕೊರೆಯುತ್ತಿವೆ. ಈ ಮಧ್ಯರಾತ್ರಿ ಕರೆಯುವವರಾದರೂ ಯಾರು? ಕೆಥೆರಿನಾ ಕುತೂಹಲದಿಂದ ಬಾಗಿಲು ತೆರೆದು ನೋಡುತ್ತಾಳೆ—ಸ್ಟಾಲಿನ್. ಅವಳ ಮುದ್ದು ಮಗು. ಕಾಣಲು ಹಂಬಲಿಸಿದ್ದ ಕಂದ. ಕೆಥೆರಿನಾ ತನ್ನ ಕಣ್ಣನ್ನು ತಾನೆ ನಂಬಲಾರದಾದಳು. ಸೈಬೀರಿಯದ ಸೆರೆಮನೆ ಕೂಡಾ ಅವನನ್ನು ತಡೆದಿರಿಸಲಿಲ್ಲ. ಏನು ಧೈರ್ಯ! ತಲೆ ತಪ್ಪಿಸಿಕೊಂಡು ಬಂದಾಗ ಪೋಲೀಸರ ಕಣ್ಣಿಗೆ ಬಿದ್ದಿದ್ದರೆ ಗುಂಡಿಗೆ ಆಹುತಿಯಾಗುತಿದ್ದ. ಈಗಲೂ ಅವನನ್ನು ಹಿಡಿಯಲಿಕ್ಕೆ ಝಾರ್ ಸರಕಾರದ ಯಂತ್ರವೇ ಚಲಿಸತೊಡಗಿದೆ. ಬೇಟೆ ನಾಯಿಗಳಂತೆ ಪೋಲೀಸರು ಸುಳುವು ಹಿಡಿದಿದ್ದಾರೆ. ಮನೆಯಲ್ಲಿ ಬಹಳ ಹೊತ್ತು ಉಳಿದರೆ ಸಂಚಕಾರವುಂಟು. ಸ್ಟಾಲಿನ್, ತಾಯಿಗೆ ನಾಲ್ಕು ಸಮಾಧಾನದ ಮಾತು ಹೇಳಿ ಒಂದೆರಡು ಬ್ರೆಡ್ಡಿನ ತುಣುಕುಗಳನ್ನು ಸ್ವಲ್ಪ ಉಪ್ಪನ್ನು ಜೇಬಿನೊಳಗೆ ತುರುಕಿಸಿಕೊಂಡು ಮನೆಯಿಂದ ಹೊರಬಿದ್ದ. ಮನೆ ಪಾವಟಿಗೆಗಳನ್ನು ಇಳಿದೊಡನೆಯೇ ಹಿಮ ಅವನನ್ನು ಮುಸುಕಿತು. ಸ್ಟಾಲಿನ್ ಅದೃಶ್ಯನಾಗಿ ಬಿಟ್ಟ. 'ಇವನಿಗೆ ಜೀವದ ಹಂಗೇ ಇಲ್ಲ' ಎಂದು ತಾಯಿ ಗೊಣಗುಟ್ಟಿ ಬಾಗಿಲಿಕ್ಕಿಕೊಂಡಳು.

## ಇಬ್ಬಣ

ಕತ್ತಲೆ ಕರಗಿ ಬೆಳಕು ಹರಿದು ಬಂದಾಗ ಸ್ಟಾಲಿನ್ನನಿಗೆ ಸಾಮ್ಯವಾದಿಗಳ ಎರಡು ಪ್ರತ್ಯಪ್ರತ್ಯೇಕ ಶಿಬಿರಗಳು ಕಾಣಿಸಿದವು. ಅವನು ಸೆರೆಮನೆಯಲ್ಲಿದ್ದಾಗ ಪಕ್ಷದಲ್ಲಿ ಇಬ್ಬಣಗಳಾದುವು. ಸಾಮ್ಯವಾದಿಗಳಲ್ಲಿ ಮಂದ

ಗಾಮಿಗಳದೊಂದು, ಉಗ್ರಗಾಮಿಗಳದು ಇನ್ನೊಂದು ಹೀಗೆ ಎರಡು ತಲೆ, ತಂಡಗಳಿದ್ದುವು. ಇವರೊಳಗೆ ಸದಾ ತಿಕ್ಕಾಟವೇಳುತಿತ್ತು. ಕೂಲಿಕಾರರ ಮುಂದಾಳ್ತನ, ವರಿಷ್ಠ ಸಮಿತಿ, ಅದಕ್ಕೊಬ್ಬ ಯಜಮಾನ, ಬಂಡಾಯ ಮೊದಲಾದ ಲೆನಿನ್ನನ ತತ್ವವಿಚಾರಗಳಿಗೆಲ್ಲ ಒಪ್ಪದ ಹೇಡಿಗಳು ಕೆಲವರಿದ್ದರು. ಕಪೋತ ಗೂಡನ್ನವನ್ನೇರಿದರೆ ಸಾಕು ಎನ್ನೆನ್ನುವ ಅಲ್ಪ ಸಂತುಷ್ಟಿಗಳು ಇವರು. ಹಿಮಗಿರಿಯನ್ನು ಏರುವ ಆಕಾಂಕ್ಷೆಯಿದ್ದವರಿಗೆ ಕಪೋತಗೂಡ್ಡ ಪರಾಟದಿಂದ ಆಶೆ ತಣಿದೀತೇ? ಮಧ್ಯಮ ವರ್ಗದ ಬಾಲಕ್ಕೆ ಕೂಲಿಕಾರ ರನ್ನು ಗಂಟು ಹಾಕುವ ನೀತಿಗೆ ಲೆನಿನ್ ಒದ್ದವಿರೋಧಿ. ಹಸಿವಿಲ್ಲದ ಮಧ್ಯಮ ವರ್ಗ ಕೊನೆಯ ವರೆಗೆ ಹೋರಾಟ ನಡೆಸುವುದೆಂದೇನು? ಝಾರನೊಡನೆ ಕೂಡಿಕೊಳ್ಳುವ ಸಂಭವ, ಅಂಜಿಕೆಯು ಇದ್ದಿತು ಅವರಿಗೆ. ಶ್ರೀಮಂತರ ಪ್ರಜಾಪ್ರಭುತ್ವವು ಅವರಿಗೆ ಬೇಡ. ಈ ಭಿನ್ನಾಭಿಪ್ರಾಯ ಶಿಖರಕ್ಕೆ ಮುಟ್ಟಿ ಕೊನೆಗೆ ೧೯೦೩ರಲ್ಲಿ ಬ್ರುಸೆಲ್ಸ್‌ದಲ್ಲಿ ಸ್ಯಾಮ್ಯವಾದಿಗಳ ಸಭೆಗೂಡಿತು. ಮತ ತೆಗೆಯಲಾಗಿ ಲೆನಿನ್ನನ ಉಗ್ರ ಪಂಗಡ ಬಹು ಸಂಖ್ಯಾಕ ಪಕ್ಷವಾಯಿತು. ರಶಿಯನ ಭಾಷೆಯಲ್ಲಿ ‘ ಬಹು ಸಂಖ್ಯಾಕ ’ ಶಬ್ದಕ್ಕೆ ‘ ಬಾಲ್ಶೆವಿಸ್ಟೊ ’ ಎಂದೆನ್ನುತ್ತಾರೆ. ಆ ಹೆಸರಿನಗನುಸಾರವಾಗಿ ಲೆನಿನ್‌ನ ಗುಂಪಿಗೆ ಬಾಲ್ಶೆವಿಸ್ಟರು ಎಂಬ ಮುದ್ರೆ ಬಿತ್ತು. ಅವರು ಅಂಟಿ ಕೊಂಡ, ಪ್ರತಿಪಾದಿಸಿದ ತತ್ವ ‘ ಬಾಲ್ಶೆವಿಸಂ ’ ಆಯಿತು. (ಅದಕ್ಕೆ ಕಮ್ಯು ನಿಸಂ ಎಂಬ ಇನ್ನೊಂದು ಹೆಸರೂ ಇದೆ.) ಅಲ್ಪ ಸಂಖ್ಯಾಕರು ಮೆನ್ಶೆವಿಸ್ಟ ರೆಂದೂ ಅವರ ಅನುಕೂಲಸಿಂಧುವಾದ ‘ ಮೆನ್ಶೆವಿಸಂ ’ ಎಂದೂ ಬಳಕೆಯಲ್ಲಿ ಬಂದುವು.

## ಸಂಘಟನೆ

ಸೈಬೇರಿಯದಿಂದ ಪಲಾಯನಮಾಡಿದ ಸ್ಟಾಲಿನ್ನನು ಕಾಕೇಶಿಯದಲ್ಲಿ ಉದಯವಾದುದು ೧೯೦೪ರಲ್ಲಿ. ಬಂದವನೇ ಲೆನಿನ್ನನ ಪಕ್ಷ ಹಿಡಿದು ಕಾದ ತೊಡಗಿದನು. ಕಾಕೇಶಿಯದ ಬಾಲ್ಶೆವಿಸ್ಟರಿಗೆಲ್ಲ ಜೀವಕಳೆ ಬಂದಿತು. ‘ ಇದು ಮಹಾ ಜನರ ಪಕ್ಷ. ಸಂತಂತ್ರವಾದುದು. ಜನಸಾಮಾನ್ಯರಿಂದಲೇ ಅವರ ಉದ್ಧಾರ. ಮತ್ತೊಬ್ಬರಿಂದಾಗದು. ಸಶಸ್ತ್ರ ಬಂಡಾಯದಿಂದಲೇ ಜನಸಾಮಾನ್ಯರ ವಿಮೋಚನೆಯು ಶಕ್ಯ. ಇನ್ನಾವ ಮಾರ್ಗವೂ ಉಪಯೋಗ

ವಿಲ್ಲವೆಂದು ಸ್ಟ್ಯಾಲಿನ್ ಗರ್ಜಿಸಿದನು. ಅದೇ ವರುಷಾಂತ್ಯದಲ್ಲಿ ಸ್ಟ್ಯಾಲಿನ್ ಬಾಲ್ಶೆವಿಕರ ಸಭೆಯೊಂದನ್ನು ಕೂಡಿಸಿದನು. ಇಷ್ಟರಿಂದಲೂ ಸ್ಟ್ಯಾಲಿನ್ ತೃಪ್ತನಾಗದೆ ಅಲ್ಲಲ್ಲಿ ಗೋಪ್ಯ ಸಂಘಗಳನ್ನು ರಚಿಸಿ, ಕೂಲಿಕಾರರನ್ನು ಸಂಘಟಿಸಿದ. ಝಾರಶಾಹಿಯ ವಿರುದ್ಧ ಅವ್ಯಾಹತ ಪ್ರಚಾರ ನಡೆಸಿದ. ಅವನ ಪರಿಶ್ರಮದಿಂದ ಕಾಕೇಶಿಯದಲ್ಲೂ ಕೂಲಿಕಾರ ಪಕ್ಷದ ಬಲವು ಪ್ರವೃದ್ಧ ಮಾನವಾಯಿತು. ಕಾಕೇಶಿಯವು ಬಾಲ್ಶೆವಿಕರ ಬಲಿಷ್ಠ ದುರ್ಗವಾಯಿತು.

—

## ೧೯೦೫ರ ಅಗ್ನಿ ಪರೀಕ್ಷೆ

ಯುದ್ಧವೆಂದರೆ ಕ್ರಾಂತಿಕಾರರಿಗೆ ಹರ್ಷ. ಅದು ಕ್ರಾಂತಿ ಚಟುವಟಿಕೆ ಗಳಿಗೆ ಸುಗ್ಗಿಯ ಕಾಲ. ಸರಕಾರದ ಲಕ್ಷ್ಯ ರಣರಂಗದ ಕಡೆ ಸೆಳೆಯಲ್ಪಡು ವುದರಿಂದ ತಮ್ಮ ಉದ್ದೇಶ ಸಾಧಿಸಲು ಅವರಿಗೆ ದಾರಿ ಸುಗಮವಾಗಿ ಕಾಣುತ್ತದೆ. ೧೯೦೫ರಲ್ಲಿ ರಶಿಯ ಜಪಾನ ಯುದ್ಧವು ಆರಂಭವಾದಾಗ ಸ್ಟ್ಯಾಲಿನ್ನನ ಮೊಗವರಳಿತು. 'ಬಂಧುಗಳೇ ಏಳಿ. ಕಾರ್ಯ ಕೈಕೊಳ್ಳಿ. ಆಳಿ ಬಾಳಿ. ಇದು ಒಳ್ಳೆಯ ಸಂದರ್ಭ' ಎಂದು ಅವನು ಮೊಳಗತೊಡಗಿದನು. ಯುದ್ಧದಲ್ಲಿ ಝಾರ ಸರಕಾರಕ್ಕೆ ಸೋಲಿನ ಮೇಲೆ ಸೋಲು ಪ್ರಾಪ್ತವಾ ದುದು ಉರಿಯುವ ಬೆಂಕಿಗೆ ಗಾಳಿ ಬೀಸಿದಂತಾಯಿತು. ಅಪಜಯದಿಂದ ಹತಾಶರಾದ ಅವಮಾನಿತರಾದ, ರೇಗಿದ, ನೊಂದ, ಬೆಂದ, ಪ್ರಜೆಗಳು ಝಾರನ ವಿರುದ್ಧ ನೆಟಿಕೆ ಮುರಿಯತೊಡಗಿದರು. ದೇಶದಲ್ಲಿ ಆರ್ಥಿಕ ಮುಗ್ಗಟ್ಟು, ಆಹಾರ ವಸ್ತುಗಳ ಅಭಾವ, ಇವುಗಳಿಂದ ಜನ ತೀರ ಕಂಗೆ ಟ್ಟರು. ಕೂಲಿಕಾರರ ಮುಷ್ಕರ, ರೈತರ ದಂಗೆಗಳಿಂದ ನಾಡಿನಲ್ಲಿ ಆಂತರಿಕ ಕ್ಷೋಭೆ ಪರಮಾವಧಿಗೆ ಮುಟ್ಟಿತು. ದಿನೇ ದಿನೇ ಸಾಮ್ಯವಾದಿಗಳ ಕಡೆ ಜನರ ಮನವೊಲಿದು ಅವರು ಸಹಸ್ರ ಬಾಹುಗಳಾದರು. ಝಾರಶಾಹಿಯ ಕಟ್ಟಡ ಅಲುಗಾಡಿತು. ೧೯೦೫ ಜನವರಿ ೯ನೇ ರವಿವಾರ ನಡೆದ ಅತ್ಯಾ ಚಾರ ಝಾರ್ ಪ್ರಭುತ್ವದ ಸಾವಿನ ಗಂಟೆಯಾಗಿ ಪರಿಣಮಿಸಿತು.

## ರಕ್ತ ರವಿವಾರ

ಪೀಟರ್ಸ್ ಬರ್ಗ್ ನಗರದ ಕೂಲಿಕಾರರ ದಾರುಣ ಪರಿಸ್ಥಿತಿ ಕಂಡು ಪಾದ್ರಿ ಗೇಪೇನನ ಎದೆ ಕರಗಿತು. ಅವನು ಸಾಮ್ಯವಾದಿಯಲ್ಲ; ಕ್ರಾಂತಿಕಾರನಲ್ಲ. ಸ್ವಾಮಿಭಕ್ತಿಯುಳ್ಳ ಪ್ರಜೆ. ಪ್ರಾಯಶಃ ಅಧಿಕಾರಿಗಳು ಕೂಲಿಕಾರರ ಸ್ಥಿತಿಗತಿಯನ್ನು ಝಾರನ ಕಿವಿಗೆ ಮುಟ್ಟಿಸುವದಿಲ್ಲ; ಆದುದರಿಂದ ಈ ಪರಿಸ್ಥಿತಿಯೊದಗಿರಬೇಕೆಂದು ನಂಬಿ, ಝಾರನ ಕಡೆ ಶಿಷ್ಟಮಂಡಳವನ್ನೊಯ್ದರೆ ಅವನು ಕರುಣೆಯಿಂದ ತನ್ನ ಪ್ರಜೆಗಳ ದುಃಖ ಪರಿಹರಿಸಬಹುದೆಂದು ಯೋಚಿಸಿ, ಅದರಂತೆ ಕೂಲಿಕಾರರನ್ನು ಕಟ್ಟಿಕೊಂಡು ಝಾರನನ್ನು ಕಾಣಲು ಅರಮನೆಗೆ ತೆರಳಿದನು. ಅವನ ಹಿಂದೆ ನಗರದ ಸಾವಿರಾರು ಕೂಲಿಕಾರರು, ಅವರ ಹೆಂಡರು ಮಕ್ಕಳು ಎಲ್ಲ ಹಿಂಬಾಲಿಸಿದರು. ಝಾರನ ಸದಸದ್ವಿವೇಕಕ್ಕೆ ವಿನಂತಿ ಮಾಡಿಕೊಳ್ಳಲು, ಅವನ ಹೃದಯ ಪರಿವರ್ತನೆ ಮಾಡಲು ಹೊರಟ ಪುಣ್ಯಾತ್ಮ ಗೇಪೆನ್. ಆದರೆ ಅರಮನೆಯ ಮಹಾದ್ವಾರದಲ್ಲಿ ಅವನಿಗೂ, ಕೂಲಿಕಾರ ಪರಿವಾರಕ್ಕೂ ದೊರೆತ ಸ್ವಾಗತವೇನು ಗೊತ್ತೇ ? ತೋಫು ತುಬಾಕಿಗಳ ಏಟು. ಝಾರನ ಸೈನಿಕರು ನಿರಪರಾಧಿ ಜನರ ಮೇಲೆ ಗುಂಡಿನ ಮಳೆಗರೆದರು. ಕಾಸೆಕ್ ಸವಾರರು ಹೆಣ್ಣೆನ್ನದೆ, ಗಂಡೆನ್ನದೆ ಜನರ ಗುಂಪಿನ ಮೇಲೆ ಕುದುರೆಗಳನ್ನು ಓಡಿಸಿದರು. ಝಾರನ ದುಷ್ಕರ್ಮದಿಂದ ಒಂದು ಸಾವಿರ ಕೂಲಿಕಾರರು ಮೃತರಾದರು. ಎರಡು ಸಾವಿರ ಜನ ಗಾಯಗೊಂಡರು. ಝಾರನ ಅರಮನೆಯ ಮುಂಭಾಗದಲ್ಲಿ ನೆತ್ತರಿನ ನದಿ ಹರಿಯಿತು.

## ಸಾರ್ವತ್ರಿಕ ಸಂಪು

ಈ ರಾಕ್ಷಸೀ ಕೃತ್ಯದಿಂದ ಪ್ರಜೆಗಳಿಗೆ ಝಾರನ ಮೇಲಿದ್ದ ಅಲ್ಪಸ್ವಲ್ಪ ಅಭಿಮಾನ ಆದರಗಳೂ ಅಳಿದುವು. ಅದರ ಬದಲು ಜನರಲ್ಲಿ ಅವನ ಮೇಲೆ ತಿರಸ್ಕಾರ, ದ್ವೇಷ, ಪ್ರತೀಕಾರ ಭಾವನೆಗಳು ಅಂಕುರಿಸಿದವು. ಸೈಂಟ್ ಪೀಟರ್ಸಬರ್ಗಿನ ಕೂಲಿಕಾರರಂತೂ ಈ ಅತ್ಯಾಚಾರದ ನಿಷೇಧಾರ್ಥವಾಗಿ ಕಾರ್ಖಾನೆಗಳಿಂದ ಹೊರಗೆ ಬಂದರು. ಅವರನ್ನನುಸರಿಸಿ ಮಾಸ್ಕೋ, ಖಾರ್ಖಾವ್, ಒಡೆಸ್ಸಾ, ರೀಗ ಮೊದಲಾದ ಪ್ರತಿಯೊಂದು ನಗರಗಳಲ್ಲಿದ್ದ ಕೂಲಿಕಾರರು ಸಂಪು ಹೂಡಿದರು. ಸ್ಟಾಲಿನ್ನನ ಕಾಕೇಶಿಯವೂ ಹಿಂದೆ

ಉಳಿಯಲಿಲ್ಲ. ಬಾಕು, ಜಾಟ್ಲಿಂ, ಕುಟಾಯಿ ಮೊದಲಾದ ಕಡೆ ಕೂಲಿಕಾರರು ಬೀದಿಗಿಳಿದರು. ಅಂತೂ ಇಂತೂ ಪ್ರತಿಯೊಂದು ನಗರದಲ್ಲೂ ಮುಷ್ಕರಗಳೇ ಮುಷ್ಕರಗಳು! ಭಾರೀ ಮೆರವಣಿಗೆಗಳು! ಮುಂಜಾನೆಯಿಂದ ಸಂಜೆಯ ವರೆಗೆ ಅವರ ರಣಗೀತಗಳು ಅನಂತವಾಗಿ ಕೇಳಿಸುತ್ತಿವೆ. ಜನವರಿ ತಿಂಗಳೊಂದರಲ್ಲೇ ರಶಿಯದಲ್ಲಿ ಸಂಪು ಹೂಡಿದವರ ಸಂಖ್ಯೆ ಎಂಟೂವರೆ ಲಕ್ಷ. ಔದ್ಯೋಗಿಕ ಪ್ರಗತಿ ಹೊಂದಿದ ರಾಷ್ಟ್ರಗಳೆಂದು ಜಂಭ ಕೊಚ್ಚಿಕೊಳ್ಳುವ ಬ್ರಿಟನ್, ಜರ್ಮನಿ, ಅಮೇರಿಕ ಮೊದಲಾದ ಯಾವ ದೇಶಗಳಲ್ಲೂ ಇಷ್ಟು ದೊಡ್ಡ ಪ್ರಮಾಣದಲ್ಲಿ ಮುಷ್ಕರಗಳಾಗಿಲ್ಲ. ರಶಿಯದ ಕೂಲಿಕಾರರಲ್ಲಿ ಎಷ್ಟರ ಮಟ್ಟಿನ ಜಾಗೃತಿಯಾಗಿತ್ತೆಂದು ಇದು ಸ್ಪಷ್ಟಪಡಿಸುತ್ತದೆ. ಈ ಹೋರಾಟದಿಂದ ಅವರ ಮಾನಸಿಕ ವಿಕಾಸಕ್ಕೆ ಅವಕಾಶ ದೊರೆಯಿತು. ಸ್ವಯಂ ಶಕ್ತಿಯ ಅರಿವು ಬಂತು. ಇಷ್ಟೇ ಅಲ್ಲ. ಮುಷ್ಕರ ರಾಜಕೀಯ ವಿದ್ರೋಹದ ಹೆದ್ದಾರಿ ಹಿಡಿಯಿತು. ಕೂಲಿಕಾರರ ರೊಚ್ಚು ಹೆಚ್ಚಾಗಿ ಸಾಮ್ಯವಾದಿ ಪಕ್ಷದ ನೆಳಲಡಿ ಆಶ್ರಯ ಪಡೆದರು. ಬಾಲ್ಶೆವಿಕರ ಗೌರವ, ಪ್ರತಿಷ್ಠೆ, ಪ್ರಭಾವ ರಾತ್ರಿ ಬೆಳಗಾಗುವುದರೊಳಗೆ ವೃದ್ಧಿಗೊಂಡಿತು. 'ಬಾಲ್ಶೆವಿಕರನ್ನುವದು ಸರಿ. ಝಾರನ ತಲೆ ಚೆಂಡಾಡದೆ ಸುಖವಿಲ್ಲ' ಎಂದರು ಜನ.

### ರೈತರ ರೊಚ್ಚು

ನಗರಗಳಲ್ಲಿದ್ದ ಬೆಂಕಿಯು ಈ ಬೇಗ ಹಳ್ಳಿಪಳ್ಳಿಗಳಿಗೂ ವ್ಯಾಪಿಸಿದಾಗ ರೈತರು ರೊಚ್ಚಿಗೆದ್ದರು. ಜಾರ್ಜಿಯಾ ಪ್ರಾಂತದ ಒಕ್ಕಲಿಗರ ಪ್ರತೀಕಾರ ಅಳತೆಗೆಟ್ಟಿತು. ಗೋರಿ, ಟಿಫ್ಲಿಸ್, ಸೇನಕಿ, ಜುಗದೀಡಿ ಜಿಲ್ಹೆಗಳು ಅವರ ಕುಡುಗೋಲಿಗೆ ನಡುಗಿತು. ಈ ಭಾಗದ ರೈತ ಜನ ಧನಿಕ ಜಮೀನ್ದಾರರ ತಲೆ ಕಡಿದು ಅವರ ಆಸ್ತಿಪಾಸ್ತಿಯನ್ನು ಸ್ವಾಧೀನ ಮಾಡಿಕೊಂಡರು. ಕರ ಕೊಡಲು ನಿರಾಕರಿಸಿ, ಝಾರನ ಅಧಿಕಾರಿಗಳನ್ನು ಕಂಡಲ್ಲಿ ಕೆಂಡಕಾರಿದರು. ಜಾರ್ಜಿಯದಂತೆಯೇ ಇನ್ನಿತರ ಭಾಗಗಳಲ್ಲೂ ಒಕ್ಕಲಿಗರು ವಿದ್ರೋಹ ಚಟುವಟಿಕೆಗಳಲ್ಲಿ ಆಸಕ್ತರಾದರು. ಈ ವರುಷ ಹೆಚ್ಚು ಕಡಿಮೆ ರಶಿಯದಲ್ಲಿ ಎರಡು ಸಾವಿರ ಭೂಮಿ ಒಡೆಯರು ಅಳಿದರು.

ರಶಿಯದ ಒಕ್ಕಲಿಗರು ಅಜ್ಞಾನಿಗಳು, ದೀನರು, ದರಿದ್ರರು. ಹೀಗಿ

ರುವಾಗ ಒಮ್ಮೆಯೇ ಅವರಲ್ಲಿ ಇಷ್ಟು ಜಾಗೃತಿಯಾದುದು ಸ್ವಲ್ಪ ಆಶ್ಚರ್ಯಕರವಾಗಿ ಕಾಣಲು ಸಾಕು. ಆದರೆ, ಅಂದಿನ ರಶಿಯದ ಸಾಮಾಜಿಕ ಸ್ಥಿತಿಗತಿಯನ್ನರಿತರೆ ವಿಸ್ಮಯಕ್ಕೆ ಎಡೆ ತೋರುವುದಿಲ್ಲ. ರಾಷ್ಟ್ರದಲ್ಲಿ ಔದ್ಯೋಗಿಕ ಬೆಳವಣಿಗೆಯಾದಾಗ ಹಳ್ಳಿಗಳಿಂದ ಬಡ ರೈತರು, ಅಥವಾ ದೊಡ್ಡ ಕುಟುಂಬದಿಂದ ಕೆಲವು ತರುಣರು ಪೇಟೆಗೆ ಸೇರಿ ಕಣಿ, ಕಾರಖಾನೆ, ಕೈಗಾರಿಕೆಗಳಲ್ಲಿ ದುಡಿವ ಶ್ರಮಜೀವಿಗಳಾದರು. ನಗರದಲ್ಲಿ ಸಂಪು, ಮತ್ತು ಪ್ರದರ್ಶನ, ಅಭ್ಯಾಸಕೂಟ, ಪತ್ರಿಕೆ ಮೊದಲಾದವುಗಳಿಂದ ಅವರಿಗೆ ಕ್ರಾಂತಿ ತತ್ವ ವಿಚಾರಗಳ ದೀಕ್ಷೆ ಲಭಿಸಿತ್ತು. ಮುಷ್ಕರ ಕಾಲದಲ್ಲಿ ಕೆಲಸ ಕಳೆದು ಕೊಂಡಾಗ ಅಥವಾ ಝಾರನ ಕರಾಳ ಶಾಸನಕ್ಕೆ ಬಲಿಯಾದಾಗ ಅವರು ತಂತಮ್ಮ ಹಳ್ಳಿಗಳಿಗೇ ಹಿಂತಿರುಗುತ್ತಿದ್ದರು. ಊರಿಗೆ ಬಂದಾಗ ಮನೆ ಮಂದಿಯೊಂದಿಗೆ, ನೆರೆಹೊರೆಯವರೊಂದಿಗೆ, ಬಾಡಮಾಳಗಾರರ ಶೋಷಣೆ, ದಬ್ಬಾಳಿಕೆ, ನಿರಂಕುಶ ಆಡಳಿತೆ, ಕ್ರಾಂತಿಕಾರರು, ಅವರ ತತ್ವ, ಸೇವೆ, ತ್ಯಾಗ, ಹೋರಾಟ, ಶಿಕ್ಷೆ, ದೇಹದಂಡನೆ ಎಲ್ಲವನ್ನೂ ವಿವರಿಸಿ ಹೇಳುವುದು ಸ್ವಾಭಾವಿಕ. ರೈತ ಜನ ಕುತೂಹಲದಿಂದ ಇದನ್ನಾಲಿಸುತ್ತಿದ್ದರು. 'ಜಮೀನ್ದಾರರ ದಾಸ್ಯ ದರ್ಪದ ವಿರುದ್ಧ ಏಳಿ. ಕೈಗೆ ಬಳೆ ಇಟ್ಟಿರುವಿರಾ? ಹೇಡಿಗಳಿರಾ' ಎಂದು ಅಣಕಿಸುತ್ತಿದ್ದರು. ಆ ಕೂಲಿಕಾರರು ಹತ್ತು ಬಾರಿ ಕಲ್ಲು ಎಸೆದಾಗ ಒಮ್ಮೆಯಾದರು ಗುರಿಮುಟ್ಟದೆ ಇದ್ದೀತೇ? ಹಳ್ಳಿಗಳಲ್ಲೆಲ್ಲ ನವವಿಚಾರ, ನವಸ್ಫೂರ್ತಿ, ವಾತಾವರಣ ರೂಪುಗೊಂಡಿತು. ಪೇಟೆ ಪಟ್ಟಣಗಳಲ್ಲಿ ತಮ್ಮ ಮಕ್ಕಳುಮರಿ, ಬಂಧುಬಳಗಕ್ಕೆ ಸೇರಿದ ಕೂಲಿಕಾರರು ಹೋರಾಟ ಹೂಡಿದಾಗ, ಸೆರೆಮನೆ ಕಂಡಾಗ, ಪ್ರಾಣ ಅರ್ಪಿಸಿದಾಗ, ಈ ರೈತ ಜನರ ಎದೆ ತಳಮಳಗೊಂಡು ಅವರು ಕತ್ತಿ ಕುಡಗೋಲು ಹಿಡಿದು ಕೊಂಡೇ ಹೊರಡುತ್ತಿದ್ದರು. ೧೯೦೫ರಲ್ಲಿ ರೈತರ ದಂಗೆ ಅಷ್ಟು ವಿಶ್ವವ್ಯಾಪಿಯಾದುದು ಹೀಗೆಯೇ.

### ಸಿಪಾಯಿ ದಂಗೆ

ಕೂಲಿಕಾರರ ಮುಷ್ಕರ, ರೈತರ ಪ್ರತೀಕಾರಗಳೊಡನೆ ಸಿಪಾಯಿ ದಂಗೆಯೂ ತಾಳಮೇಳವಾಯಿತು. ಎಷ್ಟೋ ಕಡೆಗಳಲ್ಲಿ ಕೂಲಿಕಾರರು ಸಂಪು ಮೆರವಣಿಗೆ ನಡೆಸಿದರಷ್ಟೆ; ಆಗ ಅವರ ಮೇಲೆ ಗುಂಡೆಸೆಯಲು ಅಧಿಕಾರಿ

ಗಳು ಸೇನೆಯನ್ನು ಕರೆಸಿಕೊಳ್ಳುತ್ತಿದ್ದರು. ಕೆಲವು ವೇಳೆ ನಿರಪರಾಧಿ, ನಿಶ್ಶಸ್ತ್ರ ಸ್ತ್ರೀಪುರುಷರ ಮೇಲೆ ಕೈಯೆತ್ತಲು ಈ ಸೈನಿಕರು ಒಪ್ಪಲಿಲ್ಲ. ಅಧಿಕಾರಿಗಳು ಸೈನಿಕರ ಮೇಲೆ ಶಿಸ್ತುಭಂಗ ಕಾರ್ಯಕ್ರಮ ತೆಗೆದುಕೊಂಡಾಗ ಅವರು ಪ್ರಜೆಗಳನ್ನೇ ಕೂಡಿಬಿಟ್ಟರು. ೧೯೦೫ರಲ್ಲಿ ತಂಡೋಪತಂಡವಾಗಿ ಸೈನಿಕರು ಪ್ರಜಾಪಕ್ಷವನ್ನು ಸೇರಿದರು ತಮ್ಮ ಅಧಿಕಾರಿಗಳನ್ನು ಬಂಧಿಸಿ ಸ್ವೇಚ್ಛೆಯಿಂದ ಮೆರೆದರು. ಕಪ್ಪು ಸಮುದ್ರದಲ್ಲಿದ್ದ 'ಪ್ರಿನ್ಸ್ ಪೊಟೊಮ ಕಿನ್' ಕ್ರೂಝರ್ ಯುದ್ಧ ಹಡಗದ ನಾವಿಕರು ಅಧಿಕಾರಿಗಳ ಮಾತನ್ನು ಉಲ್ಲಂಘಿಸಿ ಅವರನ್ನು ಸೆರೆಹಿಡಿದು ಆ ಹಡಗವನ್ನು ತಮ್ಮಾಧೀನಕ್ಕೆ ತಂದುಕೊಂಡರು. ಇಂಥ ನೂರಾರು ಘಟನೆಗಳು ನಡೆದುವು ಈ ವರುಷ. ಆದರೆ ಕೊನೆಗೆ ಸೈನಿಕರು ಉಪಾಯಗಾಣದೆ ದಯೆಯಿಂದ ತಮ್ಮ ಅಧಿಕಾರಿಗಳನ್ನು ಬಿಡುಗಡೆ ಮಾಡಿದರು. ಆ ಕೂಡಲೇ ಅಧಿಕಾರಿಗಳು ಕ್ರಾಂತಿಕಾರ ಸೈನಿಕರನ್ನು ದಂಡಿಸಿದರು. ಅನುಭವ, ನಾಯಕತ್ವದ ಕೊರತೆಗಳಿಂದ ಸಿಪಾಯಿ ದಂಗೆಗಳು ಫಲಕಾರಿಯಾಗಲಿಲ್ಲ.

ಅದೇನೇ ಇರಲಿ, ರಕ್ತ ರವಿವಾರದ ನಂತರ ನಾಡಿನಲ್ಲಿ ಆಂತರಿಕ ಕ್ಷೋಭೆ ವಿರಾಟಸ್ವರೂಪ ತಾಳಿತೆಂಬ ಮಾತೇನೂ ಸುಳ್ಳಲ್ಲ. ದೇಶಕ್ಕೆದೇಶವೇ ಎದ್ದಿತು ಝಾರನ ಹಿಂಸೆಯ ವಿರುದ್ಧ. ಈ ಮೊದಲು ಹಲವು ಬಾರಿ ರಶಿಯ ದಲ್ಲಿ ಬಂಡಾಯಗಳಾದುದು ಎಲ್ಲರಿಗೂ ಗೊತ್ತಿದ್ದ ಸಂಗತಿ. ಮೊಟ್ಟಮೊದ ಲನೆಯ ದಂಗೆಯೆದ್ದುದು ೧೮೨೫ರಲ್ಲಿ. ಅದು ಶ್ರೀಮಂತರ ಮತ್ತು ಮಾಂಡ ಲಿಕರ ದಂಗೆ. ಅಂದಿನಿಂದ ಝಾರ ನಿಕಲಸನ ಕೊಲೆಯಾಗುವವರೆಗೆ ಎಂದರೆ ೧೮೮೧ರ ವರೆಗೆ ಮಧ್ಯಮವರ್ಗದ ಜನ ಕ್ರಾಂತಿ ನಡೆಸಿದ್ದರು. ತಮ್ಮ ಧ್ಯೇಯಸಾಧನೆಗಾಗಿ ಅವರು ಅಸಾಧಾರಣ ಧೈರ್ಯ, ಅಪಾರತ್ಯಾಗಮಾಡಿ ದ್ದಾರೆ. ಮಹಾಜನರ ಕ್ರಾಂತಿಯನ್ನೆಬ್ಬಿಸಲು ಆಗದೇ ಇದ್ದರೂ ಜನರಿಗೆ ಆ ಚಟುವಟಿಕೆಗಳಲ್ಲಿ ಒಳ್ಳೇ ಅನುಭವ ದೊರೆಯಿತು. ಇಂದಿನ ದಂಗೆ ಶ್ರೀಮಂತರದಲ್ಲ; ಬಂಡವಾಳಶಾಹಿಗಳ ಬಾಲ ಹಿಡಿವ ಮಧ್ಯಮ ವರ್ಗದವ ರದೂ ಅಲ್ಲ. ರಶಿಯದ ಕೋಟಿಗಟ್ಟಲೆ ಜನಸಾಮಾನ್ಯರದು. ಅದರ ಶಕ್ತಿ, ಸ್ವರೂಪ, ಅನಂತ. 'ಓ, ಪಾದ್ರಿ ಗೇಪೆನ್ ! ನಿನಗೆ ನಾವು ಋಣಿಗಳಯ್ಯ' ಎಂದು ಹರಸಬೇಕು ಸಾಮ್ಯವಾದಿಗಳು.

## ಡ್ಯೂಮಾ

ಹಸಿದ ರಶಿಯದ ಜನ ಝಾರನನ್ನು ಹರಿದು ತಿನ್ನುವೆವೆಂದು ಕೂಗಿದಾಗ, ಹಂಸತೂಲಿಕಾತಲ್ಪದಲ್ಲಿ ಮಲಗಿದ್ದ ಝಾರನಿಗೆ ದುಸ್ವಪ್ನ ಬಿದ್ದಿತು. ನಡುರಾತ್ರಿಯಲ್ಲೇ ಎದ್ದ. ಕೈಕಾಲುಗಳು ಗಡಗುಟ್ಟಿ ನಡುಗುತ್ತಿದ್ದುವು. ಏನೋ ಒಂದು ರುದ್ರ ನೋಟ ಕಂಡ ನೆನಪಾದಂತಾಗಿ ಗಡಿಬಿಡಿಯಿಂದ ಆಗಸ್ಟತಿಂಗಳಲ್ಲಿ ಒಂದು ಘೋಷಣೆ ಹೊರಡಿಸಿ ಡ್ಯೂಮಾ (ಪಾರ್ಲಿಮೆಂಟ್) ವಾಗ್ದಾನವಿತ್ತ. ಈ ಪಾರ್ಲಿಮೆಂಟಿಗೆ ಜನಪ್ರತಿನಿಧಿಗಳು ಆರಿಸಲ್ಪಡಲೂ ಅಡ್ಡಿಯಿಲ್ಲ. ಆದರೆ, ಅದರಲ್ಲಿ ವಿಶಾಲ ಮತದಾನಪದ್ಧತಿ ಲೋಪವಾಗಿತ್ತು. ಪಾರ್ಲಿಮೆಂಟಿಗೆ ಇದ್ದ ಶಾಸನಾಧಿಕಾರವೂ ಶೂನ್ಯ. ಅದೊಂದು ಸಲಹೆ ಮಂಡಲ, ಝಾರನ ವಿಶೇಷಾಧಿಕಾರ ಹಾಗೆಯೇ ಉಳಿದಿದೆ. ಪಾರ್ಲಿಮೆಂಟಿನ ಸಲಹೆಯನ್ನು ಮನ್ನಿಸುವದು ಬಿಡುವದು ಅವನ ಲಹರಿ. ಅಂದ ಬಳಿಕ ಜನ ಸಾಮಾನ್ಯರಿಗೆ ದೊರೆತ ಹಕ್ಕುಗಳಾದರೂ ಏನು ? ಅದೊಂದು ಖೊಟ್ಟಿ ನಾಣ್ಯ. ಅಷ್ಟೆ. ಜನರನ್ನು ಕ್ರಾಂತಿಯ ಹೆದ್ದಾರಿಯಿಂದ ಸೆಳೆದು, ಘಟನಾತ್ಮಕ ಚಳವಳಿಯ ಕಿರುಕುಳ ಗಲ್ಲಿಗೆ, ಅಡ್ಡ ದಾರಿಗೆ ಹಚ್ಚುವ ಮಂಕುಬೂದಿ ಝಾರನದು. ಅದಕ್ಕೂ ಮರುಳಾಗುವ ಮಂದಿಗೆ ಕಡಿಮೆಯಿಲ್ಲ. ರಶಿಯದ ಉದಾರವಾದಿಗಳು, ಮೆನ್ಶೆವಿಕರು ಅಮೃತಲಭಿಸಿದ ದೇವತೆಗಳಂತೆ ನಲಿದಾಡಿದರು. ಅಮೃತದ ಹೆಸರಿನಲ್ಲಿ ಝಾರನು ' ಯೆಂಡ 'ಎರೆದಿರುವನೆಂದು ಏನು ಗೊತ್ತು, ಆ ಒಡಪಾಯಿಗಳಿಗೆ, ಆಗಸ್ಟ ಘೋಷಣೆ ಒರಿಟೊಳ್ಳೆಂದು ಲೆನಿನ್ ಸ್ಟಾಲಿನರು ಕಂಡು, ಅದನ್ನು ಸ್ವೀಕರಿಸುವುದರಲ್ಲಿ ಅರ್ಥವಿಲ್ಲವೆಂದರು. ' ಡ್ಯೂಮಾ ನಾಮಶೇಷವಾಗಲಿ ! ಅದನ್ನು ಬಹಿಷ್ಕರಿಸಿರಿ ! ಝಾರ್ ಸರಕಾರ ಮುರಿಯಿರಿ ! ಕ್ರಾಂತಿಗೆ ವಿಜಯವಾಗಲಿ ' ಎಂದು ಬಾಲ್ಶೆವಿಕರು ಒಕ್ಕೊರಲಿನಿಂದ ಸಾರಿದರು.

ಅವರೆಂದಂತೆ ಝಾರನ ಡ್ಯೂಮಾ ಗಾಳಿಗೋಪುರವಾಗಿಯೆ ಉಳಿಯಿತು. ಅದು ಒಮ್ಮೆಯೂ ಸಭೆಗೂಡಲಿಲ್ಲ. ದೇಶದಲ್ಲಿ ವಿದ್ರೋಹ ಚಟುವಟಿಕೆಗಳು ತೀವ್ರಗತಿಯಿಂದ ಸಾಗಿದುವು. ಕೂಲಿಕಾರರ ಸೋವಿಯೆಟ್ (ಮಂಡಲ) ರೈತರ ಸೋವಿಯೆಟ್, ಸೈನಿಕರ ಸೋವಿಯೆಟ್‌ಗಳು ಪೀಟರ್ಸಬರ್ಗ, ಮಾಸ್ಕೋ, ಟಿಫ್ಲಿಸ್, ಬಾಟುಂ, ಮೊದಲಾದ ಪ್ರತಿಯೊಂದು ಕಡೆ ಸ್ಥಾಪಿಸಲ್ಪಟ್ಟುವು. ಸೋವಿಯೆಟ್ಟುಗಳು ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಂ-

ತೆಯೇ ಆಡಳಿತೆಗೆ ಆರಂಭಿಸಿದುವು. ಇವುಗಳ ಆಶ್ರಯದಲ್ಲಿ ಪತ್ರಿಕೆಗಳು ಹುಟ್ಟಿ ಪತ್ರಿಕಾ ಸ್ವಾತಂತ್ರ್ಯವನ್ನೇ ಸಾರಿಬಿಟ್ಟುವು. ಮುಷ್ಕರ ಹರತಾಳ ಪುನಃ ಎದ್ದುವು. ರೇಲ್ವೆ ಟಪ್ಪಾಲು ಮೊದಲಾದ ಖಾತೆಗಳ ಕೂಲಿಕಾರರು ಕೆಲಸ ನಿಲ್ಲಿಸಿದುದರಿಂದ ಸರಕಾರದ ಯಂತ್ರವೇ ಚಲಿಸಲಾರದಾಯಿತು. ಶಾಲೆ, ವಿಶ್ವವಿದ್ಯಾಲಯಗಳು ಮಹಾಜನರ ಸಭೆಗೂಡುವ ಕೇಂದ್ರಗಳಾದುವು. ವಿದ್ರೋಹಕ್ಕೆ ಈ ರೀತಿ ಸಾರ್ವತ್ರಿಕ ಜನ ಬೆಂಬಲ ದೊರೆತುದುದನ್ನು ನೋಡಿ ಝಾರನು ಅಕ್ಟೋಬರ ತಿಂಗಳ ಅಂತ್ಯದಲ್ಲಿ ಮತ್ತೊಂದು ಘೋಷಣೆ ಹೊರಡಿಸಿ, ಸ್ವಲ್ಪ ವಿಶಾಲ ಮತದಾನ ಪದ್ಧತಿಯ ಹಕ್ಕನ್ನು ನೀಡುವುದಾಗಿ ಭರವಸೆಯಿತ್ತ. ಈ ವಾಗ್ದಾನ ಉದಾರವಾದಿಗಳನು ತೃಪ್ತಿಗೊಳಿಸಿದ ಮಾತು ಒತ್ತಟ್ಟಿಗಿರಲಿ; ಮೆನ್ಶೆವಿಕರೂ ಕುಣಿದರು. ಘಟನಾತ್ಮಕ ಪ್ರಜಾಸತ್ತೆ ದೊರೆಯಿತೆಂದು ಅವರ ವಿಶ್ವಾಸ. 'ಇಲ್ಲ' ಎಂದು ಬಾಲ್ಶೆವಿಕರು ಹೇಳಿದರೆ ಅವರು ಕೇಳುವರೇ ? ಪಕ್ಷದಲ್ಲಿ ಭಿನ್ನಾಭಿಪ್ರಾಯ ಮೆದ್ದು ಕೊನೆಗೆ ಸಾಮ್ಯವಾದಿಗಳ ಪರಿಷತ್ತು ಕೂಡಬೇಕೆಂದು ನಿಶ್ಚಯಿಸಲ್ಪಟ್ಟಿತು. ಲೆನಿನನಿಗೂ ಬರಲು ಅನುಕೂಲವಾಗುವಂತೆ ಫಿನಲಾಂಡಿನ ತಾಮ್ಮರ ಫೋರದಲ್ಲಿ ಸಭೆ ಕೂಡಿಸಿದರು.

### ಸಂಧಾನವಿಲ್ಲ-ಸಂಗ್ರಾಮ

ಡ್ಯೂಮಾದೊಡನೆ ಸಹಕರಿಸಬೇಕೆನ್ನುವ ನೀತಿ ಸ್ಟಾಲಿನ್ನನಿಗೆ ಸಹನೆಯಾಗಲಿಲ್ಲ. ಪರಿಷತ್ತಿನಲ್ಲಿ ಆವನಾಡಿದ ಮಾತುಗಳು ಮೇಲಿನ ಮಾತನ್ನೇ ಪುಷ್ಟೀಕರಿಸುತ್ತಿವೆ. 'ಸಂಧಾನ! ಎಲ್ಲಿಯ ಸಂಧಾನ? ಸರಕಾರವು ದೇಶದಲ್ಲಿ ರಕುತದ ಹೊಳೆ ಹರಿಸಿರುವಾಗ ಆದರೊಡನೆ ಸಹಕಾರವೇ ? ಡ್ಯೂಮಾ ನಟನೆ. ಒರಿ ಮೋಸ. ಜನರ ಕಣ್ಣಿಗೆ ಮಣ್ಣೆಸೆಯುವ ಬಲೆ. ಕೂಲಿಕಾರರು ರೈತರು ಮೊದಲಾದ ಜನಸಾಮಾನ್ಯರಿಗೆ ಮತದಾನ ಹಕ್ಕಿಲ್ಲ ಈ ರಾಜ್ಯಘಟನೆಯಲ್ಲಿ. ಅಂದ ಬಳಿಕೆ ನಮ್ಮ ಬೇಡಿಕೆ, ಆಶೋತ್ತರಗಳನ್ನು ಮನ್ನಿಸುವ ಯಾನ ವಿಚಾರಗಳಿವೆ? ಇಲ್ಲ. ಜನ ಈ ಮೋಸಕ್ಕೆ ಬಲಿ ಬೀಳಲಾಗದು. ಈ ಪೋಲೀಸ ಡ್ಯೂಮಾವನ್ನು ನಿರ್ಮೂಲ ಮಾಡಬೇಕು. ಬಂಡಾಯ್ಯವೊಂದೇ ನಮ್ಮ ಮುಂದಿರುವ ದಾರಿ. ಅದಕ್ಕಾಗಿ ಸಂಘಟನೆ ಸಿದ್ಧತೆಗಳನ್ನು ಮಾಡದೆ ಗತ್ಯಂತರವಿಲ್ಲ. ವಿಪ್ಲವದಲ್ಲಿ ಜಯಲಕ್ಷ್ಮಿಯನ್ನು ಒಲಿಸಿಕೊಂಡರೆ

ಜನ ಸರಕಾರವನ್ನು ರಚಿಸಲು ಶಕ್ಯವಿದೆ. ಸಂಧಾನದ ಮಾತಿನಲ್ಲಿ ಹುರುಳಿಲ್ಲ ಸಂಗ್ರಾಮವೇ ಗತಿ! ಸಶಸ್ತ್ರ ಬಂಡಾಯವೇ ರಶಿಯಕ್ಕೆ ಆಗಬೇಕಾದ ಮಂಗಲಾರತಿ '

ಸ್ಟಾಲಿನ್ನನ ಈ ತೇಜಸ್ವಿ ಭಾಷಣಕ್ಕೆ ಬಾಲ್ಶೆವಿಕರು ಮೆಚ್ಚಿ ಕರತಾಡನದಿಂದ ಹರ್ಷೋದ್ಗಾರ ಸೂಚಿಸಿದರು. ಲೆನಿನ್ ಕೂಡಾ ತಲೆಯಲ್ಲಾಡಿಸಿ ರಶಿಯದ ಭಾಗ್ಯಭಾನು ಈತನೆಂದು ತಿಳಿದನಂತೆ! ಮೆನ್ಶೆವಿಕರು ಮಾತ್ರ, 'ಇದು ಭಾವನಾತಿರೇಕವಲ್ಲದೆ ಮತ್ತೇನು,' ಎಂದಂದುಕೊಂಡರು. ಅವರಲ್ಲಿ ಟ್ರಾಟಸ್ಕಿ, ಕಾಮೆನೊವ್, ಜಿನೊವಿವ್ ಮೊದಲಾದವರು ಮುಖ್ಯರು. ಟ್ರಾಟಸ್ಕಿ ಸ್ಟಾಲಿನನನ್ನು ಕಂಡಂದಿನಿಂದ ಅಲಕ್ಷ್ಯ ಮಾಡುತ್ತಿದ್ದ. ಟ್ರಾಟಸ್ಕಿ ವಿದ್ಯಾವಂತ; ಬುದ್ಧಿವಂತ. ಕೀವ್ಹ ವಿಶ್ವವಿದ್ಯಾಲಯದ ಪದವೀಧರ; ದೊಡ್ಡ ವಾಗ್ಮಿ. ಲೆನಿನನಿಗಿಂತ ಒಂದು ಗೇಣು ತಾನೇ ಉದ್ದವೆಂಬ ಬಿಂಕ ಇವನಿಗೆ ಹೀಗಿರುವಾಗ ಸ್ಟಾಲಿನ್ 'ಬೆಟ್ಟದ ಇಲಿ'ಯ ಹಾಗೆ ಕಾಣಿಸಿರಬೇಕು. 'ಒರಟ. ಬುದ್ಧಿಯಿಲ್ಲದ ದೊಡ್ಡ ಜಂತು. ಹೂವಿನೊಡನೆ ನಾರೂ ಸ್ವರ್ಗಕ್ಕೆ ಏರಿದ ಹಾಗೆ ಲೆನಿನ್ನನ 'ಈ ಬಾಲ'ಕ್ಕೆ ಮಹತ್ವ ಬಂದಿದೆ. ಅವನ ಅಂಗಿಯೋ! ಹರುಕು ಜೊಣ್ಣವೋ! ಕರಡಿ ಹಾಗಿರುವ ತಲೆಗೂದಲೋ! ಕಾಕೇಶಿಯದ ಮಂಗವಪ್ಪಾ' ಎಂದು ಗುಡುಗುಡಿಸುತ್ತಿದ್ದನು. ತಾಮ್ಮರ ಫೋರಂದಲ್ಲಿ ಬಾಲ್ಶೆವಿಕರೂ ಮೆನ್ಶೆವಿಕರೂ ವಾಗ್ಯುದ್ಧದಲ್ಲಿ ತೊಡಗಿದ್ದಾಗಲೇ ಅತ್ತ ಮಾಸ್ಕೋದಲ್ಲಿ ಗಲಭೆಯೆದ್ದಿತು.

**ಮಾಸ್ಕೋ ಬಂಡಾಯ:**

ಮಾಸ್ಕೋ ಪಟ್ಟಣದ ಎಳೆಂಟು ಸಾವಿರ ಕೂಲಿಕಾರರು ಶಸ್ತ್ರಧಾರಿಗಳಾಗಿ ಅಧಿಕಾರಿಗಳನ್ನು ಸೆಣಸಿದರು. ಪರಿಸ್ಥಿತಿ ಪೋಲೀಸರ ಕೈಮೀರಿ ಬಂತು. ಕೂಲಿಕಾರರ ಬಂಡಾಯವನ್ನು ಅಡಗಿಸಲು ಸೈನಿಕರೂ ಅಷ್ಟು ಉತ್ಸಾಹ ತೋರಲಿಲ್ಲ. ಸೈಂಟಪೀಟರ್ಸ್ಬರ್ಗದಿಂದ ಮಾಸ್ಕೋ ನಗರಕ್ಕೆ ಹೊಸ ಸೇನೆಯನ್ನು ಕಳಿಸದೆ ಉಪಾಯವಿರಲಿಲ್ಲ. ಈ ಹೊಸ ದಂಡು ತೆರಳಿದರೆ ಕ್ರಾಂತಿಕಾರರ ಬೇಳೆ ಬೇಯದು. ಆದುದರಿಂದ ಅದನ್ನು ತಡೆಯುವುದು ಹೇಗೆಂದು ಲೆನಿನ್ ಮೊದಲಾದವರು ಚಿಂತಿಸತೊಡಗಿದರು. ಸೈಂಟಪೀಟರ್ಸ್ಬರ್ಗದಲ್ಲೂ ದಂಗೆಯೆಬ್ಬಿಸಬೇಕೆಂದು ಕೆಲವರ ಸೂಚನೆ. ರೇಲ್ವೆ

ರಸ್ತೆಯನ್ನು ಕತ್ತರಿಸಿ ಬಿಡಬೇಕೆಂದು ಇಸ್ನಿತರರ ಹಂಚಿಕೆ. ಅಖಿಲ ರಶಿಯ ದಲ್ಲೇ ಬಂಡಾಯವಾಗುವಂತೆ ಜನರ ಮಾರ್ಗದರ್ಶಕರಾಗಲು ಕ್ರಾಂತಿಕಾರರು ಅವರವರ ಪ್ರಾಂತಗಳಿಗೆ ತೆರಳಬೇಕೆಂದು ಲೆನಿನ್ ಆಜ್ಞಾಪಿಸಿದನು. ಅವರು ತಂತಮ್ಮ ಸ್ಥಳಗಳಿಗೆ ತೆರಳುವ ಮೊದಲೇ ಝಾರನ ಯಂತ್ರ ಚಲಿಸಿತ್ತು. ಮಾಸ್ಕೋಗೆ ಸುಸಜ್ಜಿತ ದಂಡುಗಳು ತಲುಪಿದವು. ಎಳೆಂಟು ದಿವಸಗಳ ವರೆಗೆ ಕೂಲಿಕಾರರು ಅವಿರತವಾಗಿ ಹೋರಾಡಿದರು. ಆದರೆ ಅಧಿಕ ಬಲದ ಮುಂದೆ ಅವರ ಕೈಸಾಗದೆ ದಣಿದು ಹೋದರು. ಮಾಸ್ಕೋ ರಸ್ತೆಗಳು ಸಾಮ್ಯವಾದಿ ಹುತಾತ್ಮರ ರಕುತದಿಂದ ತೊಯ್ದು ಹೋದವು.

ಮಾಸ್ಕೋ ರಣಭೇರಿ ಕಾಕೇಶಿಯಾದಲ್ಲೂ ಪ್ರತಿಧ್ವನಿಗೊಂಡಿತು. ತಂತಿ, ಟಪ್ಪಾಲು, ರೇಲ್ವೆ ಹಾಗೂ ಪೋಲೀಸ ಕಚೇರಿಗಳು ಕ್ರಾಂತಿಕಾರರ ವಶವಾದವು. ಸಚಲದಿವಿ ಜಿಲ್ಹೆಯು ಅವರ ವಶವಾಗಿ ಅಲ್ಲಿ ಪ್ರಜಾಪ್ರಭುತ್ವ ಸರಕಾರವೇ ಅಸ್ತಿತ್ವಕ್ಕೆ ಬಂತು. ಸ್ಟಾಲಿನ್ ಮಿಂಚಿನ ವೇಗದಿಂದ ಬಂದು ಅವರೊಡನೆ ಕೂಡಿಕೊಂಡನು. ಆದರೆ ಅವನ ಬೆನ್ನ ಹಿಂದೆಯೇ ಝಾರನ ದಲಗಳು ಬಂದುವು. ಸಚಲದಿವಿ ಜಿಲ್ಹೆ ಅಮಾನುಷವಾದ ದಬ್ಬಾಳಿಕೆಗೆ ತುತ್ತಾಯಿತು. ದೇಶದಲ್ಲಿ ಹೆಸರಾದ ಎಳೆಂಟು ಕ್ರಾಂತಿಕಾರರು ತಮ್ಮ ಜೀವನವನ್ನರ್ಪಿಸಿದರು. ಟಿಫ್ಲಿಸ್ ಜಿಲ್ಹೆಯಲ್ಲಿ ದೂಳೆಬ್ಬಿಸಿದ ಮೇಲೆ ಝಾರನ ಸೈನ್ಯ ಜಾರ್ಜಿಯದ ಪ್ರತಿಯೊಂದು ಹಳ್ಳಿಪಳ್ಳಿ ಪೇಟೆ ಪಟ್ಟಣ ಗಳಲ್ಲಿ ಕ್ರಾಂತಿಕಾರರ ಬೇಟೆಯಾಡಿತು.

### ಸೋಲಿನ ಫಲ

ರಕ್ತರವಿವಾರ ದಿನವೆದ್ದ ಮಹಾಕ್ರಾಂತಿ ಪ್ರಳಯ ಜಲಧಿಯ ತೆರೆ ಏರೇರಿ, ಬೋರ್ಗರೆದು, ಡಿಸೆಂಬರ ತಿಂಗಳಲ್ಲಿ ಪರಮಾವಧಿಗೆ ಮುಟ್ಟಿ ಇರುಳಿ ಇಳಿದುಹೋಯಿತು. ತೆರೆಯ ಪ್ರಥಮ ಹೊಡೆತಕ್ಕೆ ಝಾರಶಾಹಿ ತತ್ತರಿಸಿ ಹೋದರೂ ಬೇಗನೆ ಚೇತರಿಸಿಕೊಂಡಿತು. ವಿದ್ಯಾರ್ಥಿಗಳು, ರೈತರು ಕೂಲಿಕಾರರು ತಾಯ್ನಾಡಿನ ವಿಮೋಚನೆಗಾಗಿ ಸಾವಿರ ಹನಿ ಬೆವರು, ರಕುತ ಸುರಿಸಿದರೇನೋ ನಿಜ. ಆದರೆ ಸಂಘಟನೆ, ನಿರನುಭವ, ಇವುಗಳ ದೋಷದಿಂದ ಅವರ ಸಂಕಲ್ಪ ಸಿದ್ಧಿಸಲಿಲ್ಲ. ಸೋಲಿನ ಫಲ ಭೋಗಿಸಬೇ ಕಾಗಿ ಬಂತು. 'ನಾವು ಹೇಳಿದೆವು. ಯಾರೂ ಕೇಳಲಿಲ್ಲ. ಕೂಲಿಕಾರರು ಶಸ್ತ್ರ

ಹಿಡಿವುದೇ ತಪ್ಪು' ಎಂದು ಮೆನ್ಶೆವಿಕರು ಮೂದಲಿಸಿದರು. ಘಟನಾತ್ಮಕ ಹೋರಾಟವೆಂಬ ಅವರ ಪಲ್ಲವಿ ಬಲವಾಯಿತು. ಟ್ರಾಟ್‌ಸ್ಕಿ 'ಶಾಶ್ವತ ಕ್ರಾಂತಿವಾದ' ವೆಂಬ ಹೊಸ ಸಿದ್ಧಾಂತವನ್ನೇ ಜನರ ಮುಂದಿಟ್ಟ. ತಲೆಗೊಂದು ಅಭಿಪ್ರಾಯ; ವಾದ; ಅನಾಯಕತ್ವ. ಹತಾಶರಾದ ಜನ ಮೆನ್ಶೆವಿಕರ ಬಾಯಿ ಬಡಾಯಿಗೆ ಮರುಳಾದರು. ೧೯೦೬ರಲ್ಲಿ 'ಸ್ಟಾಕ್‌ಹಾಂ' ದಲ್ಲಿ ಕೂಡಿದ ಪರಿಷತ್ತಿನಲ್ಲಿ ಮೆನ್ಶೆವಿಕರ ಕಡೆ ಸಾಮ್ಯವಾದಿ ಪಕ್ಷದ ಬಹು ಜನರು ತಿರುಗಿಬಿಟ್ಟರು.

## ಸ್ಟಾಲಿನ್ನನ ತತ್ವಕ್ಕೆ ವಿಜಯ

ಸ್ಟಾಕ್‌ಹಾಂ ಕಾಂಗ್ರೆಸ್ಸಿನಿಂದ ಸ್ಟಾಲಿನ್ ರೇಗಿಕೊಂಡೇ ಕಾಕೇಶಿಯಕ್ಕೆ ಬಂದ. ಮೆನ್ಶೆವಿಕರ ನಿರಾಶಾವಾದವನ್ನು ಸದೆಬಡೆಯಲು ಟೊಂಕ ಕಟ್ಟಿದ. ಅವರ ವಿರುದ್ಧ ಕಾಳಗವೇ ನಡೆಯಿತು. ಅವನ ಅವಿರತ ಹೋರಾಟದಿಂದ ಕಾಕೇಶಿಯದಲ್ಲಿ ಮೆನ್ಶೆವಿಕರ ಮಾತು ನಡೆಯದಾಯಿತು. ಅಖಿಲ ರಶಿಯದ ನವಜನಾಂಗವೂ ಲೆನಿನ್‌ನ ಪ್ರಭಾವಕ್ಕೆ ಒಳಗಾಗಿತ್ತು. ಮೆನ್ಶೆವಿಕರ ಹೇಡಿತನದಿಂದ ಅವರು ನಖಶಿಖಾಂತ ರೊಚ್ಚಿಗೆದ್ದರು. ಕಾಕೇಶಿಯದ ಬಾಲ್ಶೆವಿಕರ ಆಗ್ರಹದಿಂದ ೧೯೦೭ರಲ್ಲಿ ಪಕ್ಷದ ಐನೇ ಪರಿಷತ್ತು ಕೂಡಿತು. ಲಂಡನಿನ ಈ ಸಭೆಗೆ ಸ್ಟಾಲಿನನೂ ಹೊರಟ. ಈ ಬಾರಿ ಮೆನ್ಶೆವಿಕರನ್ನು ಅಪ್ಪಳಿಸಬೇಕೆಂಬ ಛಲದಿಂದಲೇ ಅವನು ಹೋದುದು. ಇಲ್ಲಿ ಮೆನ್ಶೆವಿಕರು ಸೋತರು. ಬಾಲ್ಶೆವಿಕರ ನಾಯಕತ್ವದಲ್ಲಿ ರಶಿಯದ ಪ್ರಜೆಗಳು ಮಹಾ ಕ್ರಾಂತಿಯ ದ್ರುವಪಥ ಹಿಡಿದು ಮುಂದೆ ಮುಂದೆ ಸಾಗಿದರು.

—

## ಸಾವಿನೊಡನೆ ಸೆಣಸಾಟ

ಸ್ಟಾಲಿನ್ ಕರ್ಮಪ್ರಿಯ. ಕ್ರಿಯಾಶಕ್ತಿಯ ಪ್ರತಿಮೂರ್ತಿ. ಹಿಡಿದ ಕೆಲಸವನ್ನು ಕೊನೆಗೊಳಿಸುವ ದೃಢಾಗ್ರಹವುಂಟು. ಈ ಸಾಧನೆಯಲ್ಲಿ ಅನ್ನನೀರುಗಳ ಪರಿವೆಯಿಲ್ಲ; ಮಡದಿ ಮಕ್ಕಳ ಚಿಂತೆಯಿಲ್ಲ. ಬೇಕಾದ ಕಷ್ಟನಷ್ಟಗಳು ಬರಲಿ! ಸ್ಟಾಲಿನ್ ಧೃತಿಗೆಡಲಾರನು. ಜನರ ಸೇವೆಯಲ್ಲಿ

ಮರಣ ಬಂದರೂ ಸರಿಯೆ. ಅವನಿಗೆ ಪಶ್ಚಾತ್ತಾಪವಾಗದು. ಸಂಕಲ್ಪ ಸಿದ್ಧಿಗಾಗಿ ಸಾಯುವುದರಲ್ಲಿಯೂ ಒಂದು ರೀತಿಯ ಸುಖವಿದೆ. ಅಲ್ಲಿಗೆ ಜನ್ಮ ಸಾರ್ಥಕವಾದಂತೆ. ಈ ನಡಾವಳಿ ವೀರರದು. ಸ್ಟಾಲಿನ್ ಆ ಸಾಲಿಗೆ ಸೇರಿದವನು. ನಾಡಿಗಾಗಿ ಜೀವವನ್ನು ಧಾರೆಯೆರೆದವನು; ಆತ್ಮ ಸಮರ್ಪಣ ಮಾಡಿರುವ ತ್ಯಾಗಿ. ಜನರ ಬಂಧವಿಮೋಚನೆಗಾಗಿ ಬಹಳ ಆತುರಿಯಾಗಿರುವ ಜನಪ್ರೇಮಿ. ಉಗ್ರಗಾಮಿ. ಆಗಾಗ ಬಣ್ಣ ಬದಲಾಯಿಸುವ ಮೆನ್ಶೆವಿಕ್ ಅಣ್ಣಯ್ಯನಲ್ಲ. ಬಾಲ್ಶೆವಿಕ್ ಬಾವುಟ ಅವನ ಕೈಯ್ಯಲ್ಲಿ ಸುರಕ್ಷಿತ. ಬಾಲ್ಶೆವಿಕರಿಗೆ ಅವನ ಮೇಲೆ ಅಷ್ಟು ವಿಶ್ವಾಸವಿದೆ. ಆ ಕ್ರಾಂತಿ ಬಾವುಟವನ್ನು. ಶಾಂತಿ ಬಾವುಟವನ್ನು, ವಿಜಯ ಬಾವುಟವನ್ನು ಏರಿಸಲು ಹಾರಿಸಲು ಮೆರೆಸಲು ಸ್ಟಾಲಿನ್ನನನ್ನು ಬಾಕು ನಗರಕ್ಕೆ ಕಳಿಸಿಕೊಟ್ಟರು.

**ಬಾಕು ನಗರದಲ್ಲಿ**

ಬಾಕು, ಕಾಸ್ಪಿಯನ್ ಸಮುದ್ರದ ಪಶ್ಚಿಮ ಕರಾವಳಿಯ ನಗರ; ಒಂದರ. ಬಾಟುಂದಂತೆಯೇ ದೊಡ್ಡ ಎಣ್ಣೆ ಕೇಂದ್ರ. ರಾತಶೀಲ್ಡ್, ನೊಬೆಲ್, ಶಿಬಾಯೆವ್ ಮೊದಲಾದ ಅನೇಕ ವಿದೇಶಿ ಕಾರ್ಖಾನೆಗಳಿವೆ. ಎಲ್ಲವೂ ವಿದೇಶಿಯರ ಬಂಡವಾಳದಿಂದ ನಡೆಯುತ್ತಿರುವವು. ಈ ಕಣೆಗಳಲ್ಲಿ ಕಾರ್ಖಾನೆಗಳಲ್ಲಿ ರಶಿಯನರು, ಜಾರ್ಜಿಯನರು, ಆರ್ಮೇನಿಯನರು, ಅಜರ ಬೈಜಾನರು ಮೊದಲಾದ ಜನ ಕೂಲಿ ಕೆಲಸ ಮಾಡುತ್ತಿದ್ದರು. ಬಾಕು ಪರ್ಶಿಯಕ್ಕೆ ತೀರ ಸಮೀಪವಾಗಿರುವುದರಿಂದ ಅನೇಕ ಪರ್ಶಿಯನ್ನರೂ ಅಲ್ಲಿ ಶ್ರಮಜೀವಿಗಳಾಗಿ ಬಾಳ್ವೆ ನಡೆಸುತಿದ್ದರು. ಈ ಕೂಲಿಕಾರರಲ್ಲಿ ಅಲ್ಪ ಸ್ವಲ್ಪ ಜಾಗೃತಿಯೇನೊ ಆಗಿತ್ತು. ಆದರೆ ಇಲ್ಲಿ ಮೆನ್ಶೆವಿಕರ ಪ್ರಭಾವ ಬಹಳ. ಬಾಕು ಮೆನ್ಶೆವಿಕರ ದುರ್ಗವೆಂದೂ ಆಗ ಕರೆಯಲ್ಪಡುತ್ತಿತ್ತು. ಮೆನ್ಶೆವಿಕರನ್ನು ಅಲ್ಲಿಂದ ಗುಡಿಸಿ, ಬಾಲ್ಶೆವಿಸ್ಟ ಧ್ವಜವನ್ನೇರಿಸಲು ಸ್ಟಾಲಿನ್ ಬಂದಿದ್ದಾನೆ. ಆತ ಆ ಕಾರ್ಯವನ್ನು ಪೂರ್ಣಗೊಳಿಸಿರುವನು.

ಸ್ಟಾಲಿನ್ನನ ಬಾಕು ಚಟುವಟಿಕೆಯ ಸಂಬಂಧ ಕಾಮ್ರೇಡ್ ಸಕಬಾರೆಲಿ ಹೀಗೆ ಬರೆಯುತ್ತಾನೆ—' ಸ್ಟಾಲಿನ್ ಬಾಕು ಕಮೀಟಿಯ ನಾಯಕನಾಗಿದ್ದ. ಸಮಿತಿಯಲ್ಲಿ ಅವನೇ ಚೇತನ ಸ್ವರೂಪಿ. ನೆರೆಹೊರೆಯ ಪ್ರತಿಯೊಂದು ಜಿಲ್ಲೆಯಲ್ಲೂ ಬಾಲ್ಶೆವಿಕ್ ಸಮಿತಿಗಳು ಉದಯವಾದುವು. ಜನ

ಸೇವಾ ಕಾರ್ಯದಲ್ಲಿ ತನುಮನಧನದಿಂದ ದುಡಿಯುತ್ತಿದ್ದವನು ಅವನೊಬ್ಬನೇ ಇದೇ ಕಾಲದಲ್ಲಿ 'ಬಕಿನಸ್ಕಿ ರಾಕೋಚಿ' ಎಂಬ ಪತ್ರಿಕೆಯನ್ನು ಹೊರಡಿಸಿ ಬಾಲ್ಶೆವಿಸಂ ಪ್ರಚಾರ ಮಾಡಿದ. ಅಂದು ಅವನು ತಲೆ ಮರೆಸಿಕೊಂಡಿದ್ದುದು ಬೀಬಿ-ಈಬತ್‌ನಲ್ಲಿ. ಸ್ಟಾಲಿನ್ನನ ಪರಿಶ್ರಮದಿಂದ ಬಾಕು ಬಾಲ್ಶೆವಿಕ ಕೇಂದ್ರವಾಯಿತು.—ಬಾಲ್ಶೆವಿಕ್ ಸಂಘವು ಸಂಖ್ಯೆಯಲ್ಲಿ, ಬಲದಲ್ಲಿ, ದೃಢಾಗ್ರಹದಲ್ಲಿ ಬಹುಸಂಖ್ಯಾಕರಾದ ಕೂಲಿಕಾರರ ಬೆಂಬಲ ಪಡೆದು ಬಲಿಷ್ಠವೂ ಆಯಿತು. ಬಾಕು ಕೂಲಿಕಾರರು ಬಾಲ್ಶೆವಿಸಂ ಶಿಬಿರ ಸೇರಿ ಸ್ಟಾಲಿನ್ನನ ನಾಯಕತ್ವದಲ್ಲಿ ಝಾರನ ಮೇಲೆ ಹುಲಿಗಳಂತೆ ನೆಗೆಯಲು ಸಿದ್ಧರಾದರು. ಕ್ರಾಂತಿ ಹೋರಾಟದಲ್ಲಿ ಬಾಕುವಿನಲ್ಲೇ ಬಹಳ ಅನುಭವ ಪಡೆದೆನೆಂದು ಸ್ಟಾಲಿನ್ ೧೯೨೬ರಲ್ಲಿ ಟಿಫ್ಲಿಸ್ ಕೂಲಿಕಾರರ ಸಭೆಯಲ್ಲಿ ನುಡಿದ. ಸ್ಟಾಲಿನ್ 'ಕ್ರಾಂತಿಯ ಯಾತ್ರಿಕ' ನಾದುದು ಇಲ್ಲೇ.

## ಸೆರೆಮನೆ

ಸ್ಟಾಲಿನ್ ಬಾಕು ನಗರದಲ್ಲಿ ಹತ್ತು ಹದಿನೆಂಟು ತಿಂಗಳುಗಳ ವರೆಗೆ ಅಹೋರಾತ್ರಿ ದುಡಿದನು. ಅಷ್ಟು ದೀರ್ಘ ಕಾಲದ ವರೆಗೆ ಹೇಗೆ ತಲೆ ಮರೆಸಿಕೊಂಡಿದ್ದನೋ ಏನೋ? ನೆಲಮನೆ ಸೇರಿ ಗುಪ್ತ ಚಟುವಟಿಕೆ ನಡೆಸುವುದರಲ್ಲಿ ಅವನು ಪಾರಂಗತನಾಗಿರಬೇಕು. ಆದರೆ ಕಸ್ತೂರಿಯನ್ನು ಪೆಟ್ಟಿಗೆಯೊಳಗೆ ಭದ್ರವಾಗಿ ಮುಚ್ಚಿಟ್ಟರೂ ಅದರ ಗಮಗಮ ಗಾಳಿಯಲ್ಲಿ ಲೀನವಾಗದೆ ಹೋಗುವದಿಲ್ಲ. ಅದರಂತೆ ಪೋಲೀಸರಿಗೆ ಅದರ ಗಾಳಿ ಸೋಂಕಿ, ೧೯೦೮ ಮಾರ್ಚ ತಿಂಗಳಲ್ಲಿ ಅವನನ್ನು ಹಿಡಿದರು. ಬಾಕು ಬೈಲೊವ್ ಸೆರೆಮನೆಯಲ್ಲಿ ಸ್ಟಾಲಿನ್ ಎಂಟು ತಿಂಗಳು ಶಿಕ್ಷೆಯನ್ನನುಭವಿಸಿದ. ಸೆರೆಮನೆಯಲ್ಲಿದ್ದಾಗಲೂ ಬಾಕು ಕಮಿಟಿಗೆ ಸಲಹೆ ಸೂಚನೆಗಳನ್ನು ಕೊಡುತ್ತಿದ್ದನು. ಅವಧಿ ಮುಗಿದೊಡನೆಯೇ ಅಧಿಕಾರಿಗಳು ಅವನ ಬಿಡುಗಡೆ ಮಾಡಲಿಲ್ಲ. 'ಭಯಂಕರ' ವ್ಯಕ್ತಿಯೆಂದು ತಿಳಿದು ದೇಶಭ್ರಷ್ಟ ಆಜ್ಞೆ ವಿಧಿಸಿ, ಸೈಬೀರಿಯದ ಸೊಲ್ವಿಚೆಗೊಡಸ್ಕ ಹಳ್ಳಿಗೆ ಅಟ್ಟಿ ನಿಶ್ಚಿಂತರಾದರು. ೧೯೦೯ನೇ ಗ್ರಿಷ್ಮ ಋತುವಿನಲ್ಲಿ ಸ್ಟಾಲಿನ್ ಸೈಬೀರಿಯದಿಂದ ಕಾಕೇಶಿಯಕ್ಕೆ ಓಡಿಬಂದನು.

## ಕ್ರಾಂತಿಜ್ಯೋತಿ ಆರಿಲ್ಲ

ಸ್ಟಾಲಿನ್ ಪರದೇಶವಾಸಿಯಾದೊಡನೆಯೇ ಕಾಕೇಶಿಯದ ಮೆನ್ಶೆವಿಕರು 'ಅಬ್ಬ' ಎಂದು ನಿಟ್ಟುಸಿರುಗರೆದರು. ಸ್ವೇಚ್ಛೆಯಿಂದ ಉಸಿರಾಡಲು ಅವರಿಗೆ ಸ್ವಲ್ಪ ಅವಕಾಶ ಸಿಕ್ಕಿತು. ಅಲ್ಲಿ ಇಲ್ಲಿ ಅವರು ಮತ್ತೆ ತಲೆಯೆತ್ತಿದರು. ಸ್ಟಾಲಿನ್ ಈ ಮೊದಲು ಕೈಕೊಂಡ ಕಾರ್ಯಗಳೆಲ್ಲ ನೀರ ಮೇಲಿಟ್ಟ ಹೋಮದಂತಾಗುವ ಪ್ರಸಂಗ ಬಂದಿತು. ಅಷ್ಟರಲ್ಲಿ ಅವನು ಆಕಸ್ಮಿಕವಾಗಿ ಆಗಮಿಸಿದ. 'ಟಿಫ್ಲಿಸ್ ಪ್ರೋಲೇಟರಿ' (ಪ್ರಜಾ) ಎಂಬ ಪತ್ರಿಕೆಯನ್ನು ಸ್ಥಾಪಿಸಿ ಮೆನ್ಶೆವಿಕರ ವಿರುದ್ಧ ದೊಡ್ಡ ಹೋರಾಟವನ್ನೇ ಹೂಡಿದನು. ಆ ಪತ್ರಿಕೆಯ ಮೊದಲನೆಯ ಸಂಚಿಕೆಯಲ್ಲಿ ಸ್ಟಾಲಿನ್ ಈ ರೀತಿ ಬರೆಯುತ್ತಾನೆ—

'ರಶಿಯದಲ್ಲಿ ಮಹಾ ಕ್ರಾಂತಿಯ ಜ್ಯೋತಿ ನಂದಿಲ್ಲ. ಮಿನ್ನಡೆಯಾಗಿದೆ; ಅಷ್ಟೆ. ಹೋರಾಟವನ್ನು ಬಿಟ್ಟುಕೊಟ್ಟಿರುವೆವೆಂದು ತಿಳಿಯುವುದು ತಪ್ಪು. ಮುಂದಿನ ವಿಪ್ಲವಕ್ಕಾಗಿ ಶಕ್ತಿಸಂಗ್ರಹ ನಡೆದಿದೆ. ರಶಿಯದ ಜನಸಾಮಾನ್ಯರು ಇನ್ನೂ ಜೀವಂತರಿದ್ದಾರೆ. ಅವರ ಹಸಿವೆ ಹಿಂಗಿರೆಯೇನು ?.... ನಾವು ಇನ್ನೊಂದು ಬಂಡಾಯದ ಮುಂಚ್ಛಂಜೆಯಲ್ಲಿದ್ದೇವೆ. ಝಾರನ ನೊಗವನ್ನು ಎತ್ತಿ ಹೊಳೆಗೆಸೆಯುವ ಹೊಣೆ ನಮ್ಮದು. ಮಹಾಜನರ ಹಕ್ಕು ಪ್ರತಿಪಾದನೆಗಾಗಿ, ಮುಂದಿನ ಕದನಕ್ಕಾಗಿ, ಟೊಂಕ ಕಟ್ಟುವುದು ನಮ್ಮ ಕರ್ತವ್ಯ; ಮುಂದಾಳ್ತನ ವಹಿಸಿದ ಕೂಲಿಕಾರರ ಕರ್ತವ್ಯ. ಬಂಧುಗಳೇ, ವಿಪ್ಲವಕ್ಕೆ ಸಿದ್ಧರಾಗಿರಿ.'—

ಕೂಲಿಕಾರರ ಸಂಘಟನೆಗೆ ಈ ಪತ್ರಿಕೆಯಿಂದ ಅನುಪಮ ಸಹಾಯವಾಯಿತು. ಕೂಲಿಕಾರರಿಗೆ ಸ್ಟಾಲಿನ್ನನ ಮೇಲೆ ಮಮತೆಯಾಗಿದೆ. ಬಾಕು ಕೂಲಿಕಾರರು ಅವನೊಡನೆ ಸಾಯಲೂ ಸಿದ್ಧರು.

## ಪುನಃ ಬಂಧನ

೧೯೦೫ನೇ ಮಾರ್ಚ ತಿಂಗಳಲ್ಲಿ ಸ್ಟಾಲಿನ್ ಪುನಃ ಪೋಲೀಸರ ಪಾಲಾದನು. ಈ ಬಾರಿಯೂ ಅವನನ್ನು ಸೈಬೇರಿಯಕ್ಕೆ ಕಳಿಸಿದರು. ಅಲ್ಲಿಗೆ ತೆರಳಿದರೂ ಕಾಕೇಶಿಯವೇ ಸ್ಟಾಲಿನ್ನನ ಜೀವ ಹಿಡಿದೆಳೆಯುತ್ತಿತ್ತು. ತಾನು ಮಾಡಿದ ಕಾರ್ಯವೆಲ್ಲ ವ್ಯರ್ಥವಾಗುವುದೋ ಎಂಬ ಚಿಂತೆ ಅವನಿಗೆ. ಹಿಡಿದ

ಕೆಲಸ ಕೊನೆಗೊಳಿಸಲಿಲ್ಲವೆಂಬ ಹಳಹಳಿ. ಆಗಾಗ ಸೈಬೀರಿಯದಿಂದ ಪತ್ರ ಒರೆದು ತನ್ನ ಒಡನಾಡಿಗಳನ್ನು ಎಚ್ಚರಿಸುತ್ತಿದ್ದನು. ಇದರಿಂದಲೂ ಅವನಿಗೆ ಸಮಾಧಾನವಾಗಲಿಲ್ಲ. ೧೯೧೧ರಲ್ಲಿ ಕಾವಲುಗಾರರ ಕಣ್ಣಿಗೆ ಕಾಡಿಗೆ ಹಚ್ಚಿ ಓಡಿದನು. ಬಾಲ್ಶೆವಿಕ್ ಪಕ್ಷ ಸಮಿತಿಯು ಪೀಟರ್ಸ್‌ಬರ್ಗಿಗೆ ಸ್ಟಾಲಿನ್ನನನ್ನು ಕಳಿಸಿಕೊಟ್ಟಿತು. ಪೋಲೀಸರು ಹೇಗೆ ಅವನ ಹೆಜ್ಜೆ ಗುರುತಿಸಿ ಹಿಂಬಾಲಿಸಿದರೋ ಏನೋ? ೧೯೧೩ರಲ್ಲಿ ಅವನನ್ನು ಬಂಧಿಸಿ ಸೈಬೀರಿಯಾಕ್ಕೆ ಕರೆದೊಯ್ದರು. ಪೀಟರ್ಸ್‌ಬರ್ಗದಿಂದ ಸೈಬೀರಿಯಾಕ್ಕೆ ಸಾವಿರಾರು ಮೈಲುಗಳ ದೂರ. ರೇಲ್ವೆಯ ಮೂಲಕ ಅನೇಕ ದಿವಸಗಳ ವರೆಗೆ ಪ್ರಯಾಣ ಮಾಡಬೇಕಾಗುತ್ತದೆ. ಗುಡ್ಡಗಾಡು, ಘೋರಾರಣ್ಯ, ಹಿಮ ತುಂಬಿದ ಪ್ರದೇಶಗಳನ್ನು ಸೀಳಿಕೊಂಡು ರೇಲ್ವೆ ಗಾಡಿ ಓಡುವದು. ಮೈಯೊಳಗಿನ ರಕುತವೆಲ್ಲ ಹೆಪ್ಪುಗಟ್ಟಿ ಹೋಗುವಷ್ಟು ಚಳಿ. ಆಕಾಶವೇ ಜರಿದು ಬೀಳುವಂತೆ ಹಗಲಿರುಳು ಹಿಮ ಏಕಪ್ರಕಾರವಾಗಿ ಸುರಿಯುತ್ತಿದೆ. ಸ್ಟಾಲಿನ್ನನೊಡನೆ ಬಂದಿದ್ದ ಪಹರೆಯ ಸಶಸ್ತ್ರ ಪೋಲೀಸರು ದೇಹದಾಯಾಸದಿಂದಲೂ, ಚಳಿಯಿಂದಲೂ ಮೈಮುದುಡಿಕೊಂಡು ಒರಗಿದರು. ಅವರಿಗೆ ಅಲ್ಲೇ ಸ್ವಲ್ಪ ಕಣ್ಣುಜೊಂಪು ಹಿಡಿಯಿತು. ಕಣ್ಣುವೆ ಮುಚ್ಚಿ ತೆರೆಯುತ್ತಾರೆ—ಡಬ್ಬಿಯಲ್ಲಿ ಸ್ಟಾಲಿನನಿಲ್ಲ. ಗಾಡಿಯನ್ನು ನಿಲ್ಲಿಸಿ ಪ್ರತಿಯೊಂದು ಡಬ್ಬಿಯನ್ನು ಹುಡುಕುತ್ತಾರೆ. ರೇಲ್ವೆ ರಸ್ತೆಯ ಸುತ್ತಲೂ ತಿರುಗುತ್ತಾರೆ. ಗುಂಡೆಸೆಯುತ್ತಾರೆ. ಸ್ಟಾಲಿನ್ನನ ಸುದ್ದಿಯಿಲ್ಲ.

## ಲೆನಿನ್ನನ ಚಿಂತೆ

ದೇಶದಾದ್ಯಂತ ಗುಪ್ತ ಪೋಲೀಸರು ಸ್ಟಾಲಿನ್ನನ ತಲೆ ಬೇಟೆಯಾಡಲಾರಂಭಿಸಿದರು. ಅದೇ ಎಪ್ರೀಲ್ ತಿಂಗಳಲ್ಲಿ ಪೀಟರ್ಸ್‌ಬರ್ಗ ನಗರಕ್ಕೆ ತೆರಳಲು ಸ್ಟಾಲಿನ್ ಸೆರ್ಗೊ ಎಂಬ ಒಡನಾಡಿಯೊಡನೆ ಗಾಡಿಹತ್ತಿದುದು ಮಾಸ್ಕೋ ಗೂಢಚಾರರಿಗೆ ತಿಳಿದುಬಂದಿತು. ತಕ್ಷಣ ಪೀಟರ್ಸ್‌ಬರ್ಗ ಹಾಗೂ ಇನ್ನಿತರ ಸ್ಟೇಶನ್‌ಗಳಿಗೆ ತಂತಿ ಹೋಯಿತು. 'ಕ್ರಾಂತಿಕಾರ ಕೋಬ (ಸ್ಟಾಲಿನ್) ಈ ದಿನ ಎಂಟನೇ ನಂಬರಿನ ಗಾಡಿಯಲ್ಲಿದ್ದಾನೆ. ಅವನೊಡನೆ ಸೆರ್ಗೊ ಕೂಡಾ ಇರುವನು. ಕಣ್ಣಿಡಿ. ಹಿಡಿದುಬಿಡಿ '—ಗಾಡಿ

ಪೀಟರ್ಸ್‌ಬರ್ಗ್‌ಗೆ ಬಂದು ಮುಟ್ಟಿದಾಗ ರೇಲ್ವೆ ಸ್ಟೇಶನಿನಲ್ಲಿ ಒಂದು ಪೋಲಿಸ್ ಪಡೆಯೇ ನಿಂತಿತ್ತು. ಆದರೆ ಸ್ಟಾಲಿನನಿಲ್ಲ.

ಸ್ಟಾಲಿನ್ ಈ ರೀತಿ ಸಾವಿನೊಡನೆ ಸೆಣಸಾಟವಾಡುತ್ತಿರುವುದನ್ನು ನೋಡಿ ಲೆನಿನ್ನನಿಗೂ ಚಿಂತೆಯಾಯಿತು. ೧೯೧೩ ಮಾರ್ಚ ತಿಂಗಳಲ್ಲಿ ಲೆನಿನ್ ಬರೆದಿರುವ ಒಂದು ಪತ್ರದಲ್ಲಿ 'ಐವನೊವಿಚ್‌ನ ಸುದ್ದಿಯಿಲ್ಲದೆ ಬಹಳ ಸಮಯವಾಯಿತು. ಅವನ ಗತಿ ಏನಾಯಿತು? ಎಲ್ಲಿದ್ದಾನೆ? ಹೇಗಿದ್ದಾನೆ?' ಎಂದು ಪ್ರಶ್ನಿಸಿರುವನು. ಸ್ಟಾಲಿನ್ನನ ಛಲ, ಅವಿರತ ಹೋರಾಟ ಕಂಡು ಲೆನಿನ್ ತಲೆದೂಗಿ, ಬಾಲ್ಶೆವಿಕ್ ವರಿಷ್ಠ ಸಮಿತಿಯಲ್ಲಿ ಅವನನ್ನು ಸೇರಿಸಿಕೊಳ್ಳಲು ಸೂಚಿಸಿದನು. ಲೆನಿನ್ ಸೂಚಿಸಿದ ಮೇಲೆ ವಿರೋಧಿಸುವ ಧೈರ್ಯ ಯಾರಿಗೆ? ಅಷ್ಟರ ವರೆಗೆ ಸ್ಟಾಲಿನ್ ಕಾಕೇಶಿಯದ ಮುಖಂಡನಾಗಿದ್ದ. ಬಾಲ್ಶೆವಿಕ್ ಪಕ್ಷದಲ್ಲಿ ಕಾಕೇಶಿಯ ಪ್ರಾಂತದ ಪ್ರತಿನಿಧಿ. ಈಗ ಅಖಿಲ ರಶಿಯದ ನಾಯಕರ ಪಂಕ್ತಿಯಲ್ಲಿ ಸ್ಥಾನ ಲಭಿಸಿತು. ಅಂದಿನಿಂದ ಸ್ಟಾಲಿನ್ ವರಿಷ್ಠ ಸಮಿತಿಯ ಆಧಾರಸ್ತಂಭವಾದ. ದೇಶದಲ್ಲಿ ಮಾನ ಮನ್ನಣೆಗೂ ಪಾತ್ರನಾದನು.

## ಪ್ರವಡಾ ಪತ್ರಿಕೆ

ಬಾಲ್ಶೆವಿಕರಿಗೆ ವಿಜಯ ಲಭಿಸಿದಾದಿನಿಂದ ಅವರು ತ್ವರೆಯಿಂದ ಕಾರ್ಯಪ್ರವೃತ್ತರಾದರೆಂದು ಮೊದಲೇ ಹೇಳಿದೆ. ದೇಶದ ಮೂಲೆ ಮೂಲೆಗಳಲ್ಲಿ ಗೌಪ್ಯ ಸಂಘಗಳನ್ನು ಪುನರುಜ್ಜೀವನಗೊಳಿಸಿದರು. ೧೯೧೨ರಲ್ಲಿ ಲೇನಾ ಚಿನ್ನದ ಕಣಿ ಕೂಲಿಕಾರರ ಮೇಲೆ ಗುಂಡು ಹಾರಿಸಿದ ಮೇಲಂತೂ ಕ್ರಾಂತಿ ಚಟುವಟಿಕೆ ಸ್ಫುರಣಗೊಂಡಿತು. ಲೇನಾ ಚಿನ್ನದ ಕಣಿ ಸೈಬೇರಿಯದಲ್ಲಿದೆ. ಅಲ್ಲಿ ಕೂಲಿಕಾರರ ಸ್ಥಿತಿ ನರಕ ಸಮಾನ. ಈ ಯಾತನೆಯನ್ನು ಸಹಿಸಲಾರದೆ ಅವರು ಸಂಪು ಹೂಡಿದರು. ಪೋಲೀಸರು ಗುಂಡೆಸೆದುದರಿಂದ ನೂರಾರು ಜನ ಮರಣಗೊಂಡರು. ರಕುತಪಾತದ ಸುದ್ದಿ ಜನರಿಗೆ ಮುಟ್ಟಿದೊಡನೆಯೇ ೧೯೦೫ರಂತೆ ದೇಶದಲ್ಲಿ ಮತ್ತೊಮ್ಮೆ ಕ್ಷೋಭೆಯೆದ್ದಿತು. ಮೆರವಣಿಗೆ, ಸಂಪು, ಮತಪ್ರದರ್ಶನಗಳಾದವು. ಘಟನಾತ್ಮಕ ಚಳವಳಿಯ ಹಾಡ್ನು ಹೇಳುತ್ತಿದ್ದ ಮೆನ್ಶೆವಿಕರ ಮೋರೆ ಸಪ್ಪಗಾಯಿತು. ಬಾಲ್ಶೆವಿಕರರೆನ್ನುವುದೇ ಸರಿಯೆಂದು ನಂಬಿ ಜನ ಅವರನ್ನು ಹಿಂಡು ಹಿಂಡಾಗಿ ಕೂಡಿಕೊಂಡರು.

೧೯೧೨ರಲ್ಲಿ ಬಾಲ್ಶೆವಿಕರು ಮೆನ್ಶೆವಿಕರ ಸಂಬಂಧವನ್ನು ಸಂಪೂರ್ಣವಾಗಿ ಕಡಿದುಕೊಂಡು ಅವರನ್ನು ಪಕ್ಷದಿಂದ ತಳ್ಳಿದರು. ಬಾಲ್ಶೆವಿಕರ ಸಂಘಟನೆಗಾಗಿ ವರಿಷ್ಟ ಸಮಿತಿಯು ವಿಶೇಷ ಕುತೂಹಲ ತಾಳಿತು. ಈ ಕಾರ್ಯದಲ್ಲಿ ಸ್ಟಾಲಿನ್ನನದು ಪಳಗಿದ ಕೈ. ಆದುದರಿಂದ ಪೀಟರ್ಸ್‌ಬರ್ಗಿಗೆ ಅವನನ್ನು ಕಳಿಸಿಕೊಟ್ಟರು. ಪೀಟರ್ಸ್‌ಬರ್ಗದಲ್ಲಿ ಸ್ಟಾಲಿನ್ ಮಾಡಿದ ಮಹತ್ಕಾರ್ಯಗಳಲ್ಲಿ 'ಪ್ರವಡಾ' ದೈನಂದಿನ ಪತ್ರಿಕೆಯೊಂದು ಬರೆದಿಡತಕ್ಕ ವಿಷಯ. ಈ ಪತ್ರಿಕೆಯನ್ನು ಸ್ಟಾಲಿನ್ ಹೊಟ್ಟೆಯ ಮಗುವಿನಂತೆ ಆರೈಕೆ ಮಾಡಿದ್ದಾನೆ. 'ಪ್ರವಡಾ, ೧೯೧೭ರ ಮಹಾಕ್ರಾಂತಿಗೆ ಹಾಕಿದ ಅಡಿಗಲ್ಲು' ಎಂದು ಸ್ಟಾಲಿನ್ ಕೆಲವು ವರುಷಗಳ ಮೇಲೆ ಆಡಿದ ನುಡಿ ಸತ್ಯ.

ಗಡೀಪಾರು

೧೯೧೩ನೇ ಏಪ್ರಿಲ್ ತಿಂಗಳಲ್ಲಿ ಸ್ಟಾಲಿನ್ ಅಂಧಕಾರ ಸೇರುವ ಯೋಗ ಬಂತು. ಮೂರು ವರುಷಗಳ ಶಿಕ್ಷೆ ವಿಧಿಸಿ ಸೈಬೀರಿಯದ 'ನರೀಂ' ಎಂಬ ಹಳ್ಳಿಗೆ ಅವನನ್ನು ಗಡಿಪಾರು ಮಾಡಿದರು. ಬಹಳ ಇಕ್ಕಟ್ಟಿನ ಪ್ರಸಂಗದಲ್ಲಿ ರಾಜಕೀಯ ರಂಗದಿಂದ ವೈರಿಗಳು ಸೆಳೆದು ಬಿಟ್ಟರು. ಇಕ್ಕಟ್ಟಿನ ಪ್ರಸಂಗವೆಂದು ಹೇಳಲು ಕಾರಣವಿಷ್ಟೆ. ಡ್ಯೂಮಾ ಚುನಾವಣೆಯಲ್ಲಿ ಭಾಗ ವಹಿಸಲು ಬಾಲ್ಶೆವಿಕರು ನಿರ್ಧರಿಸಿದ್ದರು. ಕೂಲಿಕಾರರು ಚುನಾಯಿಸಬೇಕಾಗಿದ್ದ ಆರು ಸ್ಥಾನಗಳಲ್ಲಿ ಬಾಲ್ಶೆವಿಕರೇ ವಿಜಯ ಹೊಂದಬೇಕೆಂದು ಅವರ ಆಶೆ. ಚುನಾವಣೆಯಲ್ಲಿ ಭಾಗವಹಿಸುವ ಅವರ ನೀತಿಯು ವಿಪ್ಲವಕ್ಕೆ ತಿಲಾಂಜಲಿ ಎಂದು ಅರ್ಥವಾಗದು. ತಮ್ಮ ಬಲ ಸಂವರ್ಧಿಸಿಕೊಳ್ಳಲು ಕಾಯದೆಶೀರ ಮಾರ್ಗವನ್ನು ಅವರು ಕಡೆಗಣಿಸದೆ ಅದರ ಸದುಪಯೋಗ ಮಾಡಿಕೊಳ್ಳಲು ಬಯಸಿದ್ದರು. ಬಾಲ್ಶೆವಿಕರು ಆ ಕಾಲದಲ್ಲಿ ಘಟನಾತ್ಮಕ ಹಾಗು ಗುಪ್ತ ಈ ಎರಡೂ ರೀತಿಗಳಿಂದ ಕೂಲಿಕಾರರಿಗೆ ಪ್ರಚೋದನೆಯನ್ನೀಯುತ್ತಿದ್ದರು. ೧೯೦೫ರ ಏಟಿನಿಂದ ಹತಾಶರಾದ ಜನರನ್ನು ಪುನಃ ಹುಡಿದೆಬ್ಬಿಸಲು ಪ್ರಾಯಶಃ ಅದು ಯೋಗ್ಯ ಉಪಾಯವಾಗಿತ್ತೋ ಏನೋ? ಇಂಥ ಸನ್ನಿವೇಶದಲ್ಲಿ ವೈರಿಗಳು ಸ್ಟಾಲಿನ್ನನನ್ನು ದೂರ ಅಟ್ಟಿಬಿಟ್ಟರಲ್ಲ! ಆತ ಬಹಳ ವ್ಯಾಕುಲಗೊಂಡ. ಪಾರಾಗಿ ಹೋಗುವುದು ಹೇಗೆಂದು ಚಿಂತಿಸಿ ಅದಕ್ಕಾಗಿ ಹೊಂಚು ಹಾಕುತ್ತಿದ್ದನು. ನಾಲ್ಕೈದು ತಿಂಗಳುಗಳು

ಉಂಳಿದ ಒಳಿಕ ಆ ಯೋಗ ಕೂಡಿ ಬಂದಿತು. ಕಾವಲುಗಾರರು ಒಂದು ದಿನ ಮುಂಜಾನೆ ನೋಡಿದಾಗ ಬಾಲ್ಶೆವಿಕ್ ಅರಗಿಣಿ ಮೃತ್ಯು ಪಂಜರದಿಂದ ಹಾರಿಹೋಗಿತ್ತು. ಸ್ಟ್ಯಾಲಿನ್ ಕೈಕೊಂಡ ಅಮೋಘ ಪ್ರಚಾರವು ವ್ಯರ್ಥವಾಗದೆ ಆರು ಮತದಾನ ಸಂಘಗಳಿಂದ ಬಾಲ್ಶೆವಿಕರೇ ಆರಿಸಿ ಬಂದರು.

## ಕೊನೆಯ ಸೆರೆಮನೆಯ ವಾಸ

ಸ್ಟ್ಯಾಲಿನ್ನನ ಈ ಅವಿರತ ಹೋರಾಟದಿಂದ ಅಧಿಕಾರಿಗಳು ನಿಜವಾಗಿಯೂ ಕಸಿವಿಸಿಗೊಂಡರು. ಈ ಭಯಂಕರ ಮೂರುತಿಯನ್ನು ಸೆರೆಮನೆಗಟ್ಟದಿದ್ದರೆ ಕೇಡು ಕಟ್ಟಿಟ್ಟದ್ದೆಂದು ತಿಳಿದು ೧೯೧೩ನೇ ಫೆಬ್ರುವರಿಯಲ್ಲಿ ಬಂಧಿಸಿ ಸೈಬೀರಿಯಕ್ಕೆ ನೂಕಿದರು. ಮಾರ್ಗಮಧ್ಯೆ ಸ್ಟ್ಯಾಲಿನ್ ತಪ್ಪಿಸಿಕೊಳ್ಳದಂತೆ ಝಾರ್ ಸರಕಾರ ಒಂದು ಸೇನಾದಳವನ್ನೆ ಕಳಿಸಿತು. ಸೈಬೀರಿಯದಲ್ಲಿ ಸ್ಟ್ಯಾಲಿನ್ನನಿಗೆ ನೆಲಮಾಳಿಗೆ; ಭದ್ರ ಕೊಠಡಿ; ಸುತ್ತಲೂ ಸಶಸ್ತ್ರ ಜನರ ಕಾವಲು ಬೇರೆ. ನಾಲ್ಕು ವರುಷಗಳ ವರೆಗೂ ಸ್ಟ್ಯಾಲಿನ್ ಅಲ್ಲೇ ಉಳಿದ. ಪ್ರಾಯಶಃ ಇದು ಅವನಿಗೆ ದೊರೆತ ವಿಶ್ರಾಂತಿಯ ಕಾಲ. ಸೆರೆಮನೆಯೇ ಅವನಿಗೆ ವಿಶ್ರಾಂತಿಗೃಹ. ಹೊರಗಿದ್ದಾಗ ಹಗಲಿರುಳು ದುಡಿತವಿದೆ. ವಿರಾಮವಿಲ್ಲ. ಝಾರ್ ಸರಕಾರ ಸ್ಟ್ಯಾಲಿನ್ನನನ್ನು ಈ ಪುಣ್ಯಾಶ್ರಮಕ್ಕೆ ಕಳಿಸಿ ಪುಣ್ಯಕಟ್ಟಿಕೊಂಡಿತೇನೋ. ಮುಂದಿನ ಪಾತ್ರ ವಹಿಸಲು ನಟನು ತೆರೆಯ ಮರೆ ಸೇರಿದಂತೆ ಸ್ಟ್ಯಾಲಿನ್ ಈ ನಾಲ್ಕು ವರುಷಗಳಲ್ಲಿ ಸೈಬೀರಿಯದಲ್ಲಿ ವಾಸಿಸಿದನು. ಸೆರೆಮನೆಯ ಆ ಕತ್ತಲು ಗವಿಯಲ್ಲಿ ಈ ಸಿಂಹ ನಾಲ್ಕು ವರುಷಗಳಲ್ಲಿ ಸೈಬೀರಿಯದಲ್ಲಿ ವಾಸಿಸಿದನು. ಸೆರೆಮನೆಯ ಆ ಕತ್ತಲುಗವಿಯಲ್ಲಿ ಈ ಸಿಂಹ ನಾಲ್ಕುವರುಷಗಳನ್ನು ಹೇಗೆ ಕಳೆಯಿತೋ?

## ಜೀವನಸಂಗ್ರಾಮ

೧೯೦೭ರಿಂದ ೧೯೧೭ರ ವರೆಗಿನ ಸ್ಟ್ಯಾಲಿನ್ನನ ಜೀವನವು ಚಳವಳಿ, ಸಂಪು, ಬಂಧನ, ಶಿಕ್ಷೆ, ಗಡೀಪಾರು, ಪಲಾಯನ ಮೊದಲಾದ ಘಟನೆಗಳಿಂದ ತುಂಬಿತುಳುಕಾಡುತ್ತಿದೆ. ಈಗ ಸ್ಟ್ಯಾಲಿನ್ ಅಂದಿನ ತನ್ನ ದಿನಚರಿ, ಬದುಕುತ್ತಿದ್ದ ವಾತಾವರಣ, ತಾನು ಕಂಡು ನೋಡಿ ಮಾತನಾಡಿದ ಜನರ

ವ್ಯಕ್ತಿಚಿತ್ರ ಮೊದಲಾದವುಗಳೊಂದಿಗೆ ಈ ಘಟನೆಗಳನ್ನು ಬರೆವರೆ ಅದೊಂದು ಸರಸ ಕಾದಂಬರಿಯಾಗುವದಲ್ಲಿ ಸಂಶಯವಿಲ್ಲ. ವಾಕ್ಯಟ ತೆಗೆದರೆ ಅದು ಅತ್ಯಂತ ರೋಮಾಂಚಕಾರಿಯಾಗದೇ ಇರದು. ಅಂದಿನ ಅವನ ಜೀವನವು ದೊಡ್ಡ ಸಂಗ್ರಾಮದಂತಿದೆ. ಝಾರ್ ಸರಕಾರವನ್ನು ಚಿಕ್ಕಂದಿನಲ್ಲೇ ಕೆಣಕಿ ದಕ್ಕಿಸಿಕೊಂಡುದುದು ಸಾಮಾನ್ಯ ವಿಷಯ ವೇನು? ಅಷ್ಟು ಎದೆಗಾರಿಕೆಯಿದ್ದವರು ಅಲ್ಪ ಸ್ವಲ್ಪ ಮಂದಿ. ವಿರೋಧ ಕಟ್ಟಿಕೊಂಡವರನ್ನು ಮೆಟ್ಟಿಬಿಡಲು ಝಾರ್ ಸರಕಾರದ ಯಂತ್ರವೇ ಚಲಿಸು ತಿತ್ತು. ಎಷ್ಟೋ ಕ್ರಾಂತಿಕಾರರು ಅದರಡಿ ಬಿದ್ದು ಹೋಗಿದ್ದಾರೆ; ಪ್ರಾಣ ನೀಗಿದ್ದಾರೆ; ಸೈಬೀರಿಯದಲ್ಲಿ ಕುಂಟಳಕಾಯಂತೆ ಕೊಳೆತಿದ್ದಾರೆ. ವಿದೇಶ ದಲ್ಲಿ ತಲೆಮರೆಸಿಕೊಂಡಿದ್ದವರಿಗೂ ಕಡಿಮೆಯಿಲ್ಲ. ಪ್ರಾಣವುಳಿಸಿಕೊಳ್ಳಲು ಕ್ರಾಂತಿಪಥ ಬಿಟ್ಟು ಘಟನಾತ್ಮಕ ಹೋರಾಟದ ಪಲ್ಲವಿ ಹಾಡಲಾರಂಭಿಸಿ ದುದೂ ಇದೆ. ಸ್ಟಾಲಿನ್ನನ ಜೀವನ ಇವರೆಲ್ಲರಿಗಿಂತ ಭಿನ್ನವಾಗಿದೆ. ಯಾವ ಶಿಕ್ಷೆ, ಚಿತ್ರಹಿಂಸೆಗಳಿಂದಲೂ ಅವನು ಅಧೀರನಾಗಲಿಲ್ಲ. ಸೈಬೀರಿಯಕ್ಕೆ ಕಳಿಸಲ್ಪಟ್ಟಾಗ, ಶಿಕ್ಷೆಯ ಅವಧಿ ಮುಗಿಯುವ ವರೆಗೆ ಮನಸ್ಸಿನಲ್ಲೆ ಮುಂದಿಗೆ ತಿನ್ನುತ್ತ ಸೆರೆಮನೆಯಲ್ಲಿ ಕಾಲಕಳೆಯಲಿಲ್ಲ. ದೇಶಭ್ರಷ್ಟನಾದಾಗ, ಜನರನ್ನು ತ್ಯಜಿಸಿ, ತಲೆ ಉಳಿಸಿಕೊಳ್ಳಲು ಪರದೇಶವಾಸಿಯಾಗಲಿಲ್ಲ. ಜನಸಾಮಾನ್ಯ ರೊಡನೆ ಇದ್ದು, ಬೆರೆತು, ಬದುಕಿ, ಬಂದಾಗಿ ಬಂದ ಸುಖ-ಕಷ್ಟಗಳಿಗೆಲ್ಲ ತಲೆ ಕೊಟ್ಟಿರುವನು. ಎಂದೆಂದೂ ಜನತೆಯನ್ನು ವಂಚಿಸಿ ಅವನು ದೂರ ಹೋಗಿಲ್ಲ. ಅವರನ್ನು ನಡುನೀರಲ್ಲಿ ಕೈಬಿಟ್ಟಿಲ್ಲ. ಇದು ನಿಜವಾಗಿಯೂ ಜನನಾಯಕನಲ್ಲಿ ಬೇಕಾದ ಗುಣ. ಅಂತೆಯೇ ಸ್ಟಾಲಿನ್ನನ ನಾಮವು ರಶಿಯದಲ್ಲಿ ಲೋಕಾಭಿರಾಮವಾಯಿತು.

## ಸ್ಟಾಲಿನ್ನನ ಸಹನೆ

ಈ ಅದ್ಭುತ ಹೋರಾಟದಲ್ಲಿ ಸ್ಟಾಲಿನ್ ಅತ್ಯಂತ ಕ್ರೂರ ಹಿಂಸೆಗಳಿಗೆ ಸವಿತುತ್ತಾಗಿದ್ದಾನೆ. ಅವನನ್ನು ಹಿಡಿಯಲು ಪೋಲೀಸರಿಗೆ ಸಾಕುಸಾಕಾಗು ತ್ತಿತ್ತು. ಆದುದರಿಂದ ಅವರಿಗೆ ಅವನ ಮೇಲೆ ಹೊಟ್ಟೆಯುರಿ. ಕೈಗೆ ಸಿಕ್ಕಿ ದಾಗ ಒದೆದು, ಬಡಿದು, ತಮ್ಮ ಮುಯ್ಯಿತೀರಿಸಿಕೊಳ್ಳುತ್ತಿದ್ದರು. ಲಾಕಪ್ಪಿ ನಲ್ಲಿ ಹಾಕಿಬಿಟ್ಟು ಎರಡು ಮೂರು ದಿವಸಗಳ ವರೆಗೆ ಅನ್ನ ನೀರು ನೀಡದೆ

ಪೀಡಿಸುತ್ತಿದ್ದರು. ಇದಕ್ಕಿಂತಲೂ ದೊಡ್ಡ ಅತ್ಯಾಚಾರವೊಂದನ್ನು ಅವನು ಸಹಿಸಿದ್ದಾನೆ. ಅದನ್ನು ನೆನಸಿದಾಗ ಮೈನವಿರೇಳುವುದು. ಆಗಾಗ ಸ್ಟಾಲಿನ್ ಸೈಬೀರಿಯದ ಸೆರೆಮನೆಯಿಂದ ತಪ್ಪಿಸಿಕೊಳ್ಳುತ್ತಿದ್ದನಷ್ಟೆ. ಅವನಿಗೆ ಬುದ್ಧಿ ಕಲಿಸಬೇಕೆಂದು ಅಧಿಕಾರಿಗಳು ನಿಶ್ಚಯಿಸಿದರು. ಒಂದು ಸೇನಾದಳವನ್ನು ಕರೆಸಿ, ಸೈನಿಕರನ್ನು ಎದುರುಬದುರಾಗಿ ಸಾಲಿಗೆ ಉದ್ದಕ್ಕೂ ನಿಲ್ಲಿಸಿ, ಅವರ ನಡುವೆ ಓಡುವಂತೆ ಸ್ಟಾಲಿನ್ನನಿಗೆ ಆಜ್ಞಾಪಿಸಿದರು. ಸ್ಟಾಲಿನ್ ಅದರಂತೆ ಓಡಿದಾಗ ಪ್ರತಿಯೊಬ್ಬ ಸೈನಿಕನೂ ತನ್ನ ಬಂದೂಕಿನ ತುದಿಯಿಂದ ಸ್ಟಾಲಿನ್ನನ ತಲೆಯನ್ನು ಚುಚ್ಚಿದ. ಬೇರೆಯವರಾಗುತ್ತಿದ್ದರೆ ಎದೆಯೊಡೆದು ಸಾಯುತ್ತಿದ್ದರು. ಸ್ಟಾಲಿನ್ ಹನಿಕಂಬನಿ ಸುರಿಸಲಿಲ್ಲ. ಈ ಅಗ್ನಿಪರೀಕ್ಷೆಯಿಂದ ಪಾರಾಗಿ ಬಂದಿದ್ದಾನೆ.

## ವಜ್ರಹೃದಯಿ

ಸ್ಟಾಲಿನ್ ಜೀವನದಲ್ಲಿ ಅನೇಕ ಏರುತಗ್ಗುಗಳನ್ನು ತುಳಿದಿದ್ದಾನೆ. ಅನುಭವಿ. ಸುಖಕ್ಕಿಂತಲೂ ಕಷ್ಟಗಳನ್ನು ಅನುಭವಿಸಿದುದೇ ಹೆಚ್ಚು. ಕ್ರಾಂತಿಯ ಈ ಹೋರಾಟ ಕಾಲದಲ್ಲಿ ತುಣುಕು ರೊಟ್ಟಿ, ಉಪ್ಪು ತಿಂದು ತೃಪ್ತನಾಗುತ್ತಿದ್ದ. ಅದೂ ಕೂಲಿಕಾರ ಬಂಧುಗಳು ಕೊಟ್ಟರುಂಟು. ಇಲ್ಲದಿದ್ದರೆ ಇಲ್ಲ. ತಿರಿವ ಜೋಗಿಗಳಂತೆ ಈ ದಿನ ಇಲ್ಲಿದ್ದರೆ ನಾಳೆ ಮತ್ತೊಂದು ಕಡೆ ವಾಸ. ಪೋಲೀಸರ ವಕ್ರದೃಷ್ಟಿಯಿಂದ ಪಾರಾಗಲು ಗಿರಿಯಲ್ಲೋ ಗವಿಯಲ್ಲೋ, ಕಾಡಿನಲ್ಲೊ ಅಡಗಿರಬೇಕಾಗುತ್ತಿತ್ತು. ಅನ್ನ ನಿದ್ರೆ ತೊರೆದು ಪರಿಶ್ರಮಪಟ್ಟಿರುವನು. ಸರಕಾರದ ವಶವಾದಾಗ ಅನಂತ ಚಿತ್ರಹಿಂಸೆಗಳು. ಕಾರಾಗೃಹವಾಸವಾದರೂ ಒಂದು ವರುಷವೇ ? ಎರಡು ವರುಷಗಳೇ ? ಜೀವನದ ಕಹಿ ಉಂಡುಂಡು ಅವನು ಶ್ಯಾಮಕಾಯನಾಗಿದ್ದಾನೆ; ಭೀಮಕಾಯನಾಗಿದ್ದಾನೆ. ಬಾಳಿನ ಕಠೋರ ಅನುಭವಗಳು ಅವನು ವಜ್ರಹೃದಯಿಯಾಗುವಂತೆ ಮಾಡಿವೆ. ಝಾರನ ಏಟಿಗೆ, ಒದೆತಕ್ಕೆ, ತಿವಿತಕ್ಕೆ, ಕುಗ್ಗದ ಬಗ್ಗದ, ಜರಿಯದ ಅಭೇದ್ಯಕೋಟೆಯಾಗಿದೆ ಅವನ ಹೃದಯ. ಈ ದುರ್ಗದೊಳಗೆ ರಶಿಯದ ಜನಸಾಮಾನ್ಯರು ಆಶ್ರಯಪಡೆದು ಝಾರನ ವಿರುದ್ಧ ಯುದ್ಧಸನ್ನದ್ಧರಾಗುತ್ತಿದ್ದಾರೆ.

—

# ರಾಜ್ಯಕ್ರಾಂತಿ

ಯುರೋಪಿನಲ್ಲಿ ಮಹಾಯುದ್ಧದ ಜ್ವಾಲೆಯೆದ್ದಿತು. ವ್ಯಾಪಾರೀ ಮತ್ಸರ, ಸಾಮ್ರಾಜ್ಯದಾಹ, ಜಾಗತಿಕ ಒಡೆತನಗಳ ಅತಿಕಾಂಕ್ಷೆಯಿಂದ ಬ್ರಿಟನ್, ಫ್ರಾನ್ಸ್, ಜರ್ಮನಿ, ರಶಿಯ ಮೊದಲಾದ ದೇಶಗಳು ರಣಕಣಕ್ಕೆ ಇಳಿದುವು. ಅಂತರಾಷ್ಟ್ರೀಯ ಸಾಮ್ಯವಾದಿಗಳಲ್ಲಿ ಹೆಚ್ಚಿನವರು ತಮ್ಮ ತತ್ವಜ್ಞಾನಕ್ಕೆ ತಿಲಾಂಜಲಿ ಎರೆದು, ಈ ನರಮೇಧದಲ್ಲಿ ತಂತಮ್ಮ ಸರಕಾರಗಳಿಗೆ ಬೆಂಬಲವಿತ್ತರು. ಇಂತಹ ಗಾಳಿಯ ಕೋಳಿಗಳಿಗೆ ರಶಿಯದಲ್ಲಾದರೂ ಏನು ಕೊರತೆ? ಆದರೆ, ಬಾಲ್ಶೆವಿಕರು ಮಾತ್ರ ಜನತೆಯನ್ನು ನಡುನೀರಲ್ಲಿ ಕೈಬಿಡಲಿಲ್ಲ. ಇದು ಸಾಮ್ರಾಜ್ಯಶಾಹೀ ಯುದ್ಧ; ಜಾಗತಿಕ ಭ್ರಾತೃತ್ವ ಯುದ್ಧವಲ್ಲ; ಜನ ತಮ್ಮ ಕೈಕಾಲುಗಳಿಗೆ ತೊಡಿಸಿದ್ದ ಸಂಕೋಲೆಗಳನ್ನು ಮುರಿದೆಸೆಯಲು ಇದೇ ಸಂದರ್ಭವೆಂದು ಸಾರಿದರು. 'ಸಾಮ್ರಾಜ್ಯಶಾಹೀ ಯುದ್ಧವನ್ನು ಅಂತರ್ಯುದ್ಧವಾಗಿ ಪರಿವರ್ತಿಸಿರಿ'ಯೆಂದು ಲೆನಿನ್ ಭೈರವನಂತೆ ರಣಭೇರಿ ಬಡಿದ. ವರ್ಗಪ್ರಜ್ಞೆಯುಳ್ಳ ರಶಿಯದ ಜನತೆ ಬಾಲ್ಶೆವಿಕ್ ಮುಖಂಡರ ಆಜ್ಞಾನುವರ್ತಿಗಳಾಗಿ ಯುದ್ಧಕಾಲದ ಅನಾಯಕತ್ವ ಪರಿಸ್ಥಿತಿಯಲ್ಲಿ ತಮ್ಮ ಆಶೆಯನ್ನು ಈಡೇರಿಸಿಕೊಳ್ಳಲು ಹೆಣಗಿದರು.

## ಯುದ್ಧದ ಗತಿ-ಸ್ಥಿತಿ

ಉರಿ ನುಂಗಲು ಅದರ ಬಳಿ ಸುಳಿಯುವ ಹುಳ, ಗರಿ ಸುಟ್ಟುಕೊಂಡಂತೆ ಯುರೋಪಿನ ಈ ಕುದಿವ ಎಣ್ಣೆಕೊಪ್ಪರಿಗೆಗೆ ರಶಿಯವು ಕೈಹಾಕಿ ಕೈ ಮೈ ಸುಟ್ಟುಕೊಂಡಿತು. ಆಧುನಿಕ ಯುದ್ಧೋಪಕರಣಗಳಲ್ಲಿ ರಣಕೌಶಲದಲ್ಲಿ, ರಶಿಯವು ಜರ್ಮನಿಯ ಸರಿಸಾಟಿಯಲ್ಲ. ಯುದ್ಧಾರಂಭವಾದಾಗ ಸೈನಿಕರಿಗೆ ಒಂದೊಂದರಂತೆ ಕೋವಿ ಕೂಡಾ ಇರಲಿಲ್ಲವಂತೆ. ಯುದ್ಧನಿರ್ವಹಣವೂ ಸದೋಷ. ರಶಿಯದ ಸೈನಿಕರು ಜೀವದ ಹಂಗು ದೊರೆದು ಕಾದಿದರೂ ಸೋಲು ತಪ್ಪಲಿಲ್ಲ. ಗಿರಿ ಜರಿದಾಗ ಮರ ಮಟ್ಟು ಹಳ್ಳಕೊಳ್ಳ ತಿಟ್ಟು ಭೂಗತವಾಗುವಂತೆ, ಜರ್ಮನ ಯುದ್ಧ ಯಂತ್ರದಡಿ ರಶಿಯನರು ಬಿದ್ದು ನುಚ್ಚುನುರಿಯಾದರು. ಈ ನಷ್ಟವನ್ನು ತುಂಬಿಕೊಳ್ಳದೆ ಉಪಾಯವುಂಟೇ? ಅಧಿಕಾರಿಗಳು ಕೂಲಿಕಾರರನ್ನೋ, ಹೊಲ ನೆಲವಿಲ್ಲದ

ರೈತರನ್ನೋ, ಸೇನೆಗೆ ಭರ್ತಿಮಾಡಿಕೊಂಡರು. ಇವರು ಝಾರನ ಮೇಲೆ ಮಮತೆಯಿಲ್ಲದ ಜನ. ಯುದ್ಧದ ಬಗೆಗೆ ಆಸಕ್ತಿಯೂ ಇದ್ದವರಲ್ಲ. ಶಿಸ್ತು ಕಡಿಮೆ. ಒರಟು ಮಂದಿ. ಅಧಿಕಾರಿಗಳ ಮಾತನ್ನು ಕೇಳಿದರುಂಟು; ಇಲ್ಲದಿದ್ದರೆ ಇಲ್ಲ. ವರ್ಗಪ್ರಜ್ಞೆಯುಳ್ಳ ಕೂಲಿಕಾರರೂ ಒಳಗೆ ನುಸುಳಿಕೊಂಡು ಸೇನೆಯನ್ನು ಒಡೆದುಕೊಳ್ಳಲು ಯತ್ನಿಸುತ್ತಿರುವರು. ಸಂದರ್ಭ ದೊರೆತಾಗಲೆಲ್ಲ ತಂಡತಂಡಗಳೇ ರಣರಂಗದಿಂದ ಕಣ್ಮರೆಯಾದುವು. ಓಡಿಹೋಗುವ ಸೈನಿಕರನ್ನು ತೋಫಿನ ಬಾಯಿಗೆ ಸಿಲ್ಲಿಸಬೇಕೆಂದು ಸರಕಾರ ಶಾಸನ ಹೊರಡಿಸಿದ ಮೇಲೆ ಸೇನೆಯಲ್ಲಿ ಕೋಲಾಹಲವೇ ಎದ್ದಿತು.

ಯುದ್ಧದ ಗತಿ ಹೀಗೆ! ನಾಡಿನ ಸ್ಥಿತಿಯಾದರೂ ಏನು? ಆಹಾರ ವಸ್ತುಗಳಲ್ಲಿ ಬಹ್ವಂಶವನ್ನು ಸರಕಾರವೇ ಕೊಂಡುಕೊಳ್ಳುತಿತ್ತು. ಸೇನೆಯ ಹೊಟ್ಟೆ ತುಂಬಬೇಕಲ್ಲ! ಮತ್ತೆ ಜನರಿಗೆ ಉಳಿದುದು ಅಲ್ಪಸ್ವಲ್ಪ. ವಾಹನ ಸೌಕರ್ಯಗಳ ಕೊರತೆಯಿಂದ ಇದ್ದಬಿದ್ದ ಧವಸಧಾನ್ಯಗಳ ಹರಿದಾಟವೂ ನಿಂತಿತು. ಬೆಲೆ ಮಿತಿಮೀರಿತು; ಅಲ್ಪ ಸಂಬಳ ಪಡೆಯುತಿದ್ದ ಕೂಲಿಕಾರರು ಜೀವಿಸುವುದಾದರೂ ಹೇಗೆ? ಹೆಚ್ಚಿನ ಕೂಲಿ ಬೇಡಿಕೆ ಮನ್ನಿಸಲ್ಪಡದು. ಅಧಿಕ ಲಾಭ ಪಡೆಯಲು ಟೊಂಕ ಕಟ್ಟಿರುವ ಬಂಡವಾಳಶಾಹಿಗಳು ಅದರ ಕಡೆ ಲಕ್ಷ್ಯ ಕೊಡಲಾರರು. ಇಂಥ ವಾತಾವರಣದಲ್ಲಿ ಯುದ್ಧಕ್ಕಿಂತಲೂ ಜನಸಾಮಾನ್ಯರಿಗೆ ಅನ್ನ ಯೋಜನೆಗಿಟ್ಟಿತು; ೧೯೦೫ರಂತೆ ಕೂಲಿಕಾರರ ಸಂಪು, ಮೆರವಣಿಗೆಗಳು ಆರಂಭವಾದುವು. 'ಯುದ್ಧಕ್ಕೆ ಧಿಃಕ್ಕಾರ! ಆಹಾರ! ಶಾಂತಿ!' ಎಂದು ದೇಶದಲ್ಲಿ ಬೊಬ್ಬೆಯೆದ್ದಿತು. ಕೂಲಿಕಾರರೊಡನೆ ರೈತರು 'ಭೂಮಿ' ಎಂದು ಧ್ವನಿಗೂಡಿಸಿದರು. ಯುದ್ಧದಲ್ಲಿ ಅವರ ಮೇಲೆ ಬಿದ್ದ ಭಾರ ಅಪಾರ. ಗೌಡರು ಒತ್ತಾಯದಿಂದ ರೈತರನ್ನು ಸೇನೆಗೆ ಭರ್ತಿಮಾಡಿ ಕಳುಹಿಸುತ್ತಿದ್ದರು. ರೈತರಲ್ಲಿದ್ದ ಕುದುರೆಗಳನ್ನು ಹೊಡೆದೊಯ್ದಿದ್ದರು. ಮಾಂಸಕ್ಕಾಗಿ ಕೋಳಿ, ಹಂದಿ, ದನಕರುಗಳನ್ನು ರೈತಜನ ನೀಡಬೇಕಾಗಿತ್ತು. ಯುದ್ಧದ ಅಧಿಕ ಕರ ಬೇರೆಯೇ. ರೈತರ ಪ್ರತೀಕಾರ ಭಾವನೆ ಕುದಿದು ಬಂತು. ಒಟ್ಟು ಹಳ್ಳಿಪಳ್ಳಿ, ಕೋಟೆ ಪೇಟೆ ಎಲ್ಲೆಲ್ಲಿ ನೋಡಿದರೂ ಅಸಂತುಷ್ಟಿ, ನಿರುತ್ಸಾಹ, ನಿರಾಶೆ. ಯಾವ ಗಳಿಗೆಯಲ್ಲಿ ಏನಾಗಬಹುದೋ ಏನೋ ಎಂಬ ಅನಿಶ್ಚಿತ ವಾತಾವರಣ.

## ಫೆಬ್ರುವರಿ ವಿಪ್ಲವ

ಅನ್ನ ಜೀವನಾಧಾರ. ತಾಯಿ ಗರ್ಭದಿಂದ ಈ ಇಳೆಗೆ ಇಳಿದು ಬಂದ ಮೇಲೆ ಕಳೇಬರ ಕಳೆದೊಗೆದು ಹೋಗುವ ವರೆಗೂ ಅನ್ನದ ಅವಶ್ಯಕತೆ ತಪ್ಪಿದ್ದಲ್ಲ. ಅನ್ನ ಬ್ರಹ್ಮನ ಸಾಕ್ಷಾತ್ಕಾರದ ಹೋರಾಟವೇ ಎಲ್ಲ ಹೋರಾಟಗಳಿಗೂ ಮೂಲ. ರಾಷ್ಟ್ರೀಯ ಅಂತರ್ರಾಷ್ಟ್ರೀಯ ಗುಡುಗುಗುದ್ದಾಟಗಳಿಗೆ ಅನ್ನವೇ ಕಾರಣ. ಅನ್ನಗತ ಪ್ರಾಣಗತ. ಹಸಿವಿನ ಕೂಗನ್ನು ಸಹಿಸದ ಪೆಟ್ರೊಗ್ರಡದ ಕೂಲಿಕಾರರು ಬೀದಿಗಿಳಿದು ಶಾಂತಿ! ಆಹಾರ! ಸ್ವಾತಂತ್ರ್ಯ! ವೆಂದು ಬೇಗೆಯ್ಯತೊಡಗಿದರು. ಕಲ್ಲುಸಕ್ಕರೆ ಕೇಳಿದಾಗ ಕಲ್ಲು ಕೊಡುವಂತೆ, ಅಧಿಕಾರಿಗಳು ದಬ್ಬಾಳಿಕೆಯ ಹಲ್ಲು ತೋರಿದರು. ಜನರನ್ನು ಚದರಿಸಲು ಪೋಲೀಸರನ್ನಟ್ಟಿದರು. ಜನ ಬಗ್ಗಲಿಲ್ಲ. ಆಮೇಲೆ ಮೊಗಲ ಠೀವಿಯಿಂದ ಬಂದ ಅಶ್ವಾರೋಹಿಗಳು ಕೂಲಿಕಾರ ಹೆಣ್ಣುಗಂಡು ಮಕ್ಕಳುಮರಿ ಕಂಡು ಗುಂಡೆಸೆಯಲು ಹಿಂದುಮುಂದು ನೋಡಿದರು. ಹೌದು. ಅದು ಹಳೇ ಸೇನೆಯಲ್ಲ. ಹಳೇ ಕಠೋರ, ನಿಷ್ಠುರ, ನಿರ್ದಯ ಸೇನೆ ಜರ್ಮನ್ ತೋಪುಗಳಿಗೆ ಬಲಿಯಾಗಿತ್ತು. ಈ ಸೇನೆಯಲ್ಲಿದ್ದವರೆಲ್ಲ ಹೊಸಬರೇ. ಹೆಚ್ಚಿನವರು ಪೆಟ್ರೋಗ್ರಡ, ಮಾಸ್ಕೋ, ಖಾರ್ಕೋವ ಮೊದಲಾದ ಕಾರಖಾನೆಗಳಲ್ಲಿ ಮೊನ್ನೆಮೊನ್ನೆಯ ವರೆಗೆ ದುಡಿಯುತ್ತಿದ್ದ ಕೂಲಿಕಾರರು. ಬಡಜನರ ಗೋಳಿನ ಅನುಭವ ಅವರಿಗಿದೆ. ತಾವೂ ಈ ಜನಸಾಮಾನ್ಯರೂ ಒಂದು; ತಾವೆಲ್ಲರೂ ಬಂಧುಗಳೆಂಬ ಭಾವ, ಮಮತೆ ಅವರಲ್ಲಿದೆ. ಝಾರ್ ಸಮವಸ್ತ್ರ ಧರಿಸಿದೊಡನೆಯೇ ಆ ಬಾಂಧವ್ಯದ ಎಳೆ ಹರಿದು ಹೋಗಿಲ್ಲ; ಆದುದರಿಂದಲೇ ಈ ಮಂದಿಯ ಮೇಲೆ ಕೈ ಎತ್ತಲು ಅವರ ಸಂಕೋಚ. ಜನರ ಆರ್ತನಾದ ಅವರ ಎದೆಹೊಕ್ಕಿತು. ಸೋಲಿನಿಂದ ಅಸಮಾಧಾನಗೊಂಡಿದ್ದ ಸೈನಿಕರು ಕೊನೆಗೆ ತಂಡೋಪತಂಡವಾಗಿ ಬಂದು ಜನಸಾಮಾನ್ಯರನ್ನೇ ಕೂಡಿಕೊಂಡರು. ಹೆಚ್ಚು ಕಡಿಮೆ ಪೆಟ್ರೊಗ್ರಡದ ಒಂದುವರೆ ಲಕ್ಷ ಸೇನೆಯೂ ಜನತೆಯ ಪಕ್ಷ ಒಡಿಯಿತು. ಸೈನಿಕರ ಬೆಂಬಲ ದೊರೆತೊಡನೆಯೇ ಕ್ರಾಂತಿಕಾರರು ಫೆಬ್ರುವರಿ ೨೭ನೇ ತಾರೀಖಿನ ದಿನ ಪೆಟ್ರೊಗ್ರಡದ ರೇಲ್ವೆ, ಟಪ್ಪಾಲು, ತಂತಿ, ಮದ್ದಿನ ಮನೆ ಎಲ್ಲವನ್ನೂ ವಶಪಡಿಸಿಕೊಂಡು ಝಾರ್ ಅಧಿಕಾರಿಗಳನ್ನೂ ಸೆರೆಹಿಡಿದರು. ಕೂಲಿಕಾರ

ಸೈನಿಕ ಪ್ರತಿನಿಧಿಗಳ ಸೋವಿಯೆಟ್‌ಗಳು (ಮಂಡಲ) ಪೆಟ್ರೊಗ್ರಡದಲ್ಲಿ ಸ್ಥಾಪಿಸಲ್ಪಟ್ಟವು. ಪೆಟ್ರೊಗ್ರಡ ಸರ್ವ ಸೋವಿಯೆಟ್ ತಾನೇ ರಾಜ್ಯಾಡಳಿತೆ ನಡೆಸುವಂತೆ ಎಲ್ಲ ಕಾರಭಾರಕ್ಕೆ ಕೈಹಾಕಿತು.

### ರಾಜ್ಯತ್ಯಾಗ

ಪೆಟ್ರೊಗ್ರಡದ ಘಟನೆ ವಾಯುವೇಗದಲ್ಲಿ ದೇಶದೆಲ್ಲ ಭಾಗಗಳಿಗೂ ಗೊತ್ತಾಯಿತು. ಬಾಲ್ಟಿಕ್ ನೌಕಾಪಡೆಯ ನಾವಿಕರು ದಂಗೆಯೆದ್ದರು. ಮಾಸ್ಕೋ ಕೂಲಿಕಾರರು ಕ್ರಾಂತಿಪಥ ಹಿಡಿದರು. ಎಲ್ಲಿ ನೋಡಿದರೂ ಗಲಭೆಯೇ. ಜರ್ಮನಿಯೊಡನೆ ಯುದ್ಧಮಾಡುವ ಬದಲು ಸೈನಿಕರು ಅಂತರ್ಯುದ್ಧದಲ್ಲಿ ತೊಡಗಿದ್ದಾರೆ. ರಣರಂಗದಲ್ಲಿದ್ದ ಝಾರ್ ಕಕ್ಕಾವಿಕ್ಕಿಯಾದ. ಪೆಟ್ರೊಗ್ರಡದ ಸೊಕ್ಕು ಮುರಿಯಲು ಒಂದು ದೊಡ್ಡ ದಂಡನ್ನಟ್ಟಿದ. ಪೆಟ್ರೊಗ್ರಡದ ರೇಲ್ವೆ ಕೂಲಿಕಾರರ ಕುಮತ್ತಿನಿಂದ ಆ ಸೇನೆ ಹಾದಿ ತಪ್ಪಿ ಬೇರೆ ಕಡೆಯೇ ಹೋಗಿಬಿಟ್ಟಿತು. ಮುಂದೇನು ಗತಿ? ಝಾರನೇ ರಾಜಧಾನಿಗೆ ಹೊರಟನು. ಅವನ ಪ್ರಯಾಣವೂ ಸುಖಕರವಾಗದಂತೆ ರೇಲ್ವೆ ಕೂಲಿಕಾರರು ಮುಷ್ಕರ ಹೂಡಿದರು. ರೇಲ್ವೆಯೇ ಓಡಲೊಲ್ಲದು. ರಶಿಯದ ಝಾರ್ ಕಂಗೆಟ್ಟು ಹೋದ. ಪರಿಸ್ಥಿತಿ ವಿಕೋಪಕ್ಕೆ ಹೋಗಿದೆಯೆಂದು ತಿಳಿದು ಹೊಣೆಗಾರ ಸರಕಾರ ಸ್ಥಾಪಿಸುವುದಾಗಿ ಡ್ಯೂಮಾಕ್ಕೆ ಹೇಳಿಕಳಿಸಿದ. ಆದರೆ ದುರದೃಷ್ಟದಿಂದ ಅವನ ಗೈರುಹಾಜರಿಯಲ್ಲಿ ಡ್ಯೂಮಾದ ಸದಸ್ಯರು ಸಭೆ ಸೇರಿ ರಾಡ್‌ಝಿಯಾಂಕೋನ ನಾಯಕತ್ವದಲ್ಲಿ ಒಂದು ತಾತ್ಕಾಲಿಕ ಸರಕಾರವನ್ನೇ ರಚಿಸಿಬಿಟ್ಟಿದ್ದರು. ಝಾರ್ ರಾಜ್ಯತ್ಯಾಗ ಮಾಡದೆ ಕ್ಷೋಭೆಯಡಗದೆಂದು ರಾಡ್‌ಝಿಯಾಂಕೋನ ಹೇಳಿಕೆ. ತನಗೆ ಜನಬೆಂಬಲ, ಡ್ಯೂಮಾದ ಬೆಂಬಲ ಯಾವುದೂ ಇಲ್ಲದಿದ್ದುದನ್ನು ನೋಡಿ ಝಾರ್ ಹತಾಶನಾದ. ರಾಜ್ಯತ್ಯಾಗಮಾಡಲು ಅವನೊಪ್ಪಿ, ಸಹೋದರನಿಗೆ ಪಟ್ಟಗಟ್ಟಲು ಬಯಸಿದ. ಆದರೆ ರಾಡ್‌ಝಿಯಾಂಕೋನಿಗೆ ಇದು ಸಮ್ಮತವಾಗದು. ಹೀಗಾಗಿ ಝಾರನ ಕಿರೀಟ ಉರುಳಿತು. ಪ್ರಭುತ್ವ ತಾತ್ಕಾಲಿಕ ಸರಕಾರದ ಅಧೀನವಾಯಿತು. ಲಕ್ಷಗಟ್ಟಲೆ ಜನರನ್ನು ಸೆರೆಮನೆಗಟ್ಟಿದ ಝಾರನು ಈಗ ಪತ್ನೀ-ಪುತ್ರ-ಮಿತ್ರ ಪರಿವಾರದೊಂದಿಗೆ ಅಲ್ಲಿಗೇ ತೆರಳಬೇಕಾಗಿ ಬಂದಿತು.

## ದ್ವಿಮುಖ ಸರಕಾರ

ಫೆಬ್ರುವರಿ ಕ್ರಾಂತಿಯು ಯಶಸ್ವಿ ಹೊಂದಿದ ಮೇಲೆ ದೇಶದಲ್ಲಿ ದ್ವಿಮುಖಶಕ್ತಿ ತಲೆಯೆತ್ತಿತು. ಒಂದು ರಾಡ್‌ಝಿಯಾಂಕೋನ ತಾತ್ಕಾಲಿಕ ಸರಕಾರ. ಇನ್ನೊಂದು ಪೆಟ್ರೊಗ್ರಡ ಸೋವಿಯೆಟ್. ಸೋವಿಯೆಟ್ ಸೈನಿಕ ಮತ್ತು ಕೂಲಿಕಾರ ಮಂಡಲ. ಆರಿಸಿ ಬಂದ ಘಟಕ. ಸಶಸ್ತ್ರ ಬಲಗಳ ಬೆಂಬಲ ಅದಕ್ಕೆ. ಜನರ ವಿಶ್ವಾಸವಿದ್ದುದೂ ಅದರ ಮೇಲೆಯೇ. ತಂತಿ ಟಪ್ಪಾಲು ಮೊದಲಾದ ಖಾತೆಗಳಲ್ಲಿದ್ದ ಕೂಲಿಕಾರರೂ ಈ ಸೋವಿಯೆಟಿಗೇ ವಿಧೇಯರು. ಆದರೆ ದುರದೃಷ್ಟದಿಂದ ಈ ಸೋವಿಯೆಟ್ ರಾಜ್ಯಾಡಳಿತೆಯ ಹೊಣೆ ವಹಿಸಲು ತಪ್ಪಿತು. ಸೋವಿಯೆಟ್‌ದಲ್ಲಿ ಮೆನ್ಶೆವಿಕರು ಬಹು ಸಂಖ್ಯಾಕರಾಗಿದ್ದುದೇ ಈ ಕ್ರಿಯಾಶೂನ್ಯತೆಗೆ ಕಾರಣ. ಶಕ್ತಿಯಿದ್ದು ಸೋವಿಯೆಟ್ ಬಳಸಲಿಲ್ಲ. ಜನ ಕ್ರಾಂತಿಯ ತೇರು ಮುಂದೆಳೆಯುತಿದ್ದರೂ ಮೆನ್ಶೆವಿಕರು ಗಾಲಿಯಡಿ ಕಲ್ಲುಗಳನ್ನಿಡುತಿದ್ದರು. ಅಧಿಕಾರ ಸೋವಿಯೆಟ್ ಕೈ ಜಾರಿತು. ಜಾಯಿಬಿಡುತಿದ್ದ ಮಧ್ಯಮವರ್ಗ ಸೆಳೆದುಕೊಂಡಿತು.

ಇತ್ತ ರಾಡ್‌ಝಿಯಾಂಕೋನ ಸರಕಾರ ಬಾಳಿದುದು ಮೂರೇ ದಿನ. ಆಮೇಲೆ ರಾಜಾ ಲವೋವ್ ಸಂಮಿಶ್ರ ಮಂತ್ರಿಮಂಡಳವನ್ನು ರಚಿಸಿದನು. ಕೊನೆಗೆ ಕೆರೆನಸ್ಕಿ ಅಧಿಕಾರಕ್ಕೆ ಬಂದ. ಈತ ಕೂಲಿಕಾರಮುಖಂಡ. ಸಾಮ್ಯವಾದಿಯಲ್ಲ, ಬಾಲ್ಶೆವಿಕರೆಂದರೆ ಆವನ ಮನಸ್ಸಿಗೆ ಸೇರದು. ಮಹತ್ವಾಕಾಂಕ್ಷಿ. ನಿರಂಕುಶ ಮನೋವೃತ್ತಿಯುಳ್ಳವನು. ಬಂಡವಾಳಶಾಹಿಗಳ ಕೈಗೊಂಬೆ. ಮಾಂಡಲಿಕರೂ ದೊಡ್ಡ ದೊಡ್ಡ ಜಮೀನ್ದಾರರೂ ಅವನ ಬೆನ್ನು ಚಪ್ಪರಿಸುತಿದ್ದರು. ಜರ್ಮನಿಯೊಡನೆ ಹೂಡಿದ್ದ ಸಾಮ್ರಾಜ್ಯಶಾಹೀ ಯುದ್ಧವನ್ನು ಮುಂದುವರಿಸಲು ಆತನ ಆಸೆ. ಶಾಂತಿ, ಆಹಾರ, ಭೂಮಿ ಜನತೆಯ ಈ ಸೂತ್ರತ್ರಯಗಳನ್ನು ಸಾಧಿಸಲು ಕೆರೆನಸ್ಕಿ ಸರಕಾರ ಯಾವ ಉಪಾಯವನ್ನೂ ಕೈಕೊಳ್ಳಲಿಲ್ಲ. ಝಾರ್ ಪಕ್ಷಪಾತಿ ಸೇನಾಧಿಕಾರಿಗಳು ಕೆಲಸದಲ್ಲೇ ಉಳಿದರು. ತಾತ್ಕಾಲಿಕ ಸರಕಾರ ಜನರ ಅಪ್ರೀತಿಗೆ ಪಾತ್ರವಾಯಿತು. ಜನ ಝಾರ್ ಸತ್ತೆ ಮತ್ತು ಕೆರೆನಸ್ಕಿ ಆಡಳಿತೆಯಲ್ಲಿ ಏನೂ ಭಿನ್ನತೆ ಕಾಣದೆ ಹೋಯ್ತು. ಕೇವಲ ಕೈ ಬದಲಾಯಿತು ಹೊರತು ಧೋರಣದಲ್ಲಿ ಆಮೂಲಾಗ್ರ ಬದಲಾವಣೆಯಿಲ್ಲವಲ್ಲಾವೆಂದು ಜನ ಕಸಿವಿಸಿ-

ಗೊಂಡರು. ವರ್ಗಪ್ರಜ್ಞೆಯುಳ್ಳ ಕೂಲಿಕಾರರು, ಯುದ್ಧದಿಂದ ಬೇಸತ್ತ ಸೈನಿಕರು, ಹೊಲದ ಹಂಬಲಪಿದ್ದ ರೈತರು, ಕೆರೆನಸ್ಕಿ ಸರಕಾರದ ಮೇಲೆ ಸಿಟ್ಟಿಗೆದ್ದರು. ಸೋವಿಯೆಟ್, ಆಡಳಿತೆಯ ಸೂತ್ರ ಹಿಡಿಯಲಿಯೆಂದು ಜನ ಗುಲ್ಲೆಬ್ಬಿಸತೊಡಗಿದರು.

## ಸ್ಟಾಲಿನ್ನನ ಆಗಮನ

ಝಾರ್ ಪದತ್ಯಾಗ ಮಾಡಿದ ಮೇಲೆ ಸೆರೆಮನೆಗಳಲ್ಲಿ ಕೊಳೆಯುತ್ತಿದ್ದ ಸಾಮ್ಯವಾದಿಗಳೆಲ್ಲ ಬಿಡುಗಡೆ ಹೊಂದಿದರು. ಕ್ರಾಂತಿ ಯಶಸ್ವಿಯಾಯಿತೆಂಬ ಭ್ರಮೆ ಎಲ್ಲರಿಗೆ. ಪೆಟ್ರೊಗ್ರಾಡವನ್ನು ಸಂದರ್ಶಿಸಲು ಅವರ ಕುತೂಹಲ. ಒಬ್ಬೊಬ್ಬರೇ ಓಡಿಬಂದರು. ಸೈಬೀರಿಯದಲ್ಲಿದ್ದ ಸ್ಟಾಲಿನ್ ಆಗಮಿಸಿದುದು ಮಾರ್ಚತಿಂಗಳಲ್ಲಿ. ಒಂದವನು ಮಡದಿ-ಮಕ್ಕಳ ಮೊಗನೋಡಲು ಟಿಫ್ಲಿಸ್‌ಗೆ ತೆರಳಲಿಲ್ಲ. ಕಾರಾಗೃಹ ವಾಸದಿಂದ ಆರೋಗ್ಯ ಕೆಟ್ಟಿದೆಯೆಂಬ ನೆವದಿಂದ ಆರೋಗ್ಯಧಾಮವನ್ನು ಹುಡುಕಲಿಲ್ಲ. ಅಧಿಕಾರ, ಮಧ್ಯಮ ವರ್ಗದವರ ಪಾಲಾದುದು ಅವನ ಚಿಂತೆಗೆ ಕಾರಣವಾಯ್ತು. ಪೆಟ್ರೋಗಡ ಸೋವಿಯೇಟಿನ ಮೇಲೆ ಕೋಪವೂ ಬಂದಿತು. ಮೆನ್ಷೆವಿಕರು ಜನತೆಯನ್ನು ವಂಚಿಸಿದರೆಂದು ಕುದಿದನು. ಅವರ ಅವಿವೇಕಕ್ಕಾಗಿ ಹಲುಬಿದನು. ಚೆಲ್ಲಿ ಹೋದ ಹಾಲಿಗೆ ಮರುಗಿ ಫಲವುಂಟೇ? ಮುಂದಿನ ಕೆಲಸಕ್ಕಾಗಿ ಸಿದ್ಧರಾಗುವುದೇ ವೀರರ ಧರ್ಮ. ಕೆರೆನಸ್ಕಿಯ ಶಬ್ದಜಾಲಕ್ಕೆ ಮರುಳಾಗಬೇಡಿರೆಂದು ಸ್ಟಾಲಿನ್ ನುಡಿದು ಅದು ಒಡೆಯಲು ಸರಕಾರವೆಂದು ಹಳಿದನು. ಸಾಮ್ರಾಜ್ಯಶಾಹೀ ಯುದ್ಧ ಮತ್ತು ಆರ್ಥಿಕ ಬಿಕ್ಕಟ್ಟಿನಿಂದ ವಿಮೋಚನೆಹೊಂದಬೇಕಾದರೆ ಸಾಮ್ಯವಾದೀ ಬಂಡಾಯವು ಅವಶ್ಯವೆಂದು ಆತ 'ಪ್ರವಡಾ' ಪತ್ರಿಕೆಯಲ್ಲಿ ಬರೆದನು. ಕೆರೆನಸ್ಕಿ ಮಂಕುಬೂದಿಗೆ ಮರುಳಾಗಿದ್ದ ಮಂದಿಯೆಲ್ಲ ಇದರಿಂದ ಬೆಪ್ಪುಬೆರಗಾಗಿ ಹೋದರು.

ಎಪ್ರಿಲದಲ್ಲಿ ಲೆನಿನ್ ತಂದ ಸಂದೇಶವಾದರೂ ಅದೇ. ತಾತ್ಪೂರ್ತಿಕ ಸರಕಾರ ಒಡೆಯಲುವಾದಿಯಾಗಿದೆ. ಬಂಡವಲು ಪದ್ಧತಿಯೂ ಸಾಮ್ರಾಜ್ಯವಾದವೂ ಒಂದಕ್ಕೊಂದು ಹೆಣೆದುಕೊಂಡಿರುವುದು. ಅಂತಹ ಸರಕಾರ ಇರುವ ವರೆಗೆ ಶಾಶ್ವತ ಶಾಂತಿ ಲಭಿಸದು; ಪ್ರಜಾಹಿತವಾಗದು. ಆದುದರಿಂದ ತಾತ್ಕಾಲಿಕ ಸರಕಾರಕ್ಕೆ ಬೆಂಬಲ ಕೊಡದೆ ಅದನ್ನು ಮಗುಚಿಹಾಕ

ಲಿತ್ತಿಸಬೇಕು. ಜನಸಾಮಾನ್ಯರ ಸರ್ವಾಧಿಕಾರ ಸ್ಥಾಪಿಸಬೇಕು. ಹೀಗೆ ಲೆನಿನ್‌ನ ವಾದ. ಇದು ಲೆನಿನ್‌ನ ಎಪ್ರಿಲ್ ಮೀಮಾಂಸೆಯೆಂದು ಜಗದ್ವಿಖ್ಯಾತವಾಗಿದೆ. ಎಪ್ರಿಲದಲ್ಲಿ ಕೂಡಿದ ಅಖಿಲ ರಶಿಯಾ ಬಾಲ್ಶೆವಿಕ್ ಪರಿಷತ್ತಿನಲ್ಲಿ ಲೆನಿನ್‌ನ ಈ ನೀತಿಗೆ ಬಹುಮತ ದೊರೆಯಿತು. ಕಾಮೆನೊವ್, ಜಿನೊವಿವ್, ರಿಕೊವ್ ಮೊದಲಾದವರು ಲೆನಿನ್‌ನ ವಿಚಾರಗಳು ಗಾಳಿಗೋಪುರವೆಂದು ಅಭಿಪ್ರಾಯಪಟ್ಟರು. ಲೆನಿನ್‌ನ ಮೀಮಾಂಸೆಯನ್ನು ಸಮರ್ಥಿಸಿ, ಅವನ ಪಕ್ಷ ಹಿಡಿದು ಕೊನೆಯವರೆಗೆ ಕಾದಿದವನು ಸ್ಟಾಲಿನ್.

## ಬಾಲ್ಶೆವಿಕರ ವಿರೋಧ

ಬಾಲ್ಶೆವಿಕರ ವಿರೋಧ ಧೋರಣದಿಂದ ದೇಶದಲ್ಲಿ ಕ್ರಾಂತಿಯ ಕಾವು ಏರತೊಡಗಿತು. ಎಪ್ರಿಲ್, ಮೇ, ಮತ್ತು ಜೂನ ತಿಂಗಳಲ್ಲಿ ಸರಕಾರದ ವಿರುದ್ಧ ಸಭೆ, ಮೆರವಣಿಗೆ, ಭಾಷಣಗಳು ನಡೆದವು. ಸಾರ್ವತ್ರಿಕ ಸಂಪಿನಿಂದ ವಿದ್ರೋಹದ ಹಾದಿಗೆ ಜನರನ್ನು ಎಳೆಯಲು ಬಾಲ್ಶೆವಿಕ್ ಸಮಿತಿಯು ಶತಯತ್ನಗಳನ್ನು ಮಾಡುತ್ತಿದ್ದ ಕಾಲವದು. ಅದರ ನಿರೂಪಣೆಯಂತೆ ಪೆಟ್ರೊಗಡದ ಕೂಲಿಕಾರರು, 'ಡ್ಯೂಮಾ ಬಹಿಷ್ಕರಿಸಿರಿ! ಮಂತ್ರಿಗಳನ್ನು ತಿರಸ್ಕರಿಸಿರಿ! ಸೋವಿಯೆಟಿಗೆ ಎಲ್ಲ ಅಧಿಕಾರ' ಎಂದು ರಣಗೀತ ಹಾಡುತ್ತ ಬೀದಿಗಳಲ್ಲಿ ಅಲೆದರು. ದೇಶದಲ್ಲಿ ಸರಕಾರವೇ ಇಲ್ಲವೆಂಬ ಹಾಗೆ ವರ್ತಿಸುತಿತ್ತು ಪೆಟ್ರೊಗಡ ಸೋವಿಯೆಟ್. ಸೈನಿಕರನ್ನು ಒಲಿಸಿ ವಶಕ್ಕೆ ತಂದುಕೊಳ್ಳುವ ಅದರ ಯತ್ನವಂತೂ ಮಾಯಾಜಾಲವೇ ಸರಿ. ಸೈನಿಕರಿಗಾಗಿಯೇ ಪ್ರತ್ಯೇಕ ಪತ್ರಿಕೆಗಳು ಹುಟ್ಟಿದುವು. ಝಾರ್ ಪಕ್ಷಪಾತಿ ಅಧಿಕಾರಿಗಳನ್ನು ಒದ್ದು ಓಡಿಸಬೇಕು. ಅವರ ಬದಲು ಸೈನಿಕರೇ ಆರಿಸಿದ ಸೇನಾಧಿಕಾರಿಗಳನ್ನು ನೇಮಿಸುವುದು ಅವಶ್ಯವೆಂದು ಬಾಲ್ಶೆವಿಕ್ ಪತ್ರಿಕೆಗಳು ಬರೆಯುದು ಸೈನಿಕರ ಮನ ನಾಟಿತು. ಬಾಲ್ಶೆವಿಕರ ಗರಿ ಬಣ್ಣಗಳಿಗೆ ಅವರು ಮೆಚ್ಚಿಹೋದರು. ಆದರೆ ಕೆರೆನಸ್ಕಿಗೆ ಮಾತ್ರ ಸೋವಿಯೆಟ್ ಸಂಗ ಸಾಕುಸಾಕಾಯ್ತು. ಜುಲಾಯಿ ತಿಂಗಳ ೩-೫ರಲ್ಲಿ ಕೂಲಿಕಾರರ ಸಾರ್ವತ್ರಿಕ ಸಂಪುನಡೆದಾಗ ಸರಕಾರವು ಬಲಪ್ರಯೋಗಿಸಿತು. ಜರ್ಮನರ ಮುಚ್ಚಿದಬಂಡಿಯಲ್ಲಿ ಬಂದಿದ್ದ ಲೆನಿನ್ ಜರ್ಮನ್‌ಗೂಢಚಾರನೆಂದು ಅಪವಾದಹೊರಿಸಿ ಅವನನ್ನು ಬಾಧಿಸಬೇಕೆಂದು ಆಜ್ಞಾಪಿಸಲಾಯಿತು. ಬಾಲ್ಶೆವಿಕ್‌ಪಕ್ಷವೂ ಅಕ್ರ

ಮವೇ. ಲೆನಿನ್, ಜಿನೋವಿವ್ ಮೊದಲಾದವರು ಫಿನ್‌ಲಂಡಿಗೆ ಪಲಾಯನ ಬೆಳೆಸಿದರು. ಸ್ಟಾಲಿನ್ ಮಾತ್ರ ಪೊಡಲಿನಂತೆಯೇ ದೇಶದ ಯಾವುದೋ ಗುಹೆಯಲ್ಲಿ ಅಡಗಿ ಕಾರ್ಯಸಾಧನೆಗೆ ತೊಡಗಿದನು.

## ಬಂಡಾಯದ ನಿರ್ಧಾರ

ಜುಲಾಯಿ ತಿಂಗಳ ೨೬ರಲ್ಲಿ ಬಾಲ್ಶೆವಿಕ್ ಸಮಿತಿಯ ಸಭೆ ರಹಸ್ಯವಾಗಿ ಸೇರಿತು. ಲೆನಿನ್ ಬಂದಿರಲಿಲ್ಲ. ಅವನ ಸೂಚನೆಯಂತೆ ಸ್ಟಾಲಿನ್ ಮಾರ್ಗದರ್ಶಕನಾದ. ಈ ಆರನೇ ಪರಿಷತ್ತು ಐತಿಹಾಸಿಕಮಹತ್ವವುಳ್ಳದ್ದು. ಏಕೆಂದರೆ ಬಂಡಾಯದ ಸಿದ್ಧತೆಮಾಡಬೇಕೆಂದು ನಿರ್ಣಯವಾದುದು ಆಗಲೇ. ಈ ಅಧಿವೇಶನದಲ್ಲಿ ಸ್ಟಾಲಿನ್ ಬಾಲ್ಶೆವಿಕ್ ವರಿಷ್ಠ ಸಮಿತಿಯ ವರದಿಯನ್ನು ಒಪ್ಪಿಸಿ, 'ನಮ್ಮ ಕ್ರಾಂತಿಯು ಪ್ರಗತಿಪರವಾಗಿದೆ' ಯೆಂದನು. ಸ್ಟಾಲಿನ್ ರಾಜಕೀಯ ಪರಿಸ್ಥಿತಿಯ ಬಗ್ಗೆ ಇನ್ನೊಂದು ವರದಿಯನ್ನೊಪ್ಪಿಸಿದನು. ವರಿಷ್ಠ ಸಮಿತಿಯ ಧೋರಣದಲ್ಲಿ ಯಾವ ಬದಲಾವಣೆಯಾಗಿದೆಯೆಂಬುದನ್ನು ಅದರಲ್ಲಿ ವಿಶದಪಡಿಸಿದ. 'ಲೆನಿನ್‌ನ ಬಂಧನದ ಆಜ್ಞೆ ಹೊರಟನಂತರ ದೇಶದಲ್ಲಿ ದ್ವಿಮುಖ ಆಡಳಿತೆಯ ಗೆರೆ ದಾಟಿದೆ. ಜುಲಾಯಿ ೩ನೇ ತಾರೀಖಿನ ದುರಂತದ ವರೆಗೂ ಶಾಂತ ಉಪಾಯಗಳಿಂದ ಸೋವಿಯೆಟಿಗೆ ಅಧಿಕಾರ ದೊರೆಯಬಹುದೆಂಬ ಆಶೆಯಿತ್ತು. ಈಗ ಅಂತಹ ಪರಿಸ್ಥಿತಿಯಿಲ್ಲ. ಪ್ರತಿಕ್ರಾಂತಿಯ ಶಕ್ತಿ ಸಂಘಟಿತವಾಗಿದೆ. ಶಾಂತಿಕಾಲ ಕೊನೆಗಂಡಿತು. ತಿಕ್ಕಾಟ ಆರಂಭವಾಡುತೆಯೇ ಸರಿ' ಎಂದ.

ಪಶ್ಚಿಮ ಯುರೋಪಿನಲ್ಲಿ ಕ್ರಾಂತಿಯಾಗದೆ ರಶಿಯದಲ್ಲಿ ಸಾಮ್ಯವಾದಕ್ಕೆ ಜಯ ದೊರೆಯದೆಂದು ಟ್ರಾಟ್‌ಸ್ಕಿಯ ಮನೋಗತ. ಸ್ವಲ್ಪ ಸಮಯ ನಿರೀಕ್ಷಿಸಲು ಅವನ ಬೇಡಿಕೆ. ಈ ವಾದವನ್ನು ಪ್ರತಿಭಟಿಸಿ ಸ್ಟಾಲಿನ್ ನಿಷ್ಠುರ ಕಟ್ಟಿಕೊಂಡು 'ನಮ್ಮ ತಲೆಗೆ ನಮ್ಮದೇ ಕೈ. ಪಶ್ಚಿಮ ಯುರೋಪೇ ಜಗತ್ತಿಗೆ ಬೆಳಕು ತೋರಬೇಕೇನು? ಇದು ಎಂತಹ ಭ್ರಮೆ! ರಶಿಯವೇ ಸಾಮ್ಯವಾದದ ದಾರಿ ಹಿಡಿಯುವದೆಂದು ನಮ್ಮೆಲ್ಲರ ವಿಶ್ವಾಸ. ಪಶ್ಚಿಮ ಯುರೋಪಿಗಿಂತ ರಶಿಯದಲ್ಲಿ ಕ್ರಾಂತಿಶಕ್ತಿ ಬಲಿಷ್ಠವಿದೆ. ಅಲ್ಲಿ ಕೂಲಿಕಾರರಿಗೆ ರೈತ ಜನರ ಬೆಂಬಲವಿಲ್ಲ. ನಮ್ಮಲ್ಲಿ ಪರಸ್ಪರ ಬಾಂಧವ್ಯವಿದೆ' ಎಂದು ಸ್ಟಾಲಿನ್ ಬೆನ್ನೆಲುಬು ಇಲ್ಲದ ತರ್ಕಗಳನ್ನು ಬದಿಗೊತ್ತಿದನು.

ಬಂಡವಲು ಸರಕಾರವನ್ನು ಒದೆದು, ಒಡೆದು, ಕೂಲಿಕಾರ ಮತ್ತು ರೈತರ ಪ್ರಜಾಸ್ವಾಮ್ಯವನ್ನು ಸ್ಥಾಪಿಸುವ ಸ್ಟಾಲಿನ್ನನ ಠರಾವು ಸ್ವೀಕೃತವಾಯಿತು.

**ಕೆರೆನಸ್ಕಿ ಒಳಸಂಚು**

ಬಾಲ್ಶೆವಿಕರ ನೀತಿಯಿಂದ ಕೆರೆನಸ್ಕಿ ಬೆಚ್ಚಿಬಿದ್ದ. ಈ ಸಂಕಟದಿಂದ ಪಾರಾಗುವ ಬಗೆ ಹೇಗೆ? ಕೊನೆಗೆ ರಾಷ್ಟ್ರೀಯ ಸಮ್ಮೇಲನವೊಂದನ್ನು ಕರೆಯಲು ನಿಶ್ಚಯಿಸಿದನು. ಈ ಸಮ್ಮೇಲನಕ್ಕೆ ಆತ ಜನ್ಮಾಣದ ಹೆಸರನ್ನಿಟ್ಟುದುದು ನಿಜ. ಆದರೆ, ಅದರಲ್ಲಿ ಬಾಲ್ಶೆವಿಕರಿಗೆ ಸ್ಥಾನವಿದ್ದಿಲ್ಲ. ಜಮೀನ್ದಾರರು, ಬಂಡವಳಶಾಹಿಗಳು, ವಿವಾ ವಾಣಿಜ್ಯ ಒಡೆಯರು ಮೊದಲಾದ ಪಂಗಡ, ಸಂಘಸಂಸ್ಥೆಗಳ ಪ್ರತಿನಿಧಿಗಳು ಕೂಡಿದ್ದರು. ಪ್ರತಿಕ್ರಾಂತಿ ಶಕ್ತಿಯ ಏಕೀಕರಣ, ಸಂಘಟನೆ ಈ ಸಮ್ಮೇಲನದ ಧ್ಯೇಯ. ಅಥವಾ ಬಾಲ್ಶೆವಿಕರ ವಿರುದ್ಧವಿದ್ದವರನ್ನು ಎತ್ತಿ ಕಟ್ಟುವ ಹೊಂಚು ಎಂದರೂ ಸೊಗಸೇ. ಪ್ರಾಯಶಃ ಇದೇ ಸತ್ಯ. ಪೆಟ್ರೋಗ್ರಡ ಸುರಕ್ಷಿತವಲ್ಲವೆಂದು ಮಾಸ್ಕೋ ಆರಿಸಿಕೊಂಡರು. ಬಾಲ್ಶೆವಿಕರ ಮೇಲೂ ಪೆಟ್ರೋಗ್ರಡದ ಜನತೆಯ ಮೇಲೂ ಕೆರೆನಸ್ಕಿಗೆ ಅಷ್ಟು ಅವಿಶ್ವಾಸ. ಈ ಸಂದರ್ಭದಲ್ಲಿ ಸ್ಟಾಲಿನ್ ಬರೆದ ಒಂದು ಮಹತ್ವದ ಬರಹದಲ್ಲಿ, 'ಸಮ್ಮೇಲನವು ಪ್ರತಿಕ್ರಾಂತಿಶಕ್ತಿಯ ಒಳಸಂಚು. ಈ ಬಂಡವಳಶಾಹೀ ಸಮ್ಮೇಲನದ ವಿರುದ್ಧ ನಿಷೇಧ ವ್ಯಕ್ತಪಡಿಸಿ, 'ಕ್ರಾಂತಿಬಾವುಟ ಕೈಜಾರಲು ಬಿಡಬೇಡಿ' ಎಂದು ಉದ್ಗರಿಸಿದನು.

ಮಾಸ್ಕೋ ಕೂಲಿಕಾರರು ಪಕ್ಷದ ಕರೆಯನ್ನಾಲಿಸಿದರು. ಸಮ್ಮೇಲನದ ದಿನ ಆ ಕೂಲಿಕಾರರು ಸಂಪು ಹೂಡಿದರು. ಸಭೆಗೆ ತೆರಳಿದ್ದ ಬಡಪಾಯಿಗಳಿಗೆ ರೇಲ್ವೆ ಸೌಕರ್ಯವಿಲ್ಲ, ಅನ್ನ ಆಹಾರವಿಲ್ಲ; ಗೋಳೇ ಗೋಳು. 'ಮಾಸ್ಕೋ ಸಂಪು ಹೂಡಿದೆ. ಮಾಸ್ಕೋ ಚಿರಾಯುವಾಗಲಿ' ಎಂದು ಸ್ಟಾಲಿನ್ ಹರ್ಷ ವ್ಯಕ್ತಪಡಿಸಿದನು.

**ಕಾರ್ನಿಲೊವ್**

ಕೆರೆನಸ್ಕಿ ಮಂಗನ ಕೈಯಲ್ಲಿದ್ದ ಮಾಣಿಕ್ಯವನ್ನು ಕಿತ್ತುಕೊಳ್ಳಲು ಬಯಸಿದವರು ಬಾಲ್ಶೆವಿಕರು ಮಾತ್ರವಲ್ಲ; ಆತನ ಮಂತ್ರಿಮಂಡಲದಲ್ಲಿದ್ದ ಕೆಲವು ಪಂಗಡಗಳ ಆಶೆ. ಅವುಗಳಲ್ಲಿ ರಾಷ್ಟ್ರೀಯ ಪಕ್ಷವೊಂದು. ಸೇನಾಧಿಕಾರಿ ಕಾರ್ನಿಲೊವ್ ಅದರ ಆಧಾರ ಸ್ತಂಭ. ಈತ ಧೀರೋದಾತ್ತ ವ್ಯಕ್ತಿ

ರಣಶೂರ. ಯುದ್ಧವಿದ್ಯೆಯಲ್ಲಿ ನಿಪುಣ. ಮಹತ್ವಾಕಾಂಕ್ಷೆಯು ಸಾಹಸಕ್ಕಾಗಿ ಅವನನ್ನು ಮುಂದೆ ಮುಂದೆ ನೂಕುತಿತ್ತು. ತನ್ನ ಸೈನಿಕರ ಬೆಂಬಲದಿಂದ ಅಧಿಕಾರ ಅಪಹರಿಸುವ ಹಂಚಿಕೆ ಅವನದು. ಕೆರೆನಸ್ಕಿಯೊಡನೆ ಕಾಲು ಕೆದರಿ ಜಗಳ ತೆಗೆದು ತಾನೇ ಸರ್ವಾಧಿಕಾರಿಯೆಂದು ಘೋಷಿಸಿದ. ಜರ್ಮನರ ಸಹಾಯದಿಂದ ಕೆರೆನಸ್ಕಿ ಸರಕಾರವನ್ನು ಮುಗುಚಿಹಾಕಲು ಅವನ ಯತ್ನ. ಪೆಟ್ರೊಗ್ರಡಕ್ಕೆ ಅವನ ಸೇನೆಯು ಹೊರಟಿತು. ಜರ್ಮನ್ ಪಕ್ಷಪಾತಿ ಕಾರ್ನಿಲೊವ್‌ನನ್ನು ಅಡಗಿಸದೆ ಉಪಾಯವಿರಲಿಲ್ಲ. ಬಾಲ್ಶೆವಿಕರೂ ಅವನ ವಿರುದ್ಧ ಕೈಯೆತ್ತಿದರು. ಅವರು ಮುಂಜಾಗ್ರತೆ ವಹಿಸಿದುದರಿಂದ ಕಾರ್ನಿಲೊವ್‌ನ ಸೇನೆಯೂ ರೇಲ್ವೆ ಹಾದಿ ತಪ್ಪಿ ಅಡ್ಡದಾರಿ ಹಿಡಿಯಿತು. ರಾತ್ರಿಬೆಳಗಾಗುವುದರೊಳಗೆ ಕಾರ್ನಿಲೊವ್ ಬಂಡಾಯದ ಬುಗ್ಗೆ ಬಿರಿಯಿತು.

ಕಾರ್ನಿಲೊವ್ ದಂಗೆಯಿಂದ ಜನರ ಕಣ್ಣು ಮುಂದೆ ಕಟ್ಟಿದ್ದ ಪರದೆ ಕಳಚಿ ಬಿದ್ದಿತು. ಲೆನಿನ್ ಜರ್ಮನ ಗೂಢಚಾರ, ಬಾಲ್ಶೆವಿಕರು ವೈರಿಗಳ ಕೈಗೊಂಬೆಗಳೆಂಬ ತಪ್ಪು ಕಲ್ಪನೆ ಮಾಯವಾಯಿತು. ಅಲ್ಲದೆ ಬಂಡವಾಳಶಾಹೀ ಅಧಿಕಾರವನ್ನು ಕಿತ್ತೊಗೆಯದಿದ್ದರೆ ಕಾರ್ನಿಲೊವ್‌ನಂತೆ ಇನ್ನಿತರ ಪ್ರತಿ ಕ್ರಾಂತಿಯ ಶಕ್ತಿಗಳು ಪುನಃ ಪುನಃ ತಲೆಯೆತ್ತಬಹುದೆಂದು ಜನ ಗಾಬರಿಗೊಂಡರು. ಬಾಲ್ಶೆವಿಕರಿಂದಲೆ ದೇಶಕ್ಕೆ ಮಂಗಳವೆಂದು ಹೊಳೆದುದು ಆಗ. ಜನತೆಗೆ ಮತ್ತೆ ಸಾಮ್ಯವಾದದ ಉನ್ಮಾದ ಹಿಡಿಯಿತು. ಬಾಲ್ಶೆವಿಕರನ್ನು ಎಲ್ಲೆಲ್ಲೂ ಹಾಡಿ ಹರಸಿದರು. ಪೆಟ್ರೊಗ್ರಡ, ಮಾಸ್ಕೋ ಮೊದಲಾದ ಸೋವಿಯೆಟ್‌ಗಳಲ್ಲಿ ಬಾಲ್ಶೆವಿಕ್ ಪ್ರತಿನಿಧಿಗಳೇ ಬಹುಸಂಖ್ಯಾಕರಾದರು.

## ಅಕ್ಟೋಬರ ಕ್ರಾಂತಿ

ಪೆಟ್ರೊಗ್ರಡ ಸೋವಿಯೆಟ್‌ದಲ್ಲಿ ಬಾಲ್ಶೆವಿಕರಿಗೆ ಬಹುಮತ ದೊರೆತುದೇ ತಡ, ವಿಪ್ಲವದ ಮುಹೂರ್ತ ಇದೇ ಎಂಬದು ಲೆನಿನ್‌ನ ಚಿಕಿತ್ಸಕ ಬುದ್ಧಿಗೆ ಹೊಳೆಯಿತು. ಹಲ್ಲಿದ್ದಾಗಲೆ ಹುರಿಗಡಲೆ ಎಂಬಂತೆ ಲೆನಿನ್ ಬಂಡಾಯದ ಭೇರಿ ಬಡಿದ ಭೈರವನಾದ. ಇಂದೇ 'ಇಂದೇ ಬಾಲ್ಶೆವಿಕರು ಅಧಿಕಾರ ಅಪಹರಿಸತಕ್ಕದ್ದು. ಕಾಲವಿಳಂಬ ಮಾಡಿದರೆ ಕೇಡುಂಟು ' ಎಂದಾತನ

## ಬಂಡವಲುಗಾರರ ಪುಂಡಾಟ

ಅಕ್ಟೋಬರ ಕ್ರಾಂತಿಯು ರಶಿಯದಲ್ಲಿ ನಡೆದ ಒಂದು ಪವಾಡ. ಇತಿಹಾಸದಲ್ಲಿ ನೂತನವಾದುದೊಂದು ಅಧ್ಯಾಯ ಆರಂಭವಾದುದು ಅಂದಿನಿಂದಲೇ. ಬಂಡವಲುವಾದಕ್ಕೊಂದು ಗತಿಕಾಣಿಸಲೆತ್ನಿಸಿ, ಸಾಮ್ಯವಾದೀ ಸಮಾಜರಚನೆಗೆ ಬಾಲ್ಶೆವಿಕರು ಕೈಹಾಕಿದರು. ಈ ಪ್ರಯೋಗವನ್ನು ಕಂಡು ಬಂಡವಲು ಜಗತ್ತು ಕೆಂಡಕಾರಿತು. ಜರ್ಮನರು, ಫ್ರೆಂಚರು, ಬ್ರಿಟಿಶರು, ಇಟಾಲಿಯನರು, ಅಮೇರಿಕನರು, ತುರುಕರು, ರುಮೇನಿಯನರು, ಪೋಲರು ಮೊದಲಾದ ಹದಿನಾಲ್ಕು ದೇಶಗಳ ಜನರು ರಶಿಯದ್ಮೇಲೆ ದಂಡೆತ್ತಿ ಬಂದರು. ಹೊರಗಿನ ಈ ಹಗೆಗಳು ದೇಶದೊಳಗಿನ ಪ್ರತಿ ಕ್ರಾಂತಿಯ ಶಕ್ತಿಗಳಿಗೂ ಪ್ರಚೋದನೆಯನ್ನಿತ್ತರು. ರಶಿಯದ ಬಂಡವಲುಗಾರರು, ಜಮೀನುದಾರರು, ಬಾಲ್ಶೆವಿಕರ ಮೇಲೆ ಮುಯ್ಯಿ ತೀರಿಸಿಕೊಳ್ಳಲು ಇದೇ ಸುಸಮಯವೆಂದು ಬಗೆದರು. ಹೀಗಾಗಿ ದಂಡಯಾತ್ರೆಯೊಡನೆ ಅಂತಃಕಲಹ ಮೇಳಗೂಡಿತು; ಬಾಲ್ಟಿಕ್ ಕರಾವಳಿಯಿಂದ ಹಿಡಿದು ಪ್ಯಾಸಿಫಿಕ್ ಕರಾವಳಿಯ ವರೆಗೆ ಬಡಿದಾಟವೇ ಬಡಿದಾಟ ! ಇಡೀ ರಶಿಯವೇ ರಣಕಣ. ಕುರುಕ್ಷೇತ್ರ. ದೇಶದ ಸ್ವಾತಂತ್ರ್ಯಕ್ಕೆ ಹಿಂದೆಂದೂ ಇಂತಹ ಗಂಡಾಂತರ ಬಂದಿರಲಿಲ್ಲ.

### ಜರ್ಮನರ ದಂಡಯಾತ್ರೆ

ಲೆನಿನ್ನನನ್ನು ಮುಚ್ಚಿದ ಬಂಡಿಯಲ್ಲಿ ರಶಿಯಕ್ಕೆ ಕಳಿಸಿದವರು ಜರ್ಮನರೇ. ಅವನ ಮೇಲಿನ ಪ್ರೀತ್ಯಾದರದಿಂದಾಗಲೀ, ಬಾಲ್ಶೆವಿಸಂ ಮೇಲಿನ ಸಹಾನುಭೂತಿಯಿಂದಾಗಲೀ ಅವರು ಆ ರೀತಿ ಮಾಡಿರಲಿಲ್ಲ. ಹಾವು ಮುಂಗುಸಿಗಳು ಹುಟ್ಟುಹಗೆಗಳೇ. ಬಾಲ್ಶೆವಿಕರ ಚಳವಳಿಯಿಂದ ಝಾರ್ ರಶಿಯ ದುರ್ಬಲವಾಗುವುದು ನಿಸ್ಸಂಶಯ; ಹಾಗಾದರೆ ಝಾರನನ್ನು ಸೋಲಿಸಲು ಸುಲಭವೆಂದವರು ತರ್ಕಿಸಿ ಲೆನಿನ್ನನನ್ನು ಕಳಿಸುವ ಸ್ವಾರ್ಥಮಯ ಔದಾರ್ಯ ತೋರಿಸಿದ್ದರು. ಅವರು ನೆನೆದುದು ಒಂದು. ರಶಿಯದಲ್ಲಿ ಆದುದು ಬೇರೊಂದು. ಬಾಲ್ಶೆವಿಕರು ಅಧಿಕಾರ ಪ್ರಭಾವಕ್ಕೆ ಬಂದರು. ಇದನ್ನು ಜರ್ಮನಿ ಸಹಿಸಲಿಲ್ಲ. ಪಶ್ಚಿಮ 'ಪ್ರಜಾಸತ್ತಾ' ರಾಷ್ಟ್ರ-

ಗಳೊಡನೆ ಜೀವನ್ಮೃತ ಹೋರಾಟದಲ್ಲಿ ಸಿಲುಕಿ ಹಲ್ಲು ಮುರಿಸಿಕೊಂಡಿದ್ದರೂ ಕೈಸರ್ ಜರ್ಮನಿಯು ಬಾಲ್ಶೆವಿಸಂ ಶಿಶುವಿನ ಗೋಣು ಹಿಚುಕಲೆರಗಿತು. ಜರ್ಮನ ಸೇನೆಯ ಬೆಂಬಲ ಪಡೆದ ಮನ್ನರ್‌ಹ್ಯಾಂ, ಫಿನ್‌ಲಂಡಿನಲ್ಲಿ ಕ್ರಾಂತಿಕಾರರನ್ನು ಅಡಗಿಸಿ, ಒಂಡವಲು ಸರಕಾರವನ್ನು ರಚಿಸಲು ಸಮರ್ಥನಾದ. ಎಸ್ಟೋನಿಯಾ, ಲಾಟಿವಿಯಾ ಮತ್ತು ಲಿಥುವೇನಿಯಾ ಬಾಲ್ಟಿಕ್ ತ್ರೈರಾಷ್ಟ್ರಗಳಲ್ಲೂ ಜರ್ಮನ ಕೈಗೊಂಬೆ ಸರಕಾರಗಳು ಸ್ಥಾಪಿಸಲ್ಪಟ್ಟವು. ಬಾಲ್ಟಿಕ್ ಸಮುದ್ರದಲ್ಲಿ ಒಡೆತನವಿರಬೇಕೆಂಬ ಕೈಸರನ ಆಶೆ ಕೈಗೂಡಿತು. ಇಷ್ಟರಿಂದಲೂ ಜರ್ಮನಿಯು ಸಂತುಷ್ಟಿ ಹೊಂದದೆ ರಶಿಯಾದ ಫಲವತ್ತಾದ ಉಕ್ರೇನಿಯಾ ಪ್ರಾಂತವನ್ನು ಬಗಲೊಳಗೆ ತುರುಕಿಸಿಕೊಂಡಿತು. ಈ ಪ್ರದೇಶದಲ್ಲಿ ದೊರೆಯುವ ಆಹಾರವನ್ನು ಹಾಗೂ ಇನ್ನಿತರ ಸಹಾಯ ಸಲಕರಣೆಗಳ ಸದುಪಯೋಗ ಮಾಡಿಕೊಂಡು ಪಶ್ಚಿಮದ ಶತ್ರುಗಳನ್ನು ಹಣ್ಣು ಮಾಡಬೇಕೆಂದು ಅದರ ದುರಾಶೆ.

### ಬಿಳಿ ರಶಿಯನರು

ಈ ಮೊದಲೊಮ್ಮೆ ಸರ್ವಾಧಿಕಾರಿಯಾಗಲು ಬಯಸಿ ಭಗ್ನಮನೋರಥನಾಗಿದ್ದ ಕಾರ್ನಿಲೊವ್‌ನ ಬಾಯಲ್ಲಿ ಪುನಃ ನೀರೂರಿತು. ಬಾಲ್ಶೆವಿಕರ ಮೇಲಿನ ಸೇಡು ತೀರಿಸಿಕೊಳ್ಳಲೂ ಅವನಿಗಿದು ಸಂದರ್ಭ. ಜರ್ಮನರೂ ಅವನಿಗೆ ಸೇನೆ ಮತ್ತು ಶಸ್ತ್ರಾಸ್ತ್ರಗಳ ಸಹಾಯ ನೀಡಿದರು. ಕಾರ್ನಿಲೊವ್ ಬಿಳಿ ರಶಿಯನರನ್ನು ಎತ್ತಿ ಕಟ್ಟಿದ. ಆದರೆ ಆತ ದುರದೃಷ್ಟಶಾಲಿ. ಕೆಂಪು ಸೇನೆಯ ಒದೆತಕ್ಕೆ ಕಾಕೇಶಿಯಾದ ತಪ್ಪಲು ಪ್ರದೇಶದಲ್ಲಿ ಬಿದ್ದ. ಕೊನೆಗೆ ಅಲ್ಲಿ ನಡೆದ ಕಾಳಗವೊಂದರಲ್ಲಿ ಹತನಾದ. ಅವನು ಮಡಿದ ಮಾತ್ರದಿಂದ ಬಿಳಿ ರಶಿಯನರ ಪೀಡೆಯೇನೂ ತಪ್ಪಲಿಲ್ಲ. ಝಾರ್ ಸೇನಾಧಿಕಾರಿಗಳಲ್ಲೊಬ್ಬನಾಗಿದ್ದ ಕ್ರಸನೋವ್ ನಾಯಕತ್ವ ವಹಿಸಿದನು. ಈತ ಪ್ರಭಾವಶಾಲಿ. ಅನೇಕ ಸೈನಿಕರು ಅವನ ಮಾತಿಗೆ ಮರುಳಾದರು. ದಕ್ಷಿಣ ರಶಿಯಾದ ಡಾನ್ ಭೂಭಾಗವು ಇವನ ವಶಕ್ಕೆ ಬಂದಿತು. ಕ್ರಸನೊವ್‌ನ ಸೇನೆ ಝಾರಿಸ್ತಾನ (ಇಂದಿನ ಸ್ಟಾಲಿನ್‌ಗ್ರಾಡ)ದ ಬಾಗಿಲು ತಟ್ಟಿತು. ಬಾಲ್ಶೆವಿಕರು ದಿಗಿಲಾದರು. ಝಾರಿಸ್ತಾನ ಮಾಸ್ಕೋದ ಜೀವನಾಡಿ. ದಕ್ಷಿಣ ರಶಿಯದಿಂದ ಎಣ್ಣೆ ಬೆಣ್ಣೆ ಕಾಳು-ಕಡಿ ಮಾಸ್ಕೋ ನಗರಕ್ಕೆ ಹಾದು ಬರು

ತ್ತಿದ್ದುದು ಈ ನಗರದಿಂದಲೇ. ಈ ಗಂಡಾಂತರದಿಂದ ದೇಶದಲ್ಲಿ ಹಾಹಾಕಾರ ವೆದ್ದಿತು. ಹಗೆಗಳನ್ನು ಹೊಗೆಗೂಡಿಸಲು ಸ್ಟಾಲಿನ್ನನನ್ನು ಕಳಿಸಿಕೊಡಲು ಲೆನಿನ್ ನಿರ್ಧರಿಸಿದನು.

ಝಾರಿಸ್ತಾನದ ರಕ್ಷಣೆಗಾಗಿ ಸ್ಟಾಲಿನ್ ಸಿದ್ಧತೆ ನಡೆಸಿದ. ತನ್ನ ಸಹಾಯಕ್ಕಾಗಿ ವೊರೊಶಿಲೊವ್‌ನನ್ನು ಆರಿಸಿಕೊಂಡ. ೧೫ ಸಾವಿರ ಸೈನಿಕರೊಂದಿಗೆ ವೊರೊಶಿಲೊವ್ ಝಾರಿಸ್ತಾನಕ್ಕೆ ತೆರಳಬೇಕೆಂದು ಗೊತ್ತು ಮಾಡಲ್ಪಟ್ಟಿತು. ಸ್ಟಾಲಿನ್ ಅವನಿಗಿಂತ ಎರಡು ದಿವಸಗಳ ಮೊದಲೇ ಎರಡು ಸಶಸ್ತ್ರ ಮೋಟರ್ ಹಾಗೂ ನೂರು ಕೆಂಪು ಸೈನಿಕರೊಂದಿಗೆ ಆ ನಗರಕ್ಕೆ ಹೊರಟನು. ಸ್ಟಾಲಿನ್ ಪ್ರವೇಶಿಸಿದಾಗ ನಗರವು ಝಾರ್‌ಕಾಲದ ಸುಖವಿಲಾಸದಲ್ಲಿ ಮುಳುಗೇಳುತಿತ್ತು. ಹಾಟೇಲುಗಳು ತೆರೆದಿದ್ದವು. ಪಾರ್ಕ್‌ಗಳಲ್ಲಿ ಸಂಗೀತ ಕೇಳಿಬರುತಿತ್ತು. ನರ್ತನ ಮದ್ಯಪಾನ, ಒಯ್ಯಾರ ಇವುಗಳಿಗೂ ಕೊರತೆಯಿರಲಿಲ್ಲ; ದುರ್ಗದ ಸೈನಿಕರ ಬಲವೂ ಅಶಿಕ್ಷಿತ. ಸೇನೆಯ ಅಧಿಕಾರಿಗಳು ಹೆಚ್ಚಾಗಿ ಝಾರ್‌ಪಕ್ಷಪಾತಿಗಳು. ಬಿಳಿ ರಶಿಯನರು ನಗರದೊಳಗೆ ನುಗ್ಗಿದರೆ ಇವರು ಪ್ರತಿಭಟಿಸುವುದು ಸಂಶಯಾಸ್ಪದ. ತದ್ವಿರುದ್ಧವಾಗಿ ಅವರೊಡನೆ ಕೂಡಿಕೊಳ್ಳುವ ಸಂಭವವೇ ಹೆಚ್ಚು. ಸ್ಟಾಲಿನ್ ಈ ಪರಿಸ್ಥಿತಿ ಕಂಡು ದುಃಖಿತನಾದ. 'ಚೆಕಾ' ಗೂಢಚಾರರನ್ನು ಕರೆಸಿಕೊಳ್ಳದೆ ಉಪಾಯವಿರಲಿಲ್ಲ. ಅವರು ಬಂದ ಮೇಲೆ ನಗರದ 'ಹವೆ'ಬದಲಾಯಿತು. ಹಾಟೇಲುಗಳು ಮುಚ್ಚಲ್ಪಟ್ಟುವು. ನರ್ತನದ ಬೆಡಗು-ಬಿನ್ನಾಣವೂ ನಿಂತಿತು. ಸೈನಿಕರು ಬೀದಿಯಲ್ಲಿ ಕಾವಲು ನಿಂತರು. ವಿಶ್ವಾಸವಿಲ್ಲದ ಕೆಲವು ಸೇನಾಧಿಕಾರಿಗಳನ್ನು ಕಿತ್ತೊಗೆದನು. ಸಹಾಯಕ್ಕೆಂದು ಟ್ರಾಟ್‌ಸ್ಕಿ ಕಳಿಸಿದ ಝಾರನ ಅಧಿಕಾರಿಗಳನ್ನು ಸ್ಟಾಲಿನ್ ಬಂಧಿಸಿಟ್ಟು ವೊರೊಶಿಲೊವ್‌ನನ್ನು ಮುಖ್ಯ ಸೇನಾಪತಿಯಾಗಿ ನೇಮಿಸಿದ. 'ಅವರನ್ನು ಬಂಧಮುಕ್ತಗೊಳಿಸು' ಎಂದು ಯುದ್ಧ ಮಂತ್ರಿ ಟ್ರಾಟಸ್ಕಿಯು ಆಜ್ಞಾಪಿಸಿದ. 'ಇದರ ಕಡೆ ಲಕ್ಷ್ಯ ಕೊಡುವದು ಬೇಡ' ವೆಂದು ಸ್ಟಾಲಿನ್ ಬರೆದನು.

### ಐತಿಹಾಸಿಕ ಝಾರಿಸ್ತಾನ್

ಕ್ರಸನೋವ್‌ನ ಸೇನೆ ನಗರಕ್ಕೆ ಸಮೀಪಿಸಿತು. ಅವನ ದಳಗಳ ಕಾಲ

ಸಪ್ಪಳವು ಕೇಳಿಸಿತು. ತೋಫಿನಿಂದೆಸೆದ ಗುಂಡುಗಳು ನಗರದೊಳಗೆ ಬಿದ್ದವು. ಈಗಲೋ ಇನ್ನೊಂದು ಗಳಿಗೆಯಲ್ಲೋ ಕ್ರಸನೊವ್ ಝೂರಿಸ್ತಾನದೊಳಗೆ ನುಗ್ಗುವುದು ನಿಜವೆಂದೆಲ್ಲ ಅರಿತಿದ್ದರು. ಏಕಂದರೆ ಆತನದು ತರಬೇತಿ ಹೊಂದಿದ ಸೇನೆ. ಧೀರೋದಾತ್ತ ಕಾಸಕ್ ಸವಾರರೂ ಇದ್ದಾರೆ. ಅನುಭವಿಕ ಅಧಿಕಾರಿಗಳು ಬೇರೆ. ಸ್ಟಾಲಿನ್‌ನದು ಕಚ್ಚಾ ಮಾಲು. ಅವನ ಸೇನೆಯ ಬಗ್ಗೆ ವೊರೊಶಿಲೊವ್ ತನ್ನ ಜೀವನ ಸ್ಮೃತಿಯಲ್ಲಿ ಬರೆಯುತ್ತಾನೆ—ಮೊನ್ನೆ ಮೊನ್ನೆಯ ವರೆಗೆ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದವರು ಅವನ ಸೈನಿಕರು. ಯುದ್ಧದ ಅನುಭವವಿಲ್ಲ. ಆದರೆ ಸ್ಟಾಲಿನ್ ಅಧೀರನಾಗಿದ್ದಿಲ್ಲ. ಮೊದಲಿನಂತೆಯೇ ಶಾಂತ ಚಿತ್ತ. ಅಹೋರಾತ್ರಿ ವಿಚಾರಮಗ್ನ. ಪಿಶಾಚಿಯಂತೆ ರಾತ್ರಿ ಇಡೀ ಕೋಟೆ ಕೊತ್ತಲಗಳಿಗೆ ತೆರಳಿ, ಸೈನಿಕರನ್ನು ಹುರಿದುಂಬಿಸುತ್ತಿದ್ದ. ದಿನದಿಂದ ದಿನಕ್ಕೆ ಪರಿಸ್ಥಿತಿ ಕೆಡುತ್ತ ಬಂದಿತು. ಶತ್ರುಗಳು ಮೂರು ಕಡೆಗಳಿಂದ ಮುತ್ತಿದರು. ಕುದುರೆಯ ಲಾಳದಾಕೃತಿ ಅವರದು ವ್ಯೂಹ. ' ಇನ್ನಾವ ಸೇನಾಧಿಕಾರಿಯಾದರೂ ಈ ಮೃತ್ಯು ಪಂಜರದಿಂದ ಪಾರಾಗಲೆತ್ನಿಸಿ ತನ್ನ ಸೈನಿಕರನ್ನು ಹಿಂದಕ್ಕೆ ಕರೆಸಿಕೊಳ್ಳುತ್ತಿದ್ದ. ಆದರೆ ಸ್ಟಾಲಿನ್ ಅಚಲ ಮೂರ್ತಿ. ಸೋಲು ಇಲ್ಲವೆ ಗೆಲವು ಅವನ ಗುರಿ. ಹಿಂದೆ ಸರಿಯುವ ವಿಚಾರವಿಲ್ಲ. ಆದರೆ ಈ ನಿರ್ಧಾರಕ್ಕಾಗಿ ಅವನು ದೊಡ್ಡ ಬೆಲೆ ತೆತ್ತಬೇಕಾಯಿತು. ಅವನ ಸೇನೆಗಾದ ನಷ್ಟ ಅಪಾರ. ಸ್ಟಾಲಿನ್ ಗಾಯ, ನೋವು ಸಹಿಸಿಕೊಂಡ. ಕೊನೆ ಕೊನೆಗೆ ಬಿಳಿ ರಶಿಯನ್ನರು ಸರಗುಂದಿದರು. ತೋಪುಗಳ ಸದ್ದು ಅಡಗಿತು. ಗುಂಡುಗಳು ತೀರಿದುವೋ ಏನೋ! ಸ್ಟಾಲಿನ್ನನ ಪ್ರತಿಭಟನೆ ಅವರಿಗೆ ಬಡಿದ ಸಿಡಿಲು. ಬಿಳಿರಶಿಯನ್ನರ ಶಕ್ತಿ ವ್ಯಯವಾದುದನ್ನು ನೋಡಿ ಸ್ಟಾಲಿನ್ ಉಲ್ಲಾಸ ಹೊಂದಿದ. ಪ್ರತಿದಾಳಿಗೆ ಆಜ್ಞಾಪಿಸಿದನು. ಅಣೆಕಟ್ಟು ಒಡೆದಾಗ ಧುಮುಕುವ ನದಿ ನೀರಿನಂತೆ ವೊರೊಶಿಲೊವ್‌ನ ಸೇನೆ ಝೂರಿಸ್ತಾನ್ ಕೋಟೆಯಿಂದ ಹೊರಗೆ ನೆಗೆದು ಬಿಳಿರಶಿಯನ್ನರ ಮೇಲೆ ಬಿದ್ದಿತು. ಕೈಸೋತ ಕ್ರಸನೊವನ್ ಸೈನಿಕರು ದಿಕ್ಕಾಪಾಲಾಗಿ ಓಡಿಹೋದರು.

ಸ್ಟಾಲಿನ್ನನ ಈ ವಿಜಯ ನೋಡಿ ಟ್ರಾಟ್‌ಸ್ಕಿಗೆ ಅಸೂಯೆಯಾಯಿತು. ಅದರೊಂದಿಗೆ ಸಿಟ್ಟು. ತಾನು ನೇಮಿಸಿಕಳಿಸಿದ ಅಧಿಕಾರಿಗಳನ್ನು ಬಂಧಿಸುವು

ದೆಂದರೇನು? ಎಂತಹ ಉದ್ಧಟತನ! ಸ್ಟಾಲಿನನ್ನು ದಕ್ಷಿಣದ ರಣರಂಗದಿಂದ ಹಿಂದಕ್ಕೆ ಕರೆಸಬೇಕೆಂದು ಟ್ರಾಟ್‌ಸ್ಕಿ ಲೆನಿನ್ನನಿಗೆ ಆಗ್ರಹ ಮಾಡಿದನು. ತಾನು ಹೇಳಿದುದೇ ಆಗಬೇಕು ಆತನಿಗೆ. ಇದರಿಂದ ಪಕ್ಷದಲ್ಲಿ ಕಲಹ ವಾದೀತೆಂದು ಲೆನಿನ್ ಹೇಳಿದರೆ ಆತ ಕಿವಿಗೊಡಲಾರ. ಕೊನೆಗೆ ಲೆನಿನ್ನನೇ ಬಗ್ಗಿ ಸ್ಟಾಲಿನ್ನನನ್ನು ಹಿಂದಕ್ಕೆ ಕರೆಸಿಕೊಂಡ. ಝಾರಿಸ್ತಾನ ಉಳಿಸಿದು ದಕ್ಕೆ ಸ್ಟಾಲಿನ್ನನಿಗೆ ದೊರೆತ ಉಡುಗೊರೆಯಿದು. ಲೆನಿನ್ನನ ಆಜ್ಞೆಯೆಂದ ಮೇಲೆ ಸ್ಟಾಲಿನ್ ಮರುಮಾತಾಡಲಾರ. ಗಂಟು ಮೂಟೆ ಕಟ್ಟಿಕೊಂಡು ಮಾಸ್ಕೋಗೆ ಪ್ರಯಾಣ ಬೆಳೆಸಿದನು. ದಾರಿಯಲ್ಲಿ ಟ್ರಾಟ್ಸ್ಕಿಯ ಭೆಟ್ಟಿ ಯಾಯಿತು. ಝಾರಿಸ್ತಾನವನ್ನು ಸಂದರ್ಶಿಸಲು ಟ್ರಾಟ್ಸ್ಕಿ ಹೊರಟಿದ್ದನು. ಆತನಿಗಾಗಿ ಝಾರನ ವಿಲಾಸಿ ರೇಲ್ವೆ. ಸ್ಟಾಲಿನ್ನನನ್ನು ಓರೆ ನೋಟದಿಂದ ನೋಡಿ 'ಓಹೋ ಕಾಕೇಶಿಯದ ಮಂಗ ಇಲ್ಲಿದೆಯೇ? ಈ ಚಿಕ್ಕ ಮನು ಷ್ಯನನ್ನು ನೋಡುತ್ತೇನೆ– ಎಲ್ಲಿ ಒಂದು ಉನ್ನತ ಸ್ಥಳ ತೋರಿಸಿ' ಎಂದು ಬಿಂಕದ ಕೋಳಿಯಂತೆ ಕೆಲೆದನು. ಸ್ಟಾಲಿನ್ ಈ ನಂಜಿನ ಮಾತುಗಳನ್ನು ನುಂಗಿಕೊಂಡ.

ಝಾರಿಸ್ತಾನಕ್ಕೆ ತೆರಳುವಿಯಲ್ಲ! ಸಂತೋಷ! ಆದರೆ ನನ್ನ ಹುಡು ಗರನ್ನು ಹೊಣಗಟ್ಟಬೇಡ! ಅವರಲ್ಲಿ ಒಳ್ಳೆ ಸ್ಫೂರ್ತಿಯಿದೆ 'ಎಂದ ಸ್ಟಾಲಿನ್'.

ಓಹೋ ನನ್ನ ಆ ಒಳ್ಳೆಯ ಹುಡುಗರು! ಒಳ್ಳೆ. ಒಳ್ಳೆ. ಅವರು ಕ್ರಾಂತಿ ವಿನಾಶಕರು '

ಇನ್ನಾರಾದರೂ ಆಗುತ್ತಿದ್ದರೆ ಪ್ರತ್ಯುತ್ತರವನ್ನೀಯುತ್ತಿದ್ದರು. ಸ್ಟಾಲಿನ್ ನಾಲಿಗೆ ಬಿಗಿ ಹಿಡಿದ. ಇತ್ತ ಟ್ರಾಟಸ್ಕಿ ಝಾರಿಸ್ತಾನಕ್ಕೆ ತೆರಳಿ, ಸ್ಟಾಲಿನ್ ನೇಮಿಸಿದ ತರುಣ ಅಧಿಕಾರಿಗಳನ್ನೆಲ್ಲ ತಳ್ಳಿಹಾಕಿದನು. ತನ್ನ ತಾಳಕ್ಕೆ ತಕ್ಕ ಮೇಳ ಕಟ್ಟುವವರನ್ನು ನೇಮಿಸಿದ. ಇವರಲ್ಲಿ ಹೆಚ್ಚಿನವರು ಝಾರ್ ಸೇನೆಯ ಅಧಿಕಾರಿಗಳು. ಸ್ಟಾಲಿನನಿಗೆ ಎಳ್ಳಷ್ಟು ವಿಶ್ವಾಸವಿಲ್ಲ ಅವರ ಮೇಲೆ. ಆತನ ಮನಸ್ಸು ನೊಂದುಕೊಂಡಿತು. ಅಸಂಖ್ಯ ಸೈನಿಕರ ರಕುತ ಸುರಿಸಿ ಝಾರಿಸ್ತಾನದ ಕೋಟೆ ಕಟ್ಟಿದ್ದ. ಈಗ ಟ್ರಾಟಸ್ಕಿ ಆ ಕೋಟೆಯ ಒಂದೊಂದೇ ಕಲ್ಲುಗಳನ್ನು ಕಿತ್ತೆಸೆದುದು ಅವನ ರೋಷಕ್ಕೂ ದ್ವೇಷಕ್ಕೂ ಪಾತ್ರವಾಯಿತು.

## ಸೈಬೇರಿಯದಲ್ಲಿ

ದಕ್ಷಿಣ ರಶಿಯಾ ರಣರಂಗವು ಒಂದು ಸ್ಥಿಮಿತಕ್ಕೆ ಬರುವ ಮೊದಲೇ ಸೈಬೇರಿಯದಲ್ಲಿ ಕೋಲಾಹಲವೆದ್ದಿತು. ಮಹಾಯುದ್ಧ ಕಾಲದಲ್ಲಿ ಜರ್ಮನ ಸೈನಿಕರೊಂದಿಗೆ ಅನೇಕ ಝೆಕ್ಕರು ಸೆರೆಸಿಕ್ಕಿದ್ದರು. ಅವರನ್ನು ಸೈಬೀರಿಯದ ಯುದ್ಧಕೈದಿಗಳ ಶಿಬಿರದಲ್ಲಿಡಲಾಗಿತ್ತು. ಈ ಝೆಕ್ಕರು ಸ್ವಾಭಿಮಾನಿಗಳು. ಸ್ವಾತಂತ್ರ್ಯ ಪ್ರಿಯರು. ಜರ್ಮನಿಯ ನೊಗವನ್ನು ಕಳಚಿಹಾಕಲು ಬಯಸುತ್ತಿದ್ದರು. ಅವರ ನಾಯಕ ಮಸಾರಿಕನ ಪ್ರಭಾವಕ್ಕೆ ಒಳಗಾದ ಕೆರೆನಸ್ಕಿ ಸರಕಾರ, ಝೆಕ್ಕರನ್ನು ವಿಶ್ವಾಸದಲ್ಲಿ ತಂದುಕೊಂಡು ಅವರಿಗೆ ಶಸ್ತ್ರಾಸ್ತ್ರಗಳನ್ನು ಒದಗಿಸಿ ಜರ್ಮನಿಯ ವಿರುದ್ಧ ಎತ್ತಿಕಟ್ಟಿತು. ಅಕ್ಟೋಬರ ಕ್ರಾಂತಿಯಾದ ಮೇಲೆ ಇವರು ಜರ್ಮನಿಗೆ ತೆರಳಲೊಪ್ಪದೆ ವ್ಲಾಡಿವೋಸ್ಟಾಕದ ಹಾದಿ ಹಿಡಿದರು. ಅವರನ್ನು ನಿಶ್ಶಸ್ತ್ರಗೊಳಿಸಲು ಬಾಲ್ಶೆವಿಕರು ಯತ್ನಿಸಿದೊಡನೆಯೇ ಝೆಕ್ಕರು ವಿರೋಧಿಸಿದರು. ಝಾರ್ ಸೇನಾಧಿಕಾರಿಗಳು ಅವರೊಳಗೆ ಸೇರಿಕೊಂಡು ಬಾಲ್ಶೆವಿಕರನ್ನು ಇದಿರಿಸಿದರು. ಸೈಬೀರಿಯವು ಹಗೆಗಳ ರಾಜ್ಯವೇ ಆಯಿತು ಬಾಲ್ಶೆವಿಕರಿಗೆ. ಕೊನೆಗೆ ಕೊಲ್ಚಾಕ್ ಅವರ ಅಧಿಪತಿಯಾದ. ಈ ಝೆಕ್ ಹಾಗು ಬಿಳಿ ರಶಿಯನ್ ಸೈನಿಕರನ್ನು ಕಟ್ಟಿಕೊಂಡು ಸೈಬೇರಿಯಾದ 'ರಾಜ' ನೆಂದೆನ್ನಿಸಿಕೊಂಡು ಮೆರೆದ. ಅವನ ದಂಡು ಪಶ್ಚಿಮಾಭಿಮುಖವಾಗಿ ಹೊರಟಿತು. ಓಂಸ್ಕ, ಕುರುಟ್‌ಸ್ಕ, ಪೆರ್ಮ್ ಮೊದಲಾದ ನಗರಗಳು ಅದರ ವಶವಾದುವು. ವೋಲ್ಗಾ ನದಿಯ ದಡದಲ್ಲಿದ್ದ ಕಾಝನ್ ಪಟ್ಟಣವೂ ಕೊಲ್ಚಾಕನ ಜೋಳಿಗೆಯೊಳಗೆ ಬಿದ್ದಿತು. ಅವನ ದಳವನ್ನು ಸೆಣಸಲು ಟ್ರಾಟ್ಸ್ಕಿ ಕಳಿಸಿದ ಸೇನೆ ಕೊಲ್ಚಾಕನನ್ನೇ ಕೂಡಿಕೊಂಡಿತು. ಕೆಂಪು ಸೇನೆಗಾದ ನಷ್ಟ ಅಲ್ಪಸ್ವಲ್ಪವಲ್ಲ.

## ಕೊಲ್ಚಾಕನ ಸೋಲು

ಕೆಂಪು ಸೇನೆಯ ಸೋಲಿನಿಂದ ಲೆನಿನ್ ಚಿಂತಾತುರನಾದ. ಸ್ತ್ರೀ ವ್ಯಾಮೋಹ ಮದ್ಯಪಾನ ಇವುಗಳಿಂದ ಸೈನಿಕರು ಕರ್ತವ್ಯ ಪರಾಙ್ಮುಖರಾದರು. ಅಪಜಯಕ್ಕೆ ಇದೇ ಕಾರಣವೆಂದೂ ದೂರು ಬಂದಿತ್ತು. ಸ್ಟಾಲಿನ್ನನನ್ನು ಸೈಬೇರಿಯಕ್ಕೆ ಕಳಿಸಲು ಲೆನಿನ್ ನಿರ್ಧರಿಸಿದ. ಪೆರ್ಮ್ ಪತನ ಮತ್ತು ಉರಾಲ್ ಪರ್ವತ ರಣರಂಗದ ಸೋಲಿನ ಕಾರಣಗಳನ್ನು ವಿಚಾರಿಸಿ ಪರಿಸ್ಥಿ

ತಿಯ ಸುಧಾರಣೆಗಾಗಿ ಅವಶ್ಯವಿದ್ದ ಕಾರ್ಯಕ್ರಮಗಳನ್ನು ಕೈಕೊಳ್ಳಬೇಕೆಂದು ಬಾಲ್ಶೆವಿಕ್ ವರಿಷ್ಠ ಸಮಿತಿಯು ವಿಧಿಸಿ ಸ್ಟಾಲಿನ್ ಮತ್ತು ಜೆರ್ಜಿನಸ್ಕಿಯನ್ನು ಕಳಿಸಿತು.

'ವಿಚಾರಣೆ ನಡೆಸಿದ್ದೇವೆ.' ಮೂರನೇ ದಂಡಿನ ೩೦ ಸಾವಿರ ಸೈನಿಕರಲ್ಲಿ ಅಳಿದುಳಿದವರ ಸಂಖ್ಯೆ ೧೧ ಸಾವಿರ. ಇವರೆಲ್ಲ ಸರ್ಜೇವಿಗಳಾಗಿರುವರು. ಟ್ರಾಟಸ್ಕಿ ಕಳಿಸಿದ ಸೈನಿಕರು ನಂಬಿಗೆಗೆ ಅರ್ಹರಲ್ಲ. ಬಹುಜನ ಶತ್ರು ಶಿಬಿರ ಸೇರಿದರು. ಈಗ ಗಂಡಾಂತರ ಬಂದಿರುವ ವಿಯಾಟ್ಕ ನಗರವನ್ನು ಉಳಿಸಬೇಕಾದರೆ ವಿಶ್ವಾಸಾರ್ಹ ಮೂರು ದಳಗಳು ಅವಶ್ಯ. ಇಲ್ಲದೆ ಇದ್ದರೆ ವಿಯಾಟ್ಕಕ್ಕೂ ಪೆರ್ಮ್‌ದ ಗತಿ ಬರುವುದರಲ್ಲಿ ಸಂದೇಹವಿಲ್ಲ'— ಎಂದು ಸ್ಟಾಲಿನ್ ವರದಿ ಮಾಡಿಕೊಂಡ.

ಸ್ಟಾಲಿನ್ ಬರೆದಂತೆ ಸೇನಾದಳಗಳು ಬಂದುವು. ಚೆಕಾ ಗೂಢಚಾರರೂ ಕಾರ್ಯಪ್ರವೃತ್ತರಾದರು. ಜೆರ್ಜಿನಸ್ಕಿ ಅವರ ಮುಖ್ಯಾಧಿಕಾರಿ. ಈತ ಪೋಲಿಶ್. ಸ್ಟಾಲಿನ್ನನೇ ಬಿರುಸು. ಅವನಿಗಿಂತ ಜೆರ್ಜಿನಸ್ಕಿಯು ಬಣ್ಣ ಹೆಚ್ಚು. ಆತನನ್ನು ಕಂಡರೆ ಎಲ್ಲರೂ ಭಯಪಡುತ್ತಿದ್ದರಂತೆ. ಇವನ ಸಹಕಾರದಿಂದ ವಿಯಾಟ್ಕದಲ್ಲಿ ದ್ರೋಹಿಗಳೆಲ್ಲರನ್ನು ಸ್ಟಾಲಿನ್ ಗುಡಿಸಿಬಿಟ್ಟ. ಸಕಾಲದಲ್ಲಿ ಕೊಲ್ಚಾಕ್ ವಿಯಾಟ್ಕದ ಮೇಲೆ ದಾಳಿ ಮಾಡುತ್ತಿದ್ದರೆ ಏನಾಗುತ್ತಿತ್ತೋ ಏನೋ? ಆತ ಕಾಲಹರಣ ಮಾಡಿದ. ಸ್ವತಂತ್ರ ಝೆಕೊಸ್ಲಾವಿಯಾ ರಾಷ್ಟ್ರವು ರಚಿಸಲ್ಪಟ್ಟ ಮೇಲೆ ಕೊಲ್ಚಾಕನ ಸೇನೆಯಲ್ಲಿದ್ದ ಝೆಕ್ಕರಿಗೂ ಯುದ್ಧದ ಮೇಲಿನ ಆಸಕ್ತಿ ಕಡಿಮೆಯಾಗಿತ್ತು. ಸ್ವದೇಶಕ್ಕೆ ತೆರಳಲು ಅವರು ಹಾತೊರೆದರು. ಹೀಗಾಗಿ ಕೊಲ್ಚಾಕ್ ಗತಿಗೆಟ್ಟ. ಕೆಂಪು ಸೇನೆ ಉರಾಲ್ ಪರ್ವತ ಪ್ರದೇಶವನ್ನು ಹಿಡಿಯಿತು. ಸೈಬೇರಿಯದ ಇರ್ಕುಟ್ಸ್ಕ ವಶವಾಯಿತು. ೧೯೧೯ರ ಆರಂಭದಲ್ಲಿ ಝೆಕ್‌ರು ಕೊಲ್ಚಾಕನನ್ನು ಕೆಂಪು ಸೇನೆಯ ಸಾವಿನ ದವಡೆಗೆ ನೂಕಿದರು.

## ಲೆನಿನ್‌ಗ್ರಾಡ

ರಶಿಯದ ಹೊಸ ಶಕ್ತಿಯನ್ನು ಬಡಿಯಲೆತ್ನಿಸಿದವರ ಪಟ್ಟಿಯಲ್ಲಿ ಬ್ರಿಟಿಶ ಮತ್ತು ಅಮೇರಿಕನ್ನರಿಗೂ ಸ್ಥಾನವಿದೆ. ಈ ದೇಶಗಳ ಬಂಡವಲುಗಾರರು ರಶಿಯದಲ್ಲಿ ಅಪಾರ ಪಾಲು ಬಂಡವಾಳ ಸುರಿಸಿದ್ದರೆಂಬುದನ್ನು ಈ

ಮೊದಲೇ ಹೇಳಿದೆ. ಸೋವಿಯೆಟ್ ಆಡಳಿತೆಯಲ್ಲಿ ತಮ್ಮ ಹಣ ಮುಳುಗಿ ಹೋದೀತೆಂಬ ಬೆದರಿಕೆಯಿಂದ ಸೇನೆಯನ್ನಟ್ಟಿದರು. ಬ್ರಿಟಿಶ್ ನೌಕಾಪಡೆ ಉತ್ತರ ರಶಿಯದ ಮರ್ಮಾನಸ್ಕ, ಆರ್ಕ್‌ಏಂಜಲ್ ಬಂದರಗಳನ್ನು ಹಿಡಿದು ಸೈನಿಕರನ್ನಿಳಿಸಿತು. ಇನ್ನೊಂದು ದಳವು ಬಾಲ್ಟಿಕ್ ಸಮುದ್ರದ ಮೂಲಕ ಫಿನ್ ಆಖಾತಕ್ಕೆ ನುಸುಳಿ ಪೆಟ್ರೊಗ್ರಡವನ್ನು ಆಕ್ರಮಿಸಲು ಜೂಡೆನಿಚ್‌ನಿಗೆ ಸಹಾಯ ನೀಡಿತು. ಪೆಟ್ರೊಗ್ರಡದಲ್ಲಿದ್ದ ಅನೇಕ ಬಿಳಿರಶಿಯನ್ನರು ತಮ್ಮ ನಾಯಕ ಜ್ಯೂಡೆನಿಚ್‌ನ ಬಾಲ ಹಿಡಿದರು.

ಪೆಟ್ರೊಗ್ರಡ ಆಯಕಟ್ಟಿನ ಸ್ಥಳ. ಕ್ರಾಂತಿಭಾವ ಚಟುವಟಿಕೆಯ ಉಗಮಸ್ಥಾನ. ವಿಪ್ಲವದ ತೊಟ್ಟಿಲು. ಮಾಸ್ಕೋ ಪಟ್ಟಣದ ಕೀಲಿಕೈ. ಅದನ್ನು ಕಾಪಾಡಿಕೊಂಡರೆ ರಶಿಯಾ ಕಾಪಾಡಿಕೊಂಡ ಹಾಗೆ. ಆ ಭಾರ ಹೊತ್ತ ಸ್ಟಾಲಿನ್ ಪೆಟ್ರೊಗ್ರಡಕ್ಕೆ ಕಾಲಿಟ್ಟನು. ಅವನು ಬರುವ ಮೊದಲೇ ಜೂಡೆನಿಚ್ ದಾಳಿ ಮಾಡುತ್ತಿದ್ದರೆ ಪೆಟ್ರೊಗ್ರಡವು ವಶವಾಗುವಂತಿತ್ತು. ಆದರೆ ಆತ ಉದಾಸೀನದ ಮುದ್ದೆ. ಕಾರ್ನಿಲೊವ್‌ನಂತಹ ಪ್ರತಿಭಾನ್ವಿತ ವ್ಯಕ್ತಿಯಲ್ಲ. ರಣ ಕುತೂಹಲಿಯಲ್ಲ. ಇಂಗ್ಲಂಡಿನಿಂದ ಇನ್ನಷ್ಟು ಸೇನಾ ಸಹಾಯ ಬರಲೆಂದು ನಿರೀಕ್ಷಿಸಿದ. ಜೂಡೆನಿಚ್ ಮಾಡಿದ ಕಾಲಹರಣ ಕೆಂಪು ಸೇನೆಯ ಸಂಘಟನೆಗೆ ಸ್ಟಾಲಿನ್‌ನಿಗೆ ದೊರೆತ ಸಮಯಾವಕಾಶ. ಸ್ಟಾಲಿನ್ ಪ್ರತಿಯೊಂದು ಕಾರ್ಖಾನೆ ಕಣಿಗಳಿಗೆ ತೆರಳಿ ಸೈನಿಕರನ್ನು ಒಟ್ಟುಗೂಡಿಸಿದನು. ಅವನ ಸೇನೆಯ ಬಗ್ಗೆ ಕ್ರಾಸನೊವ್ ಈ ರೀತಿ ಬರೆಯುತ್ತಾನೆ—'ಅದು ನಿಸ್ತೇಜ ಸೇನೆ. ಸೈನಿಕರು ಉಪವಾಸವಿದ್ದವರಂತೆ ಕಾಣುತ್ತಿದ್ದರು. ಹರಿದ ಅರಿವೆ ಅಂಚಡಿ. ಪಾದರಕ್ಷೆ ಇದ್ದವರಿಗಿದ್ದಿತು ಇಲ್ಲದಿದ್ದವರಿಗಿಲ್ಲ. ಬಂದೂಕನ್ನು ಒಬ್ಬೊಬ್ಬರು ಒಂದೊಂದು ಕಡೆ ಎತ್ತಿ ಹಿಡಿಯುತ್ತಿದ್ದರು. ಅವರು ಯೋಧರಂತೆ ಕಾಣುತ್ತಿದ್ದಿಲ್ಲ. ಅಷ್ಟು ದೂರದಿಂದ ಬರುತ್ತಿದ್ದಾಗಲೇ ಬೆವರಿನ ಹಾಗು ತಂಬಾಕದ ದುರ್ಗಂಧ ಬರುತ್ತಿತ್ತು. ಒಂದು ಸ್ಟೀಮ ರೋಲರ್ ಚಲಿಸಿದಂತೆ ಆ ಸೇನೆಯ ನಡೆ.'

ಇಂತಹ ಸೇನೆಯ ಇದಿರೂ ಜೂಡೆನಿಚ್‌ನ ಆಟ ನಡೆಯಲಿಲ್ಲ. ಬಿಳಿ ರಶಿಯನ್ನರು ಪಲಾಯನ ವ್ರತ ಕೈಕೊಂಡರು. ಪೆಟ್ರೊಗ್ರಡಕ್ಕೆ ಅಪಾಯ ತಪ್ಪಿತು. ಈ ವಿಜಯದ ಸಂಕೇತವಾಗಿ ಪೆಟ್ರೊಗ್ರಡಕ್ಕೆ ಸ್ಟಾಲಿನ್ ಲೆನಿನ್

ಗ್ರಾಡ'ವೆಂದು ಹೆಸರಿಟ್ಟ. ಅಂದಿನಿಂದ ಈ ನಗರವು ಅದೇ ದಿವ್ಯನಾಮದಿಂದ ತಲೆಯೆತ್ತಿ ಮೆರೆಯುತ್ತಿದೆ.

## ಡೆನಿಕಿನ್

ಜರ್ಮನಿಯು ಶರಣು ಹೋದ ಮೇಲೆ ರಶಿಯದಲ್ಲಿ ಪಶ್ಚಿಮದ ಬಂಡವಲುಗಾರರ ಚಟುವಟಿಕೆ ಹೆಚ್ಚಿತು. ಆಗ ಡೆನಿಕಿನ್ ಬಿಳಿರಶಿಯನ್ನರ ಸೇನಾಪತಿಯಾಗಿದ್ದ. ಯುದ್ಧದಲ್ಲಿ ಈತ ಸಮರ್ಥ. ಫ್ರೆಂಚರದು ಸಹಾಯ ಅವನಿಗೆ. ಫ್ರೆಂಚ ನೌಕಾಪಡೆ ಕಪ್ಪು ಸಮುದ್ರದ ವರೆಗೂ ಚಲಿಸಿ ಸೈನಿಕರನ್ನೊದಗಿಸಿತು. ರುಮೇನಿಯನ್ನರು ಗ್ರೀಕರು ಡೆನಿಕಿನನ ಬೆಂಬಲಕ್ಕೆ ನಿಂತರು. ಕುರ್ಸ್ಕ ಒರೆಲ್ ನಗರಗಳು ಅವನ ವಶವಾದವು. ಇತ್ತ ಕಾಸ್ಪಿಯನ್ ಸಮುದ್ರ ಭಾಗದಲ್ಲಿದ್ದ ರಾಂಗೆಲ್ ಝಾರಿಸ್ತಾನವನ್ನು ನುಂಗಿ ನೀರು ಕುಡಿದ. ಸೋವಿಯೆಟ್ ಪ್ರಜಾಪ್ರಭುತ್ವ ರಾಷ್ಟ್ರಕ್ಕೆ ಡೆನಿಕಿನ್ ಮತ್ತು ರಾಂಗೆಲ'ರವರು ಪರಮ ವೈರಿಗಳಾಗಿ ನಿಂತರು.

ಸ್ಟಾಲಿನ್ನನನ್ನು ಪುನಃ ದಕ್ಷಿಣದ ರಣರಂಗಕ್ಕೆ ಕಳಿಸುವುದುಚಿತವೆಂದು ಮಿಲಿಟರಿ ಮಂಡಲದ ವಿಚಾರ. ಆತನು ಮಾತ್ರ ತಕ್ಷಣ ಒಪ್ಪಲಿಲ್ಲ. ಅದಕ್ಕೆ ಕಾರಣಗಳೂ ಇವೆ. ಈ ಮೊದಲೊಮ್ಮೆ ಅವನು ಝಾರಿಸ್ತಾನವನ್ನು ರಕ್ಷಿಸಿದ್ದನು. ದಿನ ಬೆಳಗಾಗುವದರೊಳಗೆ ಟ್ರಾಟಸ್ಕಿ ತರುಣ ಅಧಿಕಾರಿಗಳನ್ನೆಲ್ಲ ಕಿತ್ತೊಗೆದು ತನ್ನ ಅನುಗ್ರಹಕ್ಕೆ ಪಾತ್ರರಾದವರನ್ನು ನೇಮಿಸಿಕೊಂಡ. ಇವರಲ್ಲಿ ಕೆಲವರು ಝಾರನ ಉಪ್ಪನ್ನು ತಿಂದು ಬೆಳೆದವರು. ಝಾರನ ಮೇಲೆ ಸ್ವಲ್ಪ ಪ್ರೇಮವಾದರವಿದ್ದುದು ಸಹಜವೇ. ಝಾರ್ ಪಕ್ಷದವರ ಕೈ ಮೇಲಾಗುವ ಪರಿಸ್ಥಿತಿ ರೂಪ ಹೊಂದಿದಾಗ ಇವರು ಬಾಲ್ಶೆವಿಕರನ್ನು ತ್ಯಜಿಸಿ ಹೋಗಿಬಿಡುತ್ತಿದ್ದರು. ಗೆದ್ದೆತ್ತಿನ ಬಾಲ ಹಿಡಿವ ಮನೋವೃತ್ತಿ! ಹೀಗಾಗಿಯೇ ಝಾರಿಸ್ತಾನ ಈಗ ಕೈಬಿಟ್ಟುಹೋದುದು. ಇಂತಹ ಪರಿಸ್ಥಿತಿಯಲ್ಲಿ ಅಧಿಕಾರಿಗಳನ್ನು ಕಿತ್ತೆಸೆದು ನೇಮಿಸಲು ಸಂಪೂರ್ಣ ಅಧಿಕಾರವಿರುವದು ಅವಶ್ಯ. ಟ್ರಾಟಸ್ಕಿ ನಡುನಡುವೆ ಕೈಹಾಕಬಾರದು ಎಂದು ತಿಳಿಸಿದನು. ಮಿಲಿಟರಿ ಮಂಡಲದವರು ನಿರುಪಾಯರಾಗಿ ಒಪ್ಪಿದರು. ಇದು ಟ್ರಾಟಸ್ಕಿಗೆ ದೊರೆತ ಪ್ರಥಮ ಅಪಜಯ.

ಡೆನಿಕಿನ್ ಮತ್ತು ರಾಂಗೆಲ್‌ರವರನ್ನು ಸೋಲಿಸಲು ಟ್ರಾಟ್ಸ್ಕಿ ಯೋಜನೆಯೊಂದನ್ನು ರಚಿಸಿದ್ದ. ರೊಸ್ಟೊವ್ ಡೆನಿಕಿನನ ಸನ್ನಿಧಿ ಕೇಂದ್ರ. ಝಾರಿಸ್ಥಾನದಿಂದ ರೊಸ್ಟೊವ್‌ದ ಕಡೆ ಹಾದು ಹೋಗಬೇಕೆಂದವನ ತರ್ಕ. ಇದಕ್ಕೆ ಸ್ಟಾಲಿನ್ನನದು ವಿರೋಧ. ಈ ಹೆದ್ದಾರಿ ಹಿಡಿದರೆ ಕಾಸಕರ ರಾಜ್ಯ ದಾಟಬೇಕಾಗುವುದು. ಅವರು ಬಿಳಿ ರಶಿಯನರ ಬಲಗೈ ಬಂಟರು. ಡೆನಿಕಿನ್ ಮತ್ತು ಅವರ ದೇಶಾಭಿಮಾನವನ್ನು ಕಲಕುವುದರಲ್ಲಿ ಸಂಶಯವಿಲ್ಲ. ಆದುದರಿಂದ ಆ ರಸ್ತೆ ಬಿಟ್ಟು ಖಾರ್ಕೋವ ಮೂಲಕ ರೊಸ್ಟೊವ್‌ಗೆ ಮುತ್ತಿಗೆ ಹಾಕುವುದು ಲೇಸೆಂದು ಸ್ಟಾಲಿನ್ನನ ಮತ. 'ಖಾರ್ಕೋವ ಕೂಲಿಕಾರರ ಕೇಂದ್ರ. ಅವರು ನಮ್ಮ ಮಿತ್ರರು. ಕೆಂಪು ಸೇನೆಯನ್ನು ಸ್ವಾಗತಿಸುವರು. ಖಾರ್ಕೋವನ್ನು ಸ್ವಾಧೀನಪಡಿಸಿಕೊಂಡರೆ ವೊರೊನೆಜ್-ರೊಸ್ಟೊವ್ ರೇಲ್ವೆ ಕತ್ತರಿಸಲ್ಪಡುವುದು. ಡೆನಿಕಿನನು ಕಾಳುಕಡಿ, ಕಲ್ಲಿದ್ದಲು ತರಿಸಿಕೊಳ್ಳುವುದು ಈ ಮಾರ್ಗದಿಂದಲೇ' ಎಂದು ಸ್ಟಾಲಿನ್ ಲೆನಿನ್ನನಿಗೆ ಬರೆದ. ಈ ಯೋಜನೆಯನ್ನು ಸ್ವೀಕರಿಸದೇ ಇದ್ದರೆ ದಕ್ಷಿಣ ರಣರಂಗದಲ್ಲಿ ತಾನಿರುವುದು ವ್ಯರ್ಥವೆಂದೂ ಅವನು ಸೂಚಿಸಿದ; ಲೆನಿನ್ ಈ ಯೋಜನೆಗಳನ್ನೆಲ್ಲ ತೂಗಿ ನೋಡಿ, ಸ್ಟಾಲಿನ್ನನ ಯೋಜನೆಗೆ ಅನುಮತಿಯಿತ್ತ.

ಸ್ಟಾಲಿನ್ ಮೊದಲು ಊಹಿಸಿದಂತೆ ಡೆನಿಕಿನನಿಗೆ ಸೋಲು ಪ್ರಾಪ್ತವಾಯಿತು. ಶಸ್ತ್ರಾಸ್ತ್ರಗಳು, ಮದ್ದು ಗುಂಡುಗಳು, ಅಸಂಖ್ಯ ಕಾಸಕ್ ಕುದುರೆಗಳು ಕೊಳ್ಳೆ ದೊರೆತುವು. ಉಳಿದುಳಿದ ಡೆನಿಕಿನನ ಸೇನೆಯನ್ನು ಸಂಘಟಿಸಲು ರಾಂಗೆಲ್ ಯತ್ನಿಸಿದ. ಆದರೆ ಕೆಂಪು ಸೇನೆಯ ಪೆಟ್ಟನ್ನು ಸಹಿಸದೆ ತನ್ನ ಪರಿವಾರದೊಂದಿಗೆ ಕಾನಸ್ಟಾಂಟಿನೋಪಲ್ (ಇಸ್ತಾಂಬೂಲ್)ದಲ್ಲಿ ತಲೆಮರೆಸಿಕೊಂಡನು.

### ಪೋಲರ ಅತಿಕ್ರಮಣ

'ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆಲ್ಲ' ಎಂಬ ಮಾತು ಸುಳ್ಳಲ್ಲ. ಅಮೇರಿಕನರು, ಬ್ರಿಟಿಶರು, ಜರ್ಮನರು ರಶಿಯದ ಒಂದೊಂದೇ ತುಣುಕುಗಳನ್ನು ನುಂಗುತಿದ್ದುದನ್ನು ನೋಡಿ ಪೋಲರೂ ಅತಿಕ್ರಮಿಸಿ ಬಂದರು. ಪೋಲರ ಈ ದಬ್ಬಾಳಿಕೆಯು ಬಹು ಸೋಜಿಗವಾದುದು. ಏಕೆಂದರೆ, ಅನೇಕ ಶತಮಾನಗಳ ವರೆಗೆ ಪರದಾಸ್ಯದಲ್ಲಿ ಬಿದ್ದು ಒದ್ದಾಡಿದ ಜನಾಂಗವಿದು.

ಸ್ವಾತಂತ್ರ್ಯಕ್ಕಾಗಿ ಒಂದು ಶತಮಾನದ ವರೆಗೆ ಹೋರಾಡಿದರು. ಮಹಾ ಯುದ್ಧಕಾಲದಲ್ಲಿ ಮಿತ್ರರಿಗೆ ಅಲ್ಪಸ್ವಲ್ಪ ಬೆಂಬಲ ಕೊಟ್ಟ ಕೃತಜ್ಞತೆಯಾಗಿ ಪೋಲರ ಸ್ವಾತಂತ್ರ್ಯ ಹಕ್ಕು ಮನ್ನಿಸಲ್ಪಟ್ಟಿತು. ಪೋಲಾಡು ತಲೆ ಎತ್ತಿ ದುದು ಹಾಗೆ. ಆದರೆ ಸ್ವಾತಂತ್ರ್ಯ ದೊರೆತೊಡನೆಯೇ ರಾಜ್ಯವಿಸ್ತರಣದ ದುರಾಶೆ ಹಿಡಿಯಿತು ಪೋಲರಿಗೆ. ಮಾರ್ಶಲ್ ಪಿಲ್‌ಸುಡ್‌ಸ್ಕಿ ಫ್ರೆಂಚ್ ಮತ್ತು ಬ್ರಿಟಿಶ್ ಸೇನೆಗಳ ಸಹಾಯದಿಂದ ದುರ್ಬಲ ರಶಿಯದ ಪಶ್ಚಿಮ ಯುಕ್ರೇನ್ ಮತ್ತು ಬಿಳಿ ರಶಿಯದ ಪಶ್ಚಿಮ ಭಾಗಗಳನ್ನು ಸೆಳೆದುಕೊಂಡ. ಇನ್ನೂ ಪೋಲಿಶ್ ಸೈನ್ಯ ಮುಂದೆ ಹೋಗುತಿತ್ತು. ಆದರೆ ಝಿತೋಮಿರದಲ್ಲಿ ಬುಡೆನ್ನಿ ಅವರನ್ನು ಸೋಲಿಸಿದ. ಓಡುತ್ತಿರುವ ಪೋಲರನ್ನು ಕೆಂಪುಸೇನೆ ವಾರ್ಸಾನಗರದ ವರೆಗೆ ಬೆಂಬತ್ತಿತು. ದಣಿದ ಕೆಂಪು ಸೈನಿಕರಿಗೆ ಅಲ್ಲಿ ಹಿನ್ನಡೆಯೊದಗಿತು. ಫ್ರೆಂಚರ ಬೆಂಬಲದಿಂದ ರಶಿಯನರನ್ನು ಹಿಂದಕ್ಕಟ್ಟಿ ತಾವು ಮೊದಲು ಆಕ್ರಮಿಸಿದ ಭೂಮಿಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಪೋಲರು ಶಕ್ತರಾದರು.

## ಲೆನಿನ್‌ನ ಕೊಲೆಯ ಯತ್ನ

ಸೋವಿಯೆಟ್ ರಾಜ್ಯಾಡಳಿತೆಯನ್ನು ತಲಬುಡ ಮಾಡಲು ಬಂಡವಲ-ಗಾರರೆಬ್ಬಿಸಿದ ಪುಂಡಾಟ ಒತ್ತಟ್ಟಿಗಿರಲಿ. ಬಾಲ್ಶೆವಿಕ್ ಮುಖಂಡರ ಕೊಲೆಗೂ ಪ್ರೋತ್ಸಾಹಿಸಿದರು. ೧೯೧೮ರಲ್ಲಿ ವೊಲೊಡಾರಸ್ಕಿ ಮತ್ತು ಉರಿಟಸ್ಕಿ ಎಂಬಿಬ್ಬ ಪ್ರಮುಖರು ಒಳಸಂಚುಗಾರರ ತೋಫಿಗೆ ಎರವಾದರು. ಕಪಲಾನ ಎಂಬಾಕೆ ಸೋವಿಯೆಟ್ ರಶಿಯ ಪಿತಾಮಹ ಲೆನಿನ್ನನಿಗೂ ಗುಂಡೆಸೆದಳು. ಲೆನಿನ್ ಸಾವಿಗೀಡಾಗಲಿಲ್ಲ. ಆದರೆ, ಪ್ರಾಣಪಕ್ಷಿ ಹಾರುವವರೆಗೆ ಆತ ಈ ನೋವಿನಿಂದ ಬಳಲಿದ.

ಬಂಡವಲುಗಾರ ಧಣಿಗಳು ರಶಿಯದಲ್ಲಿ ಆಸ್ತಿವಿನಾಶಕ ಚಟುವಟಿಕೆಗಾಗಿಯೂ ಅಪಾರ ಧನ ಸುರಿಸಿದ್ದಾರೆ. ಮೂರು ಕಾಸು ಆರು ಕಾಸುಗಳಿಗಾಗಿ ಕೆಲವರು ತಮ್ಮನ್ನು ವಿದೇಶಿಯರಿಗೆ ಮಾರಿಕೊಂಡರು. ಈ ದೇಶ ದ್ರೋಹಿಗಳು ರೇಲ್ವೆ, ಸೇತುವೆ ಕಾರ್ಖಾನೆಗಳನ್ನು ಹಾಳುಮಾಡಲು ಹಿಂದು ಮುಂದು ನೋಡಲಿಲ್ಲ. ಡೆನಿಕಿನ್, ಕೊಲ್ಚಾಕ್, ಚ್ಯುಡೆನಿಚ್ ಮೊದಲಾದವರಿಗೆ ೧೦ ಕೋಟಿ ಪೌಂಡುಗಳ ಶಸ್ತ್ರಾಸ್ತ್ರಗಳನ್ನು ಪೂರೈಸಲಾಗಿದೆಯೆಂದು ಬ್ರಿಟಿಶ್ ಸರಕಾರವೇ ಒಪ್ಪಿಕೊಂಡಿದೆ. ಹೀಗಿರುವಾಗ ಆಸ್ತಿವಿನಾಶಕ

ಚಟುವಟಿಕೆಗಳಿಗಾಗಿ ವೆಚ್ಚ ಮಾಡಿದ ಹಣವೆಷ್ಟೋ ಏನೋ? ಕೂಲಿಕಾರರ ರಾಜ್ಯವನ್ನು ಮುರಿದೆಸೆಯುವ ಬಂಡವಲುಗಾರರ ಈ ಹಂಚಿಕೆಯು ಬ್ರಿಟನ ಕೂಲಿಕಾರರನ್ನು ಸಿಡ್ಡಿಯಿಂದೆಬ್ಬಿಸಿತು. ಬ್ರಿಟಿಶ್ ಸೇನೆಯನ್ನು ಹಿಂದಕ್ಕೆ ಕರೆಸಿಕೊಳ್ಳಬೇಕೆಂದು ಅಲ್ಲಿ ಚಳವಳಿಯೆದ್ದಿತು. ಈ ಬೇಡಿಕೆಯನ್ನು ಮನ್ನಿಸದೇ ಇದ್ದರೆ ಸಾರ್ವತ್ರಿಕ ಸಂಪು ಹೂಡುವುದಾಗಿ ಅವರು ಅಂಜಿಸಿ ಅದಕ್ಕೆ ತಕ್ಕ ಸಿದ್ಧತೆಗಳನ್ನು ಮಾಡತೊಡಗಿದರು. ಅಂದಿನ ಪ್ರಧಾನಮಂತ್ರಿ ಲಾಯಿಡ್ ಜಾರ್ಜ, ಜನಾಭಿಪ್ರಾಯಕ್ಕೆ ಬಗ್ಗಿ ಬ್ರಿಟಿಶ ಸೈನಿಕರನ್ನು ಹಿಂದಕ್ಕೆ ಕರೆಸಿಕೊಳ್ಳುವುದಾಗಿ ಘೋಷಿಸಿದ. ಇತ್ತ ಕಪ್ಪುಸಮುದ್ರದಲ್ಲಿ ಇದ್ದ ಫ್ರೆಂಚ್ ಯುದ್ಧ ಹಡಗಗಳ ನಾವಿಕರೂ ದಂಗೆಯೆದ್ದರು. ರಶಿಯದ ಕೆಸರಿನಲ್ಲಿ ಹೂತುಹೋದ ತಮ್ಮ ಕಾಲುಗಳನ್ನು ಹಿಂದಕ್ಕೆ ಕೊಸರಿಕೊಳ್ಳದೆ ಫ್ರೆಂಚರಿಗೂ ಬೇರೆ ಉಪಾಯವಿರಲಿಲ್ಲ. ರಶಿಯದೊಡನೆ ಎಲ್ಲರೂ ಒಪ್ಪಂದ ಬಯಸಿದರು. ಶಾಂತಿಗಾಗಿ ಹಾತೊರೆಯುತ್ತಿದ್ದ ರಶಿಯ ಪೋಲಂಡ್ ಆತಿಕ್ರಮಿಸಿದ್ದ ಭೂಮಿಯನ್ನು ಬಿಟ್ಟುಕೊಟ್ಟಿತು. ೧೯೨೨ರೊಳಗೆ ಕೆಂಪು ಸೇನೆ ದೇಶವನ್ನು ವಿಮೋಚನೆಗೊಳಿಸಿತು.

ಸೋವಿಯೆಟ್ ರಾಷ್ಟ್ರ ಬಂಡವಲು ಜಗತ್ತಿನ ಏಟಿಗೆ ಕುಗ್ಗಲಿಲ್ಲ. ಕುಸಿಯಲಿಲ್ಲ, ಇತಿಶ್ರೀಯೂ ಆಗಲಿಲ್ಲ. ಹಗೆಗಳೇ ಹಲ್ಲುಮುರಿದುಕೊಂಡರು. ರಶಿಯದ ವೈರಿಗಳೆಷ್ಟು? ಕ್ರಸನೊವ್, ಡೆನಿಕಿನ್, ಕೊಲ್ಚಾಕ್ ಇವರೇನು ಸಾಮಾನ್ಯರೆ? ಶಾಸಕ್ ಸವಾರರು ಅವರ ಕಡೆ. ಬಂಡವಲು ದೇಶಗಳ ಧನಬಲ ಸಹಾಯ ಇನ್ನೊಂದೆಡೆ; ಆದರೂ ಅವರ ಕೈ ಸೋತಿತು. ಮುಖ್ಯವಾಗಿ ಪ್ರತಿಕ್ರಾಂತಿಯ ಶಿಬಿರದಲ್ಲಿ ಐಕ್ಯವಿಲ್ಲದುದೇ ಅಪಜಯದ ಕಾರಣ. ಡೆನಿಕಿನ್, ಕೊಲ್ಚಾಕ್ ಮೊದಲಾದವರದು ಸೇನೆಯೆಂದೆನ್ನುವುದಕ್ಕಿಂತಲೂ ದರೋಡೆಖೋರರ ತಂಡಗಳೆಂದು ಹೇಳುವುದು ಸೊಗಸು. ಕೆಲವರು ರಾಜವಂಶದ ಪುನಸ್ಸ್ಥಾಪನೆ ಬಯಸುತ್ತಿದ್ದರೆ ಇನ್ನು ಕೆಲವರು ಅದಕ್ಕೆ ವಿರೋಧಿಗಳು; ಸ್ವಯಂ ಅಧಿಕಾರಲಾಲಸೆಯಿದ್ದವರು. ಪಾಶ್ಚಾತ್ಯ ಬಂಡವಲುಗಾರರಿಗೆ ಝಾರನಾದರೂ ಅಷ್ಟೆ. ಇನ್ನಾರಾದರೂ ಅಷ್ಟೆ. ತಮ್ಮ ವ್ಯಾಪಾರೀ ಹಕ್ಕು ಹಿತಗಳಿಗೆ ಕೊಡಲಿಯೆಸೆಯದ ಸರಕಾರವಿದ್ದರೆ ಸರಿ. ಏಕೋದ್ದೇಶವಿಲ್ಲದೆ ಅವರು ಕೆಟ್ಟರು.

## ಹೊಸ ಶಕ್ತಿ

ಬಾಲ್ಶೆವಿಕರ ಕಥೆ ಬೇರೆ. ಅವರು ಬೀರಿದ ಸಾಮ್ಯವಾದದ ಸಂದೇಶವನ್ನು ಜನ ಆಲಿಸಿರುವರು. ನವನವ ವಿಚಾರಗಳನ್ನು ಅವರು ಪರಿಗ್ರಹಿಸಿರುವರು. ಇದು ತಮ್ಮ ದೇಶ, ತಮ್ಮೆಲ್ಲರ ದೇಶ, ಜನಸಾಮಾನ್ಯರದು, ಬಡವರದು, ಇಳೆಯಲ್ಲಿ ಇಂತಹದು ರಾಜ್ಯ ಇದೊಂದೇ, ಇದನ್ನು ಕಟ್ಟಿದವರು ತಾವು ಎಂಬ ದೇಶಾಭಿಮಾನ, ಸ್ವಾಭಿಮಾನ ಅವರ ರಕ್ತಗತವಾಗಿರುವುದು. ತಮ್ಮ ಸುಖಕ್ಕಾಗಿ, ಸರ್ವ ಜನ ಕಲ್ಯಾಣಕ್ಕಾಗಿ ದುಡಿಯುವುದು ಮಡಿಯುವುದು ತಮ್ಮ ಪರಮೋ ಧರ್ಮ ಎಂಬುದನ್ನು ಅವರು ಬಲ್ಲರು; ಸಾಮ್ಯವಾದದ ಕಿಡಿ ಅವರ ಹೃದಯದೀಪವನ್ನು ಬೆಳಗಿಸಿದೆ; ಧೈರ್ಯ ಕೊಟ್ಟಿದೆ; ಸಾಹಸಕ್ಕೆ ಎಳೆದೊಯ್ಯುತ್ತಿದೆ. ಅದರ ರಕ್ಷಣೆಗಾಗಿ ತನುಮನಧನವನ್ನರ್ಪಿಸಲು ಅವರು ಸದಾಸಿದ್ಧರೇ. ತಮ್ಮ ಹೆಮ್ಮೆಯ ನಾಡಿಗೆ, ತಮಗೆ ಪ್ರಿಯವಾಗಿರುವ ತತ್ವಕ್ಕೆ ಗಂಡಾಂತರ ಬಂದಾಗ ಇಡೀ ದೇಶವೇ ಇಡೀ ಜನಾಂಗವೇ, ಸಕಲ ಶಕ್ತಿಯಿಂದ ಒಂದು ವ್ಯಕ್ತಿಯಂತಾಗಿ ಎದ್ದಿತು. ಈ ಶಕ್ತಿಯ ಪ್ರತಿಮೂರ್ತಿಯೇ ಕೆಂಪು ಸೇನೆ. ಅದರ ಶಕ್ತಿ ಹೊಸತು. ಅಪಾರವಾದುದು. ಅಜೇಯವಾದುದೂ ಅದರಿಂದಲೇ.

ಈ ಅನಂತ ಶಕ್ತಿಯನ್ನು ಪ್ರಚೋದಿಸಿದ್ದು ಲೆನಿನ್‌ನ, ಸ್ಟಾಲಿನ್ನನ, ಬಾಲ್ಶೆವಿಕರ ಮಹತ್ಕಾರ್ಯ. ಕಟ್ಟುಕಟ್ಟಳೆಗಳಿಂದ, ಜೀವನದ ಉದಾಹರಣೆಗಳಿಂದ ಅವರು ಈ ಕಾರ್ಯ ಸಾಧಿಸಿದ್ದಾರೆ. ಆಪತ್ಕಾಲದಲ್ಲಿ ಈ ಬಾಲ್ಶೆವಿಕರೇ ರಣರಂಗಕ್ಕೆ ತೆರಳಿ ಆತ್ಮಾರ್ಪಣಮಾಡಿರುವರು. ಕೇವಲ ಸಾಮಾನ್ಯರದಷ್ಟರಲ್ಲ. ಮುಖಂಡರು ಕೂಡಾ ಹಿಂದೆ ಬಿದ್ದಿಲ್ಲ. ಸ್ಟಾಲಿನ್ ಅದಕ್ಕೊಂದು ಸಾಕ್ಷಿ. ಅಂತಃಕಲಹ, ದಾಡಯಾತ್ರೆಯ ಈ ಅವಧಿಯಲ್ಲಿ ಅವನು ಜಗಜಟ್ಟಿಯಂತೆ ಹೋರಾಡಿರುವನು. ಅವನ ಕ್ಷಾತ್ರತೇಜ ಬೆಳಗಿದುದು ಇಂದೇ. ಬಾಡವಲು ರಕ್ಕಸರ ಹಾವಳಿ ಸಹಿಸದ ರಶಿಯದ ಜನತೆಗೆ ದಧೀಚಿ ಮುನಿಯಂತೆ ಉಪಕಾರವಾಗಿದ್ದಾನೆ ಸ್ಟಾಲಿನ್. ಸ್ಟಾಲಿನ್ ತೋರಿದ ಧೈರ್ಯ, ರಣಕೌಶಲ ಸುವರ್ಣ ಅಕ್ಷರಗಳಿಂದ ಬರೆದಿಡಲರ್ಹವಾಗಿದೆ. ಅವನ ಕೀರ್ತಿ ಹಬ್ಬಿದುದು, ಜನತೆಯ ಪ್ರೀತಿ ಆತ ಗಳಿಸಿದುದು ಈ ಕಾಲದಲ್ಲೇ. ತನ್ನ ನಾಡಿಗೆ ತಾನೇ ಕೋಟೆಯಾದ ಸ್ಟಾಲಿನ್. ಆ ಕೋಟೆಯೊಳಗೆ

ಪ್ರವೇಶಿಸಿ ರಶಿಯದ ಚಿನ್ನದ ಕಣಿಗಳನ್ನೂ, ಸುವರ್ಣ ಮಣ್ಣನ್ನೂ, ಹೆಣ್ಣನ್ನೂ ಕಸಿದುಕೊಳ್ಳಲು ಸ್ವಾರ್ಥ ಸಾಧಕರಿಗೆ ಆಗಲಿಲ್ಲ. ಆಗದು, ದಲಿತ ಜನರ ನಾಡು ಮಲೆತು ನಿಂತಿತು. ನಿಲ್ಲುವುದರಲ್ಲೂ ಸಂದೇಹವಿಲ್ಲ. ರಶಿಯನ್ ಕವಿ ಬಂಬೂಲ್ 'ನನ್ನ ಜನತೆ ಹಾಡಿದ ನುಡಿ ಹುಸಿಯೇ? ಹಾವು ಹೊರತು ಗರುಡಗೆ ಅಳಿವೆ?' ಎಂದು ಹಾಡಿ ಹೇಳುತ್ತಾನೆ.

'ದಲಿತ ಜನಕೆ ಸುಖವಿತ್ತ ನವಧರೆ
ಕಳ್ಳ ನರಿಯ ಪಾಲಾಗುವುದೆ?'
ಸ್ವಾರ್ಥಧೂರ್ತರ ಕೊಳ್ಳೆಗೀ ಇಳೆ
ಒಳಗಾಗದು; ಬಾಗಲು ಬಹುದೆ?'

---

## ಸ್ಟಾಲಿನ್ ಮತ್ತು ಟ್ರಾಟ್‌ಸ್ಕಿ

ಬೊಲ್ಶೆವಿಕ್ ಮುಖಂಡರಲ್ಲೆಲ್ಲ ಸ್ಟಾಲಿನ್ ಮತ್ತು ಟ್ರಾಟ್‌ಸ್ಕಿ ಅತ್ಯಂತ ಸಮರ್ಥರು. ಆದರೆ ದುರದೃಷ್ಟದಿಂದ ಎತ್ತು ಗುಡ್ಡಕ್ಕೆಳೆದರೆ ಎಮ್ಮೆ ನೀರಿಗೆಳೆಯಿತು ಎಂಬ ಹಾಗೆ ಅವರ ಮನೋವೃತ್ತಿ. ಒಬ್ಬರನ್ನು ಕಂಡರೆ ಮತ್ತೊಬ್ಬರಿಗಾಗದು. ಪರಸ್ಪರ ತಿರಸ್ಕಾರ, ಅಸೂಯೆ, ತಾತ್ವಿಕ ಘರ್ಷಣೆ, ಅಧಿಕಾರ ಲಾಲಸೆಗಳಿಂದ ದ್ವೇಷವು ದಿನೇ ದಿನೇ ಬೆಳೆಯುತ್ತಾ ಹೋಯಿತು. ಲೆನಿನ್ ಜೀವಂತವಿರುವ ವರೆಗೆ ಆತನ ಮೇಲಿನ ನಯ ಭಯ ಭಕ್ತಿಯಿಂದ ತಲೆ ತಗ್ಗಿಸಿಕೊಂಡಿದ್ದರು. ಯಾವಾಗ ಆ ಬಲವಿನ ಎಳೆ ಹರಿದು ಹೋಯಿತೋ ಆಗ ಇಬ್ಬರೂ ರಣಕಣಕ್ಕೆ ಇಳಿದರು. ಒಂದಲ್ಲ ಎರಡಲ್ಲ, ಹಲವು ವರುಷಗಳ ವರೆಗೆ ಈ ರಾಜಧಾನಿಯಲ್ಲಿ ಮಲ್ಲಯುದ್ಧ ನಡೆಯಿತು. ಇವರೊಳಗಿನ ಕಲಹ ರಶಿಯದ ಇತಿಹಾಸವನ್ನೇ ಬದಲಾಯಿಸಿದೆ. ಟ್ರಾಟ್‌ಸ್ಕಿಯ ಬದಲು ಸ್ಟಾಲಿನ್ನನೇಕೆ ಅಧಿಕಾರಕ್ಕೆ ಬಂದನೆಂದು ತಿಳಿಯ ಬೇಕಾದರೆ ಅವರೊಳಗಿನ ಕುಸ್ತಿಯನ್ನು ಕಣ್ಣಾರೆ ಕಾಣುವುದು ಅತ್ಯಗತ್ಯ.

**ಅನಾರೋಗ್ಯ**

ಈ ನಾಟಕದ ಮೊದಲನೆಯ ಅಂಕ ಆರಂಭವಾದುದು ೧೯೨೨ರಲ್ಲಿ. ಸ್ಟಾಲಿನ್ ದೇಹವ್ಯಥೆಯಿಂದ ಬಳಲಿದನು. ಕ್ರಾಂತಿ ಪ್ರತಿಕ್ರಾಂತಿಯ

ಹೋರಾಟದಿಂದ ಅವನ ಆರೋಗ್ಯದ ಮೇಲೆ ದುಷ್ಪರಿಣಾಮವಾಗಿದೆ. ನೆವಕ್ಕೆ ಎದ್ದುದು ಹೊಟ್ಟೆನೋವು. ಪರೀಕ್ಷಿಸಿದ ಡಾಕ್ಟರರು, 'ಕರುಳಿನ ರೋಗ. ಶಸ್ತ್ರಕ್ರಿಯೆ ಮಾಡದೆ ಪ್ರಾಣವಳಿಯದು' ಎಂದರು. ಮಾಸ್ಕೋ ನಗರದಲ್ಲಿರುವ ಸೊಲ್ಡಾಟೆನ್‌ಕೋವ್ಸ್ಕಿ ಆಸ್ಪತ್ರೆಯಲ್ಲಿ ಸ್ಟಾಲಿನ್ ಒಂದೊರಗಿದ. ಶಸ್ತ್ರಕ್ರಿಯೆ ಎಲ್ಲಿ ಹೆಚ್ಚುಕಡಿಮೆಯಾಗುತ್ತೊ ಏನೊ? ಮೃತ್ಯು ಅವನ ಹಾಸಿಗೆಯ ಬಳಿ ಕುಳಿತು ಕೆಲವು ದಿವಸಗಳ ವರೆಗೆ ಅವನನ್ನು ಹಿಡಿದೆಳೆಯುತ್ತಿತ್ತು; ಸ್ಟಾಲಿನ್ ಬದುಕುವುದೂ ಸಂಶಯವೆಂದು ಕೆಲವರು ತಿಳಿದಿದ್ದರು. ಸಹಾನುಭೂತಿ ಕನಿಕರದಿಂದ ಎಲ್ಲರ ಹೃದಯಗಳೂ ಅರಳಿದುವು. ತನಗೆ ಪ್ರಿಯರಾದ ಜನ ರೋಗರುಜಿಗಳಿಂದ ನರಳಿದಾಗ ಎಲ್ಲರಿಗೂ ಹಾಗೆಯೇ ಅನ್ನಿಸುವುದು. ರೋಗಿ ವಿರೋಧಿಯೋ ಇರಲೊಲ್ಲನೇಕೆ? ಆ ಗಳಿಗೆಯಲ್ಲಿ ಯಾರೂ ಹಿಂದಿನದನ್ನು ಸ್ಮರಿಸಿಕೊಳ್ಳುವುದಿಲ್ಲ. ಲೆನಿನ್ ಕೂಡಾ ಅಂತಹ ಉದಾತ್ತ ವ್ಯಕ್ತಿ. ಸ್ಟಾಲಿನ್ ಟ್ರಾಟ್ಸ್ಕಿ ಕಲಹದಿಂದ ಆತನು ಗಾಬರಿಗೊಂಡಿದ್ದ. ಟ್ರಾಟ್ಸ್ಕಿ ಕಲಹಪ್ರೀತ, ಸ್ಟಾಲಿನ್ ರಣಪ್ರಿಯ. ಅವರೊಳಗಿನ ವಿವಾದದಿಂದ ಮುಂದೇನಾಗಬಹುದೋ ಎಂಬ ಅಂಜಿಕೆಯೂ ಇತ್ತು ಆತನಿಗೆ. ಆದರೆ ಒಮ್ಮೆ ಸ್ಟಾಲಿನ್ ಮೃತ್ಯುಶಯ್ಯೆಯಲ್ಲಿ ಮಲಗಿರುವನೆಂದು ತಿಳಿದೊಡನೆಯೇ ಲೆನಿನ್‌ನಲ್ಲಿ ಸದ್ಭಾವ, ಒಲವು ಉಕ್ಕೇರಿ ಬಂತು. ಸ್ಟಾಲಿನ್‌ನಲ್ಲಿರುವ ಗುಣ ಗರಿ ಬಣ್ಣಗಳು ಅವನ ಕಣ್ಣೆದುರು ಮಿಂಚತೊಡಗಿದುವು. ಸ್ಟಾಲಿನ್‌ನಲ್ಲಿರುವ ಗೂಢ ಶಕ್ತಿಯನ್ನರಿಯದೆ ಇನ್ನಿತರರು ಆತನನ್ನು ಕಾಕೇಶಿಯದ ಮಂಗವೆಂದು ಹೀಗಳೆಯುತ್ತಿದ್ದಾಗ ಹಿಡಿದೆತ್ತಿದವ ತಾನು. ಎಷ್ಟು ವಿಧೇಯನಾದ ಸ್ಟಾಲಿನ್! ಸಂಘವಾದದ ಮೇಲೆ ಅವನಿಗೆಷ್ಟು ಶ್ರದ್ಧೆ! ಒಮ್ಮೆಯಾದರೂ ಬಣ್ಣ ಬದಲಾಯಿಸಿಲ್ಲ; ಮನಸ್ಸು ಚಂಚಲವಾಗಿಲ್ಲ. ಕ್ರಾಂತಿಯ ಪೂರ್ವದಲ್ಲಿ ಅವನು ಪಟ್ಟ ಕಷ್ಟ ಮಾಡಿದ ತ್ಯಾಗ ಎಷ್ಟು ಅನುಪಮ! ಅವನ ಧೈರ್ಯವೇನು? ಮಾನಸಿಕ ಸ್ಥೈರ್ಯವೇನು? ಬಂಡವಲುಗಾರರು ದಂಡೆತ್ತಿ ಬಂದಾಗ ತೋರಿದ ಶೌರ್ಯವೇನು? ಸ್ಟಾಲಿನ್ ಶಿಷ್ಯನಲ್ಲ, ಮಿತ್ರನಲ್ಲ, ತನ್ನ ಬಲಗೈ. ಜೀವಕ್ಕೆ ಅಂಟಿಕೊಂಡ ಇನ್ನೊಂದು ಜೀವವಿಶೇಷ ಎಂದೆನ್ನಿಸಿತು ಲೆನಿನ್‌ನಿಗೆ. ಎಲ್ಲಿಲ್ಲದ ಮಮತೆ ಹುಟ್ಟಿತು ಆತನ ಮೇಲೆ. ದಿನಂಪ್ರತಿ ಆಸ್ಪತ್ರೆಗೆ ಬಂದು ಸ್ಟಾಲಿನ್ನನ

ಯೋಗಕ್ಷೇಮವನ್ನು ವಿಚಾರಿಸುತ್ತಿದ್ದನು. ಲೆನಿನ್ ದೈವಪ್ರಸನ್ನವಾದೊಡನೆಯೇ ಮೃತ್ಯು ಕತ್ತಲೆಯಲ್ಲಿ ಕರಗಿಹೋದಳು. ಡಾಕ್ಟರರ ಸಲಹೆಯಂತೆ ಆರೋಗ್ಯ ಸಂಪಾದಿಸಿಕೊಳ್ಳಲು ಸ್ಟಾಲಿನ್ ಜಾರ್ಜಿಯಾಕ್ಕೆ ಹೊರಟು ಹೋದನು.

## ಟ್ರಾಟ್‌ಸ್ಕಿಯ ಕನಸು

ಇದು ಟ್ರಾಟ್‌ಸ್ಕಿಯ ಮಹಿಮೆಯ ಕಾಲ. ದಿವಸಕ್ಕೊಂದು ಕಡೆ ಸೇನೆಯ ಕವಾಯಿತು. ಟ್ರಾಟ್‌ಸ್ಕಿ ಶ್ವೇತಾಶ್ವವನ್ನೇರಿ ಈ ಸೈನಿಕರನ್ನು ಉದ್ದೇಶಿಸಿ ತಾಸುಗಟ್ಟಲೆ ಗುಡುಗುಡಿಸುತ್ತಿದ್ದ. ಬಂಡವಲು ರಾಷ್ಟ್ರಗಳು ದಂಡೆತ್ತಿ ಬಂದಾಗ ದೇಶವನ್ನು ಉಳಿಸಿದವನು ತಾನೇ ಎಂದವನ ಸ್ವಪ್ರಶಂಸೆ. ಅವನ ಮೊಗಲ ಠೀವಿಯೇನು? ಅತ್ತಿಂದಿತ್ತ ಓಡಾಡಲು ಝಗಾರದ ಮೋಟಾರೇನು? ' ಎರಡನೇ ನೆಪೋಲಿಯನ್ ' ಎಂದೆನ್ನುತ್ತಿದ್ದರು ಕೆಲವರು. ಪ್ರಾಯಶಃ ನೆಪೋಲಿಯನ್‌ನಾಗುವುದು ಆತನ ಇಚ್ಛೆಯಿದ್ದಿರಲಿಕ್ಕಿಲ್ಲ; ಆದರೆ ಲೆನಿನ್‌ನ ಉತ್ತರಾಧಿಕಾರಿ ತಾನೆಂಬ ಭಾವನೆ ಮಾತ್ರ ತಲೆತುಂಬ. ಕಾಮೆನೊವ್, ಜಿನೊವಿವ್ ಮೊದಲಾದವರೆಲ್ಲ ಹುಲುಮನುಷ್ಯರು. ನಾಯಕತ್ವಕ್ಕೂ ಅವರಿಗೂ ಬಹಳ ಅಂತರ. ಯಾರಾದರೂ ಪ್ರತಿಸ್ಪರ್ಧಿಯೊಬ್ಬನಿದ್ದರೆ ಆತ ಸ್ಟಾಲಿನ್. ಸ್ಟಾಲಿನ್! ಓ! ಆ ಒರಟು ಪ್ರಾಣಿ! ಕಾಕೇಶಿಯದ ಕಲ್ಲಿನಿಂದ ಕೆತ್ತಿದ ವಿಗ್ರಹ! ಆ ಬುರುಡೆಯೊಳಗೆ ಬುದ್ಧಿಯೇನಿದೆ? ಲೆನಿನ್‌ನ ವಾರಸುದಾರ ತಾನೇ. ಎಂಬ ಭ್ರಮೆ ಆತನಿಗೆ. ಲೆನಿನ್‌ನ ಸತಿ ರೂಪಕಾ ಕೂಪಾ ಹಾಗೆಯೇ ಅರಿತಿದ್ದಳು. ಟ್ರಾಟ್‌ಸ್ಕಿಯ ಮೇಲೆ ಅವಳಿಗೆ ಅಚ್ಚುಮೆಚ್ಚು. ಆತನ ಪ್ರತಿಭೆಗೆ ಆಕೆ ಮಾರುಹೋಗಿದ್ದಾಳೆ. ಅವಳ ಮೂಲಕ ಲೆನಿನ್‌ನ ಕೃಪಾಕಟಾಕ್ಷ ಪಡೆಯಲೂ ಆತ ಯತ್ನಿಸುತ್ತಿದ್ದ.

ಇತ್ತ ಲೆನಿನ್ ನಂದಾದೀಪದ ಸೊಡರೆಣ್ಣೆ ತೀರುತ್ತ ಬಂದಿತು. ಅವನಿಗೆ ಪಕ್ಷಪಾತ. ಹಾಸಿಗೆ ಬಿಟ್ಟು ಏಳಲಾರ. ಚೇತನ ಕುಂದುತ್ತಿದೆ. ವೃದ್ಧಾಪ್ಯದಲ್ಲಿ ಮನೆ ಯಜಮಾನನು ತನ್ನ ಆಸ್ತಿಪಾಸ್ತಿ, ಬದುಕು ಭಾಗ್ಯ, ಮಕ್ಕಳುಮರಿಗಳ ಭವಿತವ್ಯವನ್ನು ಚಿಂತಿಸುವಂತೆ ಲೆನಿನ್ನನೂ ವಿಚಾರಮಗ್ನನಾದನು. ಪರಿಸ್ಥಿತಿಯನ್ನು ವಿಮರ್ಶಿಸಿದಾಗ ಆತನಿಗೆ ಕಂಡುಬಂದ ದೋಷ ಕಾರ್ಯದರ್ಶಿಯ ಕೊರತೆ. ಕ್ರೆಸ್ಕಿನಸ್ಕಿ, ಸೆರಿಬ್ರಿಯಾಕೊವ್

ಮತ್ತು ಸ್ಟಾಸೋವ್ ಬಾಲ್ಶೆವಿಕ್ ವರಿಷ್ಠ ಸಮಿತಿಯ ಕಾರ್ಯದರ್ಶಿಗಳಾಗಿ ದುಡಿಯುತ್ತಿದ್ದಾರೆ. ಆದರೆ ಇವರು ಕಾರ್ಯದರ್ಶಿಗಳೆಂದು ಹೇಳುವುದಕ್ಕಿಂತಲೂ ಕಾರಕೂನರೆಂದು ಹೇಳುವುದು ಒಲ್ಲೊಗಸು. ಏಕೆಂದರೆ ಇವರು ನಾಮ ಮಾತ್ರ. ಎಲ್ಲವನ್ನೂ ಲೆನಿನ್ ತಾನೇ ನಿರ್ವಹಿಸುತ್ತಿದ್ದ. ಆದರೆ ತಾನು ಕಣ್ಮುಚ್ಚಿದ ಮೇಲೆ ಸಮರ್ಥನಾದ ಸವ್ಯಸಾಚಿಯೊಬ್ಬ ಅವಶ್ಯ. ಆ ಸ್ಥಾನಕ್ಕೆ ಅರ್ಹರಾರು ? ಲೆನಿನ್‌ನ ದೃಷ್ಟಿ ಒಮ್ಮೆ ಟ್ರಾಟ್‌ಸ್ಕಿ ಮತ್ತೊಮ್ಮೆ ಸ್ಟಾಲಿನ್ ಇವರಿಬ್ಬರ ಮೇಲೆ ಬಿದ್ದಿತು. ಟ್ರಾಟ್‌ಸ್ಕಿ ಕಾರ್ಯದರ್ಶಿಯೆಂದರೆ ಮೂಗು ಮುರಿದುಕೊಳ್ಳುವವ. ಅದು ಗೌರವಸ್ಥಾನವಲ್ಲವೆಂದವನ ತಿಳುವಳಿಕೆ. ಲೆನಿನ್‌ನ ಪಟ್ಟ ತನಗೇ ದೊರೆಯುವ ಸಂಭವವಿದ್ದಾಗ ತಾನು ಕಾರ್ಯದರ್ಶಿಯಾಗುವುದೇ ? ಆಗದು. ಕೊನೆಗೆ ೧೯೨೨ರಲ್ಲಿ ಸ್ಟಾಲಿನ್ ಕಮ್ಯುನಿಸ್ಟ್ ವರಿಷ್ಠ ಸಮಿತಿಯ ಕಾರ್ಯದರ್ಶಿಯಾಗಿ ನೇಮಿಸಲ್ಪಟ್ಟನು.

**ಕಾರ್ಯದರ್ಶಿ**

ವರಿಷ್ಠ ಸಮಿತಿ ಕಾರ್ಯದರ್ಶಿಯ ಸ್ಥಾನಮಾನ ದೊಡ್ಡದು; ಮಹತ್ತ್ವವಾದುದು. ಕಮ್ಯುನಿಸ್ಟ್ ಪಕ್ಷದಿಂದ ಈ ವರಿಷ್ಠ ಸಮಿತಿಯು ಆರಿಸಲ್ಪಡುತ್ತಿದೆ. ವರಿಷ್ಠಸಮಿತಿಯ ಕೆಲವು ಸದಸ್ಯರನ್ನೇ ಮಂತ್ರಿಗಳನ್ನಾಗಿ ನೇಮಿಸುವರು. ಪಕ್ಷದ, ಸರಕಾರದ ಮಾರ್ಗದರ್ಶಕ ಸಂಸ್ಥೆಯಿದು. ದೇಶದ ಸರ್ವಾಧಿಕಾರವೂ ಅದರ ಅಧೀನ. ಆದುದರಿಂದ ಆದರ ಕಾರ್ಯದರ್ಶಿ ಹೆಚ್ಚು ಕಡಿಮೆ ಸರ್ವಾಧಿಕಾರಿಯೆಂದೇ ಹೇಳಬಹುದು. ಸ್ಟಾಲಿನ್ನನ ಸ್ಥಾನ ಭದ್ರವಾಯಿತು. ಟ್ರಾಟ್‌ಸ್ಕಿಗೆ ಹೇಳಿದ—'ಹಿಂದೆ ಆದುದು ಆಗಿಹೋಯಿತು. ಇನ್ನಾದರೂ ಮಿತ್ರರಂತೆ ರೆಕ್ಕೆಗೆ ರೆಕ್ಕೆ ಹಚ್ಚಿ ಹಾರೋಣ.' ಸ್ಟಾಲಿನ್ನನ ಈ ಸಲಿಗೆಯ ಮಾತು ಬಾಣದಂತೆ ನೆಟ್ಟಿತು ಟ್ರಾಟ್‌ಸ್ಕಿಗೆ. 'ಅವನು ಮುಂದೆ ಬಂದಂತೆ ನಾನು ಒಂದೊಂದೇ ಹೆಜ್ಜೆ ಹಿಂದೆ ಸರಿದೆ'—ಎಂದೆನ್ನುತ್ತಾನೆ ಟ್ರಾಟ್‌ಸ್ಕಿ ತನ್ನ ಆತ್ಮಚರಿತೆಯಲ್ಲಿ. ಪುನಃ ಟ್ರಾಟ್‌ಸ್ಕಿ ತಿರಸ್ಕಾರ ಸೂಚಿಸಿದುದು ಸ್ಟಾಲಿನ್ನನಲ್ಲಿದ್ದ ದ್ವೇಷಾಗ್ನಿಯನ್ನು ಭುಗ್ಗೆಂದು ಪ್ರಜ್ವಲಿಸಿತು. ಕದನಕ್ಕೆ ಅವನು ಸಿದ್ಧನಾದ. ಕಮ್ಯುನಿಸ್ಟ್ ಪಕ್ಷದ ಸದಸ್ಯರ ಪಟ್ಟಿಯನ್ನು ತಿರುವಿ ಹಾಕಿದನು. ಯಾರು ಕಟ್ಟಾ ಬಾಲ್ಶೆವಿಕರು, ಯಾರು ಮೆನ್ಶೆವಿಕರು, ಟ್ರಾಟ್‌ಸ್ಕಿಗೆ ಬೆಂಬಲ ಕೊಡುವವರು ಯಾರು ಎಂಬುದೆಲ್ಲ ಅವನಿಗೆ ತಿಳಿದು

ಬಂದಿತು. ತನ್ನ ಮಾತನ್ನು ವಿರೋಧದವರಾರೆಂಬುದೂ ಅವನಿಗೆ ಗೊತ್ತು. ಕ್ರಾಂತಿಯ ಕಾಲದಲ್ಲಿ, ಅಂತಃಕಲಹ ವೇಳೆಯಲ್ಲಿ ಆತ ಸಾಕಷ್ಟು ದೇಶ ಪಾದ್ಯಂತ ಸಂಚರಿಸಿದ್ದ. ಮುಖ್ಯ ಮುಖ್ಯ ಸ್ಥಳಗಳಿಗೆಲ್ಲ ಸಂಘವಾದಿ ತರುಣರನ್ನು ತಂದು ಕುಳ್ಳಿರಿಸಿದ. ಟ್ರಾಟ್‌ಸ್ಕಿಯ ಕೀಲುಗಳು ಒಂದೊಂದೇ ಜಾರಿದುವು. ಝಾರ್ ಕಾಲದ ಅಧಿಕಾರಿಗಳು ಒಬ್ಬೊಬ್ಬರಾಗಿ ಉರುಳಿದರು. ಗಾಳಿ ಯಾವ ಕಡೆಯಿಂದ ಬೀಸುತ್ತಿದೆಯೆಂಬುದನ್ನರಿತ ಕಾಮೆನೋವ್, ಜಿನೋವಿವ್ ಮೊದಲಾದವರು ಸ್ಟಾಲಿನ್ನನ ಬಲೆಯಲ್ಲಿ ಸಿಕ್ಕಿಬಿದ್ದರು. ಟ್ರಾಟ್-ಸ್ಕಿಯ ವಿರುದ್ಧ ಇವರೂ ಕೈಯೆತ್ತಿದರು. ಟ್ರಾಟ್‌ಸ್ಕಿಯ ಮೇಲೆ ಇವರಿಗೆ ಸ್ವಲ್ಪ ಹಾಗೆ ಹಾಗೆ. ಆತನ ಅಧಿಕಾರದ ವಾಣಿ ಲೆನಿನ್‌ನ ಹಕ್ಕುದಾರನೆಂಬ ಗರ್ವ ಇವೆಲ್ಲ ಅವರಿಗೆ ರುಚಿಸುತ್ತಿರಲಿಲ್ಲ. ಜುಟ್ಟಿಗೆ ಜುಟ್ಟು ಗಂಟಿಕ್ಕುವ ಸ್ಟಾಲಿನ್ನನ ಚಾಣಕ್ಯನೀತಿ ಸಫಲವಾಯಿತು.

ಕುಂಭಕರ್ಣನಂತೆ ಇಷ್ಟು ದೀರ್ಘಕಾಲ ನಿದ್ರೆಹೋದ ಟ್ರಾಟ್‌ಸ್ಕಿ ಒಮ್ಮೆಯೇ ಎದ್ದು ಆರ್ಭಟಿಸತೊಡಗಿದನು. ಸ್ಟಾಲಿನನನ್ನು ಈ ಸ್ಥಾನದಿಂದ ತಳ್ಳಿಹಾಕದೇ ಇದ್ದರೆ, ಗಂಡಾಂತರ ಖಂಡಿತವೆಂದು ಅವನಿಗೆ ಖಚಿತವಾಯಿತು. ಅದೇ ಕಾಲಕ್ಕೆ ಸರಿಯಾಗಿ ಸ್ಟಾಲಿನ್ ಜಾರ್ಜಿಯಾಕ್ಕೆ ತೆರಳಿದುದನ್ನು ನೋಡಿ ಟ್ರಾಟ್‌ಸ್ಕಿ ಅವನ ವಿರುದ್ಧ ಅಪಪ್ರಚಾರಕ್ಕಾರಂಭಿಸಿದ. ಲೆನಿನ್‌ನ ಹಾಸಿಗೆಯ ಬಳಿ ಸೇರಿ ಚಾಡಿ ಹೇಳತೊಡಗಿದನು. ಅಂತಃಕಲಹದ ಕಾಲದಲ್ಲಿ ಸ್ಟಾಲಿನ್ ನಿರಪರಾಧಿ ಜನರ ಕೊಲೆಗೈದನೆಂದು ಆರೋಪ ಹೊರಿಸಿದ. ರೂಪಕಾ ಕೂಡಾ ಬೆಂಕಿಗೆ ತುಪ್ಪವನ್ನೆರೆದಳಂತೆ. ಲೆನಿನ್ ಅರ್ಧಾಂಗವಾಯುವಿನಿಂದ ನರಳುತ್ತಿದ್ದನು. ಸ್ಮರಣಶಕ್ತಿ ಕುಗ್ಗುತ್ತಾ ಬರುತ್ತಿದೆ. ಟ್ರಾಟ್‌ಸ್ಕಿಯ ಮಾತನ್ನು ನಂಬಿ ಸ್ಟಾಲಿನ್ನನ ನಿರ್ದಯ ವರ್ತನೆ ಖಂಡಿಸಿ ಪತ್ರ ಬರೆದನಂತೆ. ಇಷ್ಟರಿಂದಲೂ ಟ್ರಾಟ್‌ಸ್ಕಿ ತೃಪ್ತನಾಗದೆ, ಸ್ಟಾಲಿನ್ನನ ವಿರುದ್ಧ ಶಿಸ್ತುಭಂಗ ಕಾರ್ಯಕ್ರಮ ಕೈಕೊಳ್ಳುವಂತೆ ಪಕ್ಷದ ಸಭೆಯಲ್ಲಿ ಗೊತ್ತುವಳಿ ಮಂಡಿಸಲು ಕಾಮೆನೋವ್‌ನನ್ನು ಕಾಕೇಶಿಯಕ್ಕೆ ಅಟ್ಟಿದನು. ಕಾಕೇಶಿಯದಲ್ಲಿ ಸ್ಟಾಲಿನ್ ಕೈಕೊಂಡಿದ್ದ 'ಅತ್ಯಾಚಾರ'ದ ವರದಿಗಳನ್ನು ಟ್ರಾಟ್‌ಸ್ಕಿ ಒದಗಿಸಿದ. ಆದರೆ ಕಾಮೆನೋವ್ ವಿಚಾರಣೆ ನಡೆಸಿ, ಸ್ಟಾಲಿನ್ನನ ನೀತಿ-ರೀತಿಯನ್ನು ಸಮರ್ಥಿಸಿದನು.

## ಲೆನಿನ್‌ನ ಮರಣ

೧೯೨೪ ಜನವರಿ ೨೧ನೇ ತಾರೀಖಿನ ದಿನ ಲೆನಿನ್ ಇಹಲೋಕದ ಜೀವನಯಾತ್ರೆ ಮುಗಿಸಿದನು. ಆಕಾಶವೇ ಕಳಚಿಬಿದ್ದಂತಾಯಿತು ರಶಿಯನರಿಗೆ. ಲೆನಿನ್‌ನ ಮೇಲಿನ ಪ್ರೀತಿ, ಭಕ್ತಿಯು ರೂಪವನ್ನೆ ತಳೆದಿತ್ತು; ಅವನ ದೇಹವನ್ನು ಮಣ್ಣುಪಾಲು ಮಾಡಲೂ ಅವರು ಸಿದ್ಧರಿಲ್ಲ; ಆ ಜಡ ಕಳೇಬರದ ಮೇಲೂ ಪೂಜ್ಯಭಾವವುಂಟಾಗಿದೆ. ರೆಡ್ ಸ್ಕ್ವೇರ್‌ದಲ್ಲೊಂದು ದೊಡ್ಡ ಸ್ಮಾರಕ ಕಟ್ಟಿ ಅದರೊಳಗೆ ಗಾಜಿನ ಪೆಟ್ಟಿಗೆಯಲ್ಲಿ ಲೆನಿನ್‌ನ ಶವವನ್ನು ಕಾಪಾಡಿಟ್ಟಿದ್ದಾರೆ. ಶವ ಕೊಳೆತು ಹೋಗದಂತೆ ಅದಕ್ಕೆ ಸುಗಂಧ ಲೇಪನ ಮಾಡಿರುವರು. ಲೆನಿನ್‌ನ ದರ್ಶನಕ್ಕಾಗಿ ಬರುವ ಜನರಿಗೆ ಕಡಿಮೆಯಿಲ್ಲ. ದೇಶವಿದೇಶಗಳಿಂದ ಮಂದಿ ಪರಸೆಕಟ್ಟಿಕೊಂಡು ಬರುತ್ತಿರುವರು. ರಶಿಯನರಿಗಂತೂ ಅದೊಂದು ಯಾತ್ರಾಸ್ಥಳವಾಗಿದೆ. ಗಾಜಿನ ಪೆಟ್ಟಿಗೆಯೊಳಗೆ ನಿದ್ದೆ ಮಾಡುತ್ತಿರುವಂತೆ ಕಾಣುತ್ತಿದೆ ಆ ಪುರುಷಸಿಂಹ. ಯಾವ ಗಳಿಗೆಯಲ್ಲಿ ಎದ್ದು ಗುಡುಗುಡಿಸುವನೋ ಏನೋ ಎಂಬ ಹಾಗೆ ಕಾಣುತ್ತಿದೆ.

ಲೆನಿನ್ ಪರಲೋಕವಾಸಿಯಾದಾಗ ಟ್ರಾಟ್‌ಸ್ಕಿ ಮಾಸ್ಕೋದಲ್ಲಿ ಇರಲಿಲ್ಲ. ಸಕ್ಕುಂ ಆರೋಗ್ಯಧಾಮದಲ್ಲಿ ವಿಶ್ರಾಂತಿ ಪಡೆಯುತಿದ್ದನು. ಸ್ಟಾಲಿನ್ ಅವನಿಗೊಂದು ತಂತಿ ಕಳಿಸಿ ಈ ಶೋಕವಾರ್ತೆಯನ್ನು ತಿಳಿಸಿದನು. ಕೂಡಲೇ ಹೊರಟು ಬಾ ಎನಲಿಲ್ಲ. ಆರೋಗ್ಯ ಸುಧಾರಿಸಿಕೋ ಎಂದ. ಟ್ರಾಟ್‌ಸ್ಕಿ ಅದರಂತೆ ಅಲ್ಲೇ ಉಳಿದನು. ಭಾಗ್ಯಲಕ್ಷ್ಮಿ ಬಂದು ಬಾಗಿಲು ತಟ್ಟಿದಾಗ ಟ್ರಾಟ್‌ಸ್ಕಿ ಅಗಳಿ ತೆಗೆಯಲಿಲ್ಲ. ಲೆನಿನ್ ಮೃತ್ಯುಪತ್ರದಲ್ಲಿ ಉತ್ತರಾಧಿಕಾರಿಯ ಸ್ಥಳಕ್ಕೆ ತನ್ನನ್ನು ಸೂಚಿಸಿರಬೇಕೆಂದು ಅವನು ಮನಸಿನಲ್ಲೇ ಮಂಡಿಗೆ ತಿನ್ನುತಿದ್ದನು.

## ಲೆನಿನ್‌ನ ಮೃತ್ಯುಪತ್ರ

ಲೆನಿನ್ ತನ್ನ ಮೃತ್ಯುಪತ್ರದಲ್ಲಿ ಮುಂದಿನ ನಾಯಕನು ಯಾರಾಗಬೇಕೆಂಬುದನ್ನು ಬರೆದಿರಲಿಲ್ಲ. ಅವನ ಮೃತ್ಯುಪತ್ರವು ಸಮಕಾಲೀನರ ಜಾತಕದಂತಿತ್ತು. ಅವರ ಗುಣಲಕ್ಷಣಗಳ ರನ್ನಗನ್ನಡಿ. ಅದನ್ನು ನೋಡಿದ ಬಾಲ್ಶೆವಿಕ್ ಮುಖಂಡರು ತಂತಮ್ಮ ವಿಚಿತ್ರ ಪ್ರತಿಬಿಂಬವನ್ನು ಕಂಡರು; ನೊಂದುಕೊಂಡರು. ಬಾಲ್ಶೆವಿಕ್ ವರಿಷ್ಠಸಮಿತಿಯಲ್ಲಿ ಕಾಮೆನೆವ್ ಈ ಮೃತ್ಯು-

ಪತ್ರವನ್ನು ಓದಿದನು. 'ಸ್ಟಾಲಿನ್ ಮತ್ತು ಟ್ರಾಟ್‌ಸ್ಕಿ ಪಕ್ಷದಲ್ಲಿರುವವರಲ್ಲಿ ಅತಿ ಸಮರ್ಥರು' ಎಂದು ಲೆನಿನ್ ಆರಂಭಿಸಿ ಆಮೇಲೆ ಒಬ್ಬೊಬ್ಬರನ್ನೇ ತನ್ನ ಅನುಭವದ ಒರೆಗಲ್ಲಿಗೆ ತಿಕ್ಕಿ ತೇದಿದ್ದನು. ಸ್ಟಾಲಿನ್ ಒರಟನೆಂದೇ ಅವನ ಅಭಿಪ್ರಾಯ. ಕಾರ್ಯದರ್ಶಿಯ ಸ್ಥಾನದಿಂದ ಅವನನ್ನು ಕಿತ್ತೊಸೆದರೆ ಒಳಿತೆಂದೂ ಬರೆದಿದ್ದನಂತೆ! ಆದರೆ ಸಂಘವಾದದ ಮೇಲೆ ಅವನಿಗಿದ್ದ ಶ್ರದ್ಧೆಯನ್ನು ಪ್ರಶಂಸಿಸಿದ್ದ. ಟ್ರಾಟ್‌ಸ್ಕಿಯ ಪ್ರತಿಭೆಗೆ ಲೆನಿನ್‌ನು ಮೆಚ್ಚಿಕೆಯ ನಾಲ್ಕು ಮಾತುಗಳನ್ನಾಡಿರುವನು. ಆತ ಜಾಣನಿ. ಆದರೆ ಮಹಾಗರ್ವಿ. ಬಾಲ್ಶೆವಿಕ್ ಪಂಥಕ್ಕೆ ಸೇರಿದವನಲ್ಲ ಎಂದು ಕೊನೆಗೆ ಟೀಕಿಸಿರುವನು. ಎಲ್ಲಾ ಬಣ್ಣಗಳನ್ನು ಮಸಿನುಂಗಿಕೊಂಬಂತೆ ಕೊನೆಯ ವಾಕ್ಯವೊಂದೇ ಟ್ರಾಟ್‌ಸ್ಕಿಯ ಅಧಃಪತನಕ್ಕೆ ಸ್ವಲ್ಪಮಟ್ಟಿಗೆ ಕಾರಣವಾಯಿತು. ತನ್ನ ಮೇಲೆ ಲೆನಿನ್‌ನಿಗೆ ವಿಶ್ವಾಸವಿರಲಿಲ್ಲವೆಂಬುದನ್ನು ಟ್ರಾಟ್‌ಸ್ಕಿ ತನ್ನ ಆತ್ಮಕಥೆಯಲ್ಲಿ ಹೇಗಳಿದಿದ್ದಾನೆ. ತಾನೊಬ್ಬನೇ ಆತನ ಗೌರವಕ್ಕೂ ನಂಬಿಗೆಗೂ ಪಾತ್ರನಾಗಿದ್ದೆನೆಂದು ಹೇಳಿರುವನು. ಇದರ ಸಿದ್ಧಾಂತ ತಿಳಿಯುವುದು ಕಷ್ಟವಾಗಿದೆ. ಮೃತ್ಯು ಪತ್ರವನ್ನು ಓದಿದ ಮೇಲೆ ಎಲ್ಲರ ಒಪ್ಪಿಗೆಯಿಂದ ಅದನ್ನು ಹರಿದೊಗೆದರು.

ಸ್ಟಾಲಿನ್ನನನ್ನು ಕಾರ್ಯದರ್ಶಿಯ ಸ್ಥಾನದಿಂದ ತಳ್ಳಿಹಾಕುವುದು ಸೂಗನೆಂದು ಲೆನಿನ್ ಬರೆದಿದ್ದನೆಂದೇ ಊಹಿಸೋಣ! ಅದನ್ನು ಕಾರ್ಯರೂಪದಲ್ಲಿ ತರಲು ಟ್ರಾಟ್‌ಸ್ಕಿ ಒತ್ತಾಯಮಾಡಲಿಲ್ಲವೇಕೋ ತಿಳಿಯದಾಗಿದೆ. ಈ ಸಂದರ್ಭವನ್ನು ಅವನು ಕಳೆದುಕೊಂಡನು. ಇದು ಅಸಾಧ್ಯವೆಂದು ಸುಮ್ಮನಿದ್ದನೇ? ಯಾವುದೂ ಅರ್ಥವಾಗುವುದಿಲ್ಲ. ೧೩ನೆಯ ಅಧಿವೇಶನ ಕೂಡಿದಾಗ ಈ ಹೊಣೆ ತನ್ನ ಮೇಲೆ ಹೊರಿಸಬೇಡಿರೆಂದು ಸ್ಟಾಲಿನ್‌ನೇ ಸೂಚಿಸಿದ್ದನು. ಸ್ಟಾಲಿನ್‌ನಿಗೆ ಅಂದೇ ಎಳುಕೆರೆಯ ನೀರುಕುಡಿಸಿಬಿಡಬಹುದಾಗಿತ್ತು. ಆದರೆ ಟ್ರಾಟ್‌ಸ್ಕಿ ಆ ರೀತಿ ಮಾಡಲಿಲ್ಲ. ಹೊರಗಿಂದ ಸ್ಟಾಲಿನ್ನನ ಬೆನ್ನು ಚಪ್ಪರಿಸುತ್ತಿದ್ದ. ಒಳಗಿಂದೊಳಗೆ ಕತ್ತಿಯಿರಿಯಲು ಯೋಚಿಸಿದ. ಸ್ಟಾಲಿನ್ನನ ಧೋರಣ ಲೆನಿನ್ ವಾದಕ್ಕೆ ಅವನು ಕಟ್ಟಿದ ಅರ್ಥ ಮೊದಲಾದವುಗಳನ್ನು ಕಡುತರವಾಗಿ ಟೀಕಿಸಿ ಪತ್ರಿಕೆಗಳಲ್ಲಿ ಬರೆಯತೊಡಗಿದನು. ಲೆನಿನ್‌ನ ನೂತನ ಆರ್ಥಿಕ ಧೋರಣ, ಜಾಗತಿಕ ಕ್ರಾಂತಿ ಮೊದಲಾದವುಗಳ ವಿಷಯದಲ್ಲಿ ಇವರೀರ್ವರಲ್ಲಿ ತಾತ್ವಿಕ ಘರ್ಷಣೆಯಾಗತೊಡಗಿತು.

## ಸೈನಿಕ ಸಂಘವಾದ

ಸೋವಿಯೆಟ್ ಸರಕಾರವು ಸ್ಥಾಪಿಸಲ್ಪಟ್ಟ ಮೇಲೆ ಭೂಪ್ರಶ್ನೆಯನ್ನು ಒಮ್ಮೆಯೇ ತೃಪ್ತಿಕರವಾಗಿ ಪರಿಹರಿಸಲು ಬಾಲ್ಶೆವಿಕರಿಗೆ ಸಮಯಾವಕಾಶ ದೊರೆಯಲಿಲ್ಲ. ಬಂಡವಲುಗಾರರು ದಂಡೆತ್ತಿ ಬಂದುದರಿಂದ ಅವರ ಯೋಜನೆಗೆ ವಿಘ್ನವೊದಗಿತು. ಆಗ ಒಂದು ರೀತಿಯ ಸೈನಿಕ ಸಂಘವಾದಕ್ಕೆ (War communism) ಮೇಲ್ಗೈಯಾಯಿತು. ಕಾಳು-ಕಡಿಯ ಬದಲು ರೈತರಿಗೆ ಒಕ್ಕಲತನದ ಉಪಕರಣಗಳನ್ನು ಕೊಡುವುದಾಗಿ ಸಾರಿ ಮಾಡಿಕೊಂಡಿದ್ದರು. ಆದರೆ ಯುದ್ಧವು ಪರಾಕಾಷ್ಠೆಗೆ ಮುಟ್ಟಿದಂತೆ ಈ ಕರಾರನ್ನು ಪಾಲಿಸಲಾಗಲಿಲ್ಲ. ಕಾರ್ಖಾನೆಗಳಲ್ಲಿ ಮದ್ದು ಗುಂಡು ಮತ್ತು ಶಸ್ತ್ರಾಸ್ತ್ರಗಳ ಉತ್ಪಾದನೆಗೇ ಹೆಚ್ಚಿನ ಪ್ರಾಧಾನ್ಯತೆ ಕೊಡಬೇಕಾಗಿದ್ದಿತು. ರೈತ ಕುಟುಂಬಕ್ಕೆ ಅವಶ್ಯವಿದ್ದುದಕ್ಕಿಂತ ಹೆಚ್ಚಿನ ಕಾಳು-ಕಡಿಯನ್ನು ಸರಕಾರವು ಕೇಳಿ ತೆಗೆದುಕೊಂಡಿತು. ಈ ರೀತಿ ಸರಕಾರವು ಎಲ್ಲ ಉಳಿಕೆ ಆಹಾರವನ್ನು ಸಂಪಾದಿಸುತ್ತಿರುವುದನ್ನು ರೈತರು ಕಂಡು ಅಸಮಾಧಾನಗೊಂಡರು. ವಿರೋಧಿಸಿಯೂ ವಿರೋಧಿಸಿದರು. ಅಧಿಕ ಬೆಲೆ ದೊರೆವ ಸಂಭವವಿದ್ದಾಗ ಅದನ್ನು ಕಳೆದುಕೊಂಡೆವೆಂಬ ಹಳಹಳಿ ಅವರಿಗೆ. ಅದು ಏನೇ ಇರಲಿ, ಪ್ರತಿಕ್ರಾಂತಿಯ ಬಡಿದಾಟವಿರುವ ವರೆಗೆ ವೈಯಕ್ತಿಕ ವ್ಯಾಪಾರ ವ್ಯವಹಾರಗಳೆಲ್ಲ ನಿಂತು ಹೋದುವು. ಉಳಿಕೆ ಕಾಳು-ಕಡಿ ಸರಕಾರದ ಕೈಸೇರಿತು. ಸೈನಿಕರಿಗೂ ಕಾರ್ಖಾನೆಗಳಲ್ಲಿ ದುಡಿಯುವ ಕೂಲಿಕಾರರಿಗೂ ಅವರು ಹಂಚಿಕೊಟ್ಟರು. ಇತ್ತ ಅದೇ ಕಾಲದಲ್ಲಿ ಸೈನಿಕ ಸಂಘವಾದ ನೀತಿಯನ್ನು ವಿರೋಧಿಸಿದವರನ್ನೆಲ್ಲ ನಿರ್ದಯದಿಂದ ಮೆಟ್ಟತೊಡಗಿದರು. ದೊಡ್ಡ ದೊಡ್ಡ ಜಮೀನುದಾರರ ಆಸ್ತಿಪಾಸ್ತಿಗಳನ್ನೆಲ್ಲ ರಾಷ್ಟ್ರೀಕರಣ ಮಾಡಿದರು. ಕಳ್ಳತನದಿಂದ ವ್ಯಾಪಾರ ನಡೆಸಿದವರನ್ನೂ ಲಾಭಬಡಕರನ್ನೂ ಅಪ್ಪಳಿಸಿದರು. ಒಂದು ರೀತಿಯ ದಂಡಿನ ಆಡಳಿತೆ ದೇಶದಲ್ಲಿ ನಡೆಯಿತೆಂದು ಹೇಳಲಡ್ಡಿಯಿಲ್ಲ.

## ನೂತನ ಆರ್ಥಿಕ ಧೋರಣ

ಯುದ್ಧ ನಡೆವಷ್ಟು ಕಾಲ ಇದು ಚಂದವಾಗಿ ನಡೆಯಿತು. ಆದರೆ ಅದು ಕೊನೆಗಂಡ ಮೇಲೆ ದುಷ್ಪರಿಣಾಮಗಳ ಬೆಳೆ ಬಂದುದು ಕಾಣಿಸಿತು.

ವೈಯ್ಯಕ್ತಿಕ ವ್ಯಾಪಾರ ವ್ಯವಹಾರಕ್ಕೆ ತಡೆಯಿದ್ದುದರಿಂದ ಅಧಿಕ ಕಾಳು ಕಡಿ ಬೆಳೆಸಿ ಮಾಡುವುದಾದರೂ ಏನು ? ರೈತರು ಈ ರೀತಿ ಯೋಚಿಸಿ ತಮಗೆಷ್ಟು ಬೇಕೋ ಅಷ್ಟೇ ಬತ್ತ ಬೆಳಸಿಕೊಂಡರು. ಯುದ್ಧವು ನಿಂತುದುದರಿಂದ ಕಾರ್ಖಾನೆಗಳು ಮುಚ್ಚಲ್ಪಟ್ಟವು. ದೇಶದ ಉತ್ಪಾದನೆ ಯುದ್ಧ ಪೂರ್ವಕ್ಕಿಂತ ಒಂದೈದನೇ ಅಂಶಕ್ಕೆ ಇಳಿಯಿತು. ಎಲ್ಲಿ ನೋಡಿದರೂ ನಿರುದ್ಯೋಗ. ಆಹಾರವಸ್ತುಗಳ ಅಭಾವ. ದೇಶದ ಆರ್ಥಿಕ ಕಟ್ಟಡವೇ ಕುಸಿದು ಬೀಳುವುದೋ ಏನೋ ಎಂಬ ಭೀತಿ ಹುಟ್ಟಿತು ಲೆನಿನ್‌ಗೆ. ಆತ ಮೊದಲಿನ ಧೋರಣಕ್ಕೆ ತಿಲಾಂಜಲಿ ಎರೆದು ರೈತರಿಗೆ ಉಳಿಕೆ ಕಾಳು-ಕಡಿಗಳನ್ನು ಮಾರಾಟ ಮಾಡಲು ಅಪ್ಪಣೆ ಕೊಟ್ಟ. ಇದರಿಂದ ಖಾಸಗಿ ವ್ಯಾಪಾರ ವ್ಯವಹಾರದ ದಾರಿ ತೆರೆದಂತಾಯಿತು. ಅಂಗಡಿಗಳು ಒಂದೊಂದಾಗಿ ತೆರೆದುವು. ದಲಾಲಿಗಳು ಜರಿ ರುಮಾಲು ಸುತ್ತಿ ತಿರುಗಿದರು. ಬಂಡವಲುಗಾರರು ಚಿಕ್ಕ ಚಿಕ್ಕ ಕೈಗಾರಿಕೆಗಳನ್ನು ಸ್ಥಾಪಿಸಿದರು. ಆಮದು, ರಫ್ತು ಯಥಾಪ್ರಕಾರ ನಿರಾತಂಕವಾಗಿ ಸಾಗಿತು. ವ್ಯಕ್ತಿ ಒಡೆತನಕ್ಕೆ ಪ್ರೋತ್ಸಾಹ ವನ್ನಿತ್ತ ಲೆನಿನ್ನನ ಈ 'ನೂತನ ಆರ್ಥಿಕ ಧೋರಣ' (Nep) ಸಾಮ್ಯವಾದದ ತತ್ವಧ್ಯೇಯಗಳಿಗೆಲ್ಲ ತೀರ ವಿರುದ್ಧವಾದುದು. ಇದು ಬಾಲ್ಶೆವಿಕರಿಗೆ ದೊರೆತ ಹಿನ್ನಡೆಯೂ ಹೌದು. ಇದನ್ನು ಕಂಡು ಅನೇಕರು ಆತನನ್ನು ಟೀಕಿಸತೊಡಗಿದರು. ಸಾಮ್ಯವಾದೀ ಸಮಾಜ ರಚನೆ ಬರಿ ಮರುಳೆಂದರು. ಲೆನಿನ್ ಹೇಳಿದ. 'ಒಮ್ಮೆಯೇ ಸಾಮ್ಯವಾದೀ ಸಮಾಜ ರಚನೆಗೆ ದುಡುಕುವುದು ಆತ್ಮಹತ್ಯೆಯೇ ಸರಿ. ಎರಡು ಮೆಟ್ಟಲು ಮುಂದೆ ಜಿಗಿಯುವುದಕ್ಕಾಗಿ ಒಂದು ಹೆಜ್ಜೆ ಹಿಂದಿಟ್ಟಿದ್ದೇನೆ. ಜನತೆ, ವ್ಯಕ್ತಿ ಒಡೆತನದ ನಿರ್ಮೂಲಕ್ಕಾಗಲೀ ರಾಷ್ಟ್ರೀಕರಣಕ್ಕಾಗಲೀ ವಿರೋಧಿಗಳಲ್ಲ. ಆದರೆ ಅವರಲ್ಲಿ ಅಜ್ಞಾನವಿದೆ. ಅದುದರಿಂದ ಹಿನ್ನಡೆಯಾಗಿದೆ '—ಬಾಲ್ಶೆವಿಕ್ ಪಕ್ಷದಲ್ಲೇ ಅನೇಕರು ಆತನ ನೀತಿಯನ್ನು ಸಮರ್ಥಿಸಲಿಲ್ಲ. ಆದರೂ ಲೆನಿನ್‌ನ ವ್ಯಕ್ತಿತ್ವ, ಜನರ ಮೇಲೆ ಆತನಿಗಿದ್ದ ವರ್ಚಸ್ಸು ರಶಿಯವನ್ನು ಉಳಿಸಿತು. ಆತನು ಕಣ್ಮುಚ್ಚಿದ ಒಳಿಕ ಒಂದು ದೇಶದಲ್ಲಿ ಸಾಮ್ಯವಾದೀ ಸಮಾಜರಚನೆಯು ಶಕ್ಯವೇ ಎಂಬ ಪ್ರಶ್ನೆ ತಲೆಯೆತ್ತಿತು. ಕಮ್ಯುನಿಸ್ಟ್ ಪಕ್ಷದ ಹಿರಿಯರಲ್ಲಿ ಭಿನ್ನಾಭಿಪ್ರಾಯಗಳೆದ್ದುವು. ಸ್ಟಾಲಿನ್ 'ಸಾಧ್ಯ' ವೆಂದರೆ, ಟ್ರಾಟ್‌ಸ್ಕಿ 'ಇಲ್ಲ' ವೆಂದ.

ಮೊದಲು ಜಾಗತಿಕ ಕ್ರಾಂತಿ ಆವಶ್ಯವೆಂದು ಅವನ ವಾದ. ಇದು ಹೊಸ ಹಾಡೇನೂ ಅಲ್ಲ. ೧೯೦೫ರಲ್ಲಿ ಅವನು ಪ್ರತಿಪಾದಿಸಿದ. ಶಾಶ್ವತ ಕ್ರಾಂತಿ-ವಾದದ ಇನ್ನೊಂದು ರೂಪ. ಅಷ್ಟೆ.

**ಶಾಶ್ವತ ಕ್ರಾಂತಿವಾದ**

'ಅಕ್ಟೋಬರ ೧೯೦೫ರಲ್ಲಿ ಈ ವಿಚಾರಗಳು ನನಗೆ ಹೊಳೆದುವು. ಶಾಶ್ವತ ಕ್ರಾಂತಿವಾದವು ಒಂದು ಒಗಟಲ್ಲ. ಸರಳ ಸೂತ್ರ..ಜನಸಾಮಾನ್ಯರ ಪ್ರಭುತ್ವವು ಸ್ಥಾಪಿಸಲ್ಪಡದೆ ಯಾವ ಸಮಸ್ಯೆಯೂ ನಿವಾರಣೆಯಾಗದು. ಜನಸಾಮಾನ್ಯರು ತಮ್ಮ ಪ್ರಯತ್ನದ ಫಲವನ್ನುಣ್ಣಬೇಕಾದರೆ, ಆರಂಭದಲ್ಲೇ ಜಮೀನ್ದಾರರ, ಮಾಂಡಲಿಕರ ಮತ್ತು ಶ್ರೀಮಂತರ ಆಸ್ತಿಪಾಸ್ತಿಯನ್ನು ಆಕ್ರಮಿಸಬೇಕಾಗುವುದು. ಹಾಗೆ ಮಾಡಿದಾಗ, ಶ್ರೀಮಂತ ವರ್ಗ ಮಾತ್ರವಲ್ಲ, ರೈತರ ವಿರೋಧ ಸಂಘರ್ಷಣೆಯುಂಟಾಗುವುದು ನಿಶ್ಚಯ. ಆದುದರಿಂದ ರೈತರು ಬಹು ಸಂಖ್ಯಾಕರಾಗಿರುವ ಒಂದು ದೇಶದಲ್ಲಿ ಕೂಲಿಕಾರ ಸರಕಾರಕ್ಕೆಯಶ ದೊರೆಯಬೇಕಾದರೆ ಜಾಗತಿಕ ಕ್ರಾಂತಿಯು ಅವಶ್ಯವಾಗಿದೆ '—ಎಂದು ಟ್ರಾಟ್‌ಸ್ಕಿ ತನ್ನ ಗ್ರಂಥದಲ್ಲಿ ಬರೆದಿದ್ದನು. ದೊಡ್ಡ ದೊಡ್ಡ ಜಮೀನ್ದಾರರಿಂದ ಹಿಡಿದು ಸಾಮಾನ್ಯ ರೈತರ ವರೆಗೆ ಎಲ್ಲರೂ ಸಾಮ್ಯವಾದದ ಹಗೆಗಳೆಂದು ಟ್ರಾಟ್‌ಸ್ಕಿಯ ನಂಬಿಗೆ. ಈ ತರ್ಕದ ಆಧಾರದ ಮೇಲೆ ಆತ ಗಾಳಿಗೋಪುರ ಕಟ್ಟಿರುವನು. ಜನಸಾಮಾನ್ಯರು ಸಾಮ್ಯವಾದೀ ರಚನೆಗೆ ತೊಡಗಿದಾಗ ರೈತರಿಗೂ ಅವರಿಗೂ ಒಡಿದಾಟ ಅನಿವಾರ್ಯ. ರಶಿಯದಕೂಲಿಕಾರರು ಅಬಲರು. ರೈತರು ಬಹುಸಂಖ್ಯಾಕರಾಗಿರುವುದರಿಂದ ಅವರು ಸಮರ್ಥರು. ರೈತರ ವಿರೋಧವನ್ನು ನದೆಬಡೆಯಲು ಕೂಲಿಕಾರರಿಂದಾಗದು. ಔದ್ಯೋಗಿಕ ಪ್ರಗತಿ ಹೊಂದಿದ ಪಶ್ಚಿಮ ದೇಶಗಳಲ್ಲಿ ಕ್ರಾಂತಿಯಾಗಿ, ಅಲ್ಲಿಯ ಕೂಲಿಕಾರರು ಸಾಮ್ಯವಾದೀ ರಾಷ್ಟ್ರ ಕಟ್ಟಿ, ರಶಿಯದ ಪ್ರತಿಕೂಲ ರೈತರ ಮೋಳೆ ಮುರಿಯಲು ರಶಿಯನ್ ಕೂಲಿಕಾರರಿಗೆ ಬೆಂಬಲ ಕೊಡಬೇಕು. ಇಲ್ಲದೇ ಇದ್ದರೆ ರಶಿಯದಲ್ಲಿ ಸಾಮ್ಯವಾದೀ ಸಮಾಜ ರಚನೆ ಅಶಕ್ಯ. ಇವಿಷ್ಟು ಅವನ ವಾದದ ತಿರುಳು.

ಸ್ಟಾಲಿನ್ ಇದನ್ನು ನಖಶಿಖಾಂತವಾಗಿ ವಿರೋಧಿಸಿದ. ಅವನು ತಾನೇ ಟ್ರಾಟ್‌ಸ್ಕಿಯ ವಾಗ್ಜಾಲವನ್ನು ಸೋಲಿಸಲು ಯತ್ನಿಸಲಿಲ್ಲ. ಲೆನಿ–

ನ್‌ನ ಗ್ರಂಥಗಳನ್ನೇ ಟ್ರಾಟ್‌ಸ್ಕಿಯು ಇದಿರು ಪ್ರದರ್ಶಿಸಿದನು. 'ಕೂಲಿಕಾರ ಮತ್ತು ರೈತ ಜನಸಾಮಾನ್ಯರ ಬಾಂಧವ್ಯದಿಂದಲೇ ಜನತಾ ಪ್ರಭುತ್ವವು ಕಟ್ಟಲ್ಪಟ್ಟಿದೆ. ಬಂಡವಲು ಪದ್ಧತಿಯ ನಿರ್ಮೂಲ ಮಾಡುವ ಪವಿತ್ರ ಉದ್ದೇಶದಿಂದ ಈ ಬಾಂಧವ್ಯ ಹೆಣೆದುಕೊಂಡಿದೆ; ಹಳೇ ವ್ಯವಸ್ಥೆಯನ್ನು ಪುನಃಸ್ಥಾಪಿಸಲೆತ್ನಿಸುವ ಬಂಡವಲುಗಾರರನ್ನು ಮುರಿಯುವುದು ಮತ್ತು ಸಾಮ್ಯವಾದ ಸಮಾಜ ರಚಿಸಿ ಕಾಪಾಡಿಕೊಳ್ಳುವುದೂ ಅದರ ಗೊತ್ತುಗುರಿ'—ಎಂದೆನ್ನುತ್ತಾನೆ ಲೆನಿನ್. ಕೂಲಿಕಾರ ಮತ್ತು ರೈತ ಜನಸಾಮಾನ್ಯರಲ್ಲಿ ಘರ್ಷಣೆಯಾಗುವುದೆಂದು ಟ್ರಾಟ್‌ಸ್ಕಿಯ ಅಭಿಮತ. ಲೆನಿನ್ ಅವರೀರ್ವರಲ್ಲಿ ಮಧುರ ಬಾಂಧವ್ಯ ಕಂಡಿರುವನು. ಜಾಗತಿಕ ಕ್ರಾಂತಿಯಿಂದ ರಶಿಯಕ್ಕೆ ಬಲಬರುವದೆಂದು ಟ್ರಾಟ್‌ಸ್ಕಿಯ ಮತವು. ರಶಿಯದ ಕೂಲಿಕಾರ ಮತ್ತು ರೈತರ ಶಕ್ತಿಯೇ ಜನತಾಪ್ರಭುತ್ವದ ಶಕ್ತಿಯೆಂದು ಲೆನಿನ್‌ನ ಅಭಿಮತ. ಇನ್ನು ಜಾಗತಿಕ ಕ್ರಾಂತಿಯಾಗದೆ ಒಂದು ದೇಶದಲ್ಲಿ ಕೂಲಿಕಾರ ಸರಕಾರಕ್ಕೆ ಯಶ ದೊರೆಯದು (ಅರ್ಥಾತ್ ಸಾಮ್ಯವಾದೀ ಸಮಾಜ ರಚನೆಯು ಸಫಲವಾಗದು) ಎಂದು ಟ್ರಾಟ್‌ಸ್ಕಿ ಆಡಿದ ಮಾತುಗಳನ್ನು ಲೆನಿನ್‌ನ ಸಿದ್ಧಾಂತದ ಒರೆಗಲ್ಲಿನಿಂದ ಹಚ್ಚಿ ನೋಡೋಣ. ಲೆನಿನ್ ಹೀಗೆ ಹೇಳುತ್ತಾನೆ—'ಬಂಡವಲು ರಾಷ್ಟ್ರಗಳ ಬೆಳವಣಿಗೆಯಾದಂತೆ ಒಂದನ್ನು ಇನ್ನೊಂದು ಹಿಂದೆಹಾಕುವುದು. ವಸಾಹತು ದಬ್ಬಾಳಿಕೆಯಿಂದ ಸಾಮ್ರಾಜ್ಯಗಳು ತಲೆಯೆತ್ತಿ ಬದುಕುವವು. ಸಾಮ್ರಾಜ್ಯಶಾಹಿಯು ಒಂದು ಜಾಗತಿಕ ವ್ಯವಸ್ಥೆಯ ಸ್ವರೂಪವನ್ನೇ ಧರಿಸುವುದು. ಆದರೆ ಈ ಸಾಮ್ರಾಜ್ಯಶಾಹಿಗಳೊಳಗೆ ಮೇಲಾಟ, ಬಡಿದಾಟ ತಪ್ಪದು. ದಬ್ಬಾಳಿಕೆ, ಆರ್ಥಿಕ ಶೋಷಣೆ, ಪ್ರತಿಸ್ಪರ್ಧಿಗಳೊಡನೆ ತಿಕ್ಕಾಟ ಇವುಗಳಿಂದ ಜಾಗತಿಕ ಸಾಮ್ರಾಜ್ಯಶಾಹೀ ಕಟ್ಟು ಸಡಿಲಾಗಿ ಅದು ದುರ್ಬಲವಿದ್ದಲ್ಲಿ ಗಲಭೆಯಾಗಿ, ಕ್ರಾಂತಿಗೆ ಅವಕಾಶ ದೊರೆಯುತ್ತದೆ. ಆದುದರಿಂದ ಒಂದು ದೇಶದಲ್ಲಿ ಸಾಮ್ಯವಾದದ ವಿಜಯ ಸಾಧ್ಯ. ಈ ದೇಶವು ಬೆಳವಣಿಗೆ ಹೊಂದಿದ ಬಂಡವಲು ದೇಶವೇ ಆಗಬೇಕಾಗಿಲ್ಲ.... ಆರ್ಥಿಕ ಮತ್ತು ರಾಜಕೀಯ ಬೆಳವಣಿಗೆಗಳಲ್ಲಿ ವ್ಯತ್ಯಾಸವುಂಟಾಗುವುದು ಬಂಡವಲು ಪದ್ಧತಿಯ ಗುಣಲಕ್ಷಣ. ಆದುದರಿಂದ ಅನೇಕ ರಾಷ್ಟ್ರಗಳಲ್ಲಿ ಅಥವಾ ಒಂದು ವಿಶಿಷ್ಟ ದೇಶದಲ್ಲಿ ಸಾಮ್ಯವಾದಕ್ಕೆ ವಿಜಯ

ದೊರೆಯಲು ಶಕ್ಯವಿದೆ'—ಲೆನಿನ್ ಆಡಿದುದು ಸರಿ, ಟ್ರಾಟ್‌ಸ್ಕಿಯ ವಾದಕ್ಕೆ ಬೆನ್ನೆಲುಬು ಇಲ್ಲೆಂಬುದಕ್ಕೆ ಅಕ್ಟೋಬರ ಕ್ರಾಂತಿಯೇ ಸಾಕ್ಷಿ.

**ಜಾಗತಿಕ ಕ್ರಾಂತಿ**

ಆದರೆ ಅಕ್ಟೋಬರ ಕ್ರಾಂತಿಯಿಂದಲೂ ಟ್ರಾಟ್‌ಸ್ಕಿ ಪಾಠ ಕಲಿಯಲಿಲ್ಲ. ೧೯೩೨ರಲ್ಲಿ ಪುನರ್ಮುದ್ರಿಸಲ್ಪಟ್ಟ 'ಶಾಂತಿಯೋಜನೆ' ಯೆಂಬ ಪುಸ್ತಕದಲ್ಲಿ ಅವನು ಬರೆಯುತ್ತಾನೆ—'ಪ್ರತ್ಯೇಕ ಒಂದು ದೇಶದಲ್ಲಿ ಕ್ರಾಂತಿಯನ್ನು ಪರಿಪೂರ್ಣತೆಗೆ ಮುಟ್ಟಿಸುವುದು (ಅರ್ಥಾತ್ ಸಾಮ್ಯವಾದೀ ಸಮಾಜ ರಚಿಸುವುದು) ಅಶಕ್ಯವೆಂದು ಹೇಳಿದುದು ೫ ವರುಷಗಳ ಸೋವಿಯೆಟ್ ಪ್ರಭುತ್ವದಿಂದ ತಪ್ಪಾಗಿ ಕಾಣಬಹುದು. ಆದರೆ ಅಂತಹ ಅಭಿಪ್ರಾಯಕ್ಕೆ ಆಧಾರವಿಲ್ಲ. ಅಧಿಕಾರವನ್ನು ನಾವು ಕಾಪಾಡಿಕೊಳ್ಳಲು ಶಕ್ತರಾಗಿರುವೆವಾದರೂ ನಾವು ಸಾಮ್ಯವಾದೀ ಸಮಾಜ ರಚನೆ ಆರಂಭಿಸಿಲ್ಲ.. ಯುರೋಪದ ಮುಖ್ಯ ಮುಖ್ಯ ದೇಶಗಳಲ್ಲಿರುವ ಜನಸಾಮಾನ್ಯರಿಗೆ ವಿಜಯ ದೊರೆತರೆ ಮಾತ್ರ ರಶಿಯದಲ್ಲಿ ಸಾಮ್ಯವಾದೀ ಸಮಾಜ ವ್ಯವಸ್ಥೆಯು ಸಾಧ್ಯ'—ಟ್ರಾಟ್‌ಸ್ಕಿ 'ಶಾಂತಿಯೋಜನೆ' ಯಲ್ಲಿ ಆಡಿದ ನುಡಿಗಳೂ ನೂತನವಾದುದಲ್ಲ. ಶಾಶ್ವತ ಕ್ರಾಂತಿವಾದವನ್ನೇ ಅವನು ಪುನಃ ಪ್ರತಿಪಾದಿಸಿರುವನು. ಜಾಗತಿಕ ಕ್ರಾಂತಿಯಿಂದಲೇ ಮೋಕ್ಷವೆಂದವನ ನಂಬಿಗೆ. ಆದರೆ ಲೆನಿನ್‌ನನ್ನು ಸಮಾಧಾನಪಡಿಸಲು ಆತನಿಂದಾಗಲಿಲ್ಲ. 'ಉತ್ಪಾದನೆಯ ಸಾಧನಗಳು ರಾಷ್ಟ್ರದ ಸ್ವಾಮಿತ್ವಕ್ಕೆ ಒಳಗಾಗಿವೆ. ಅಧಿಕಾರ ಜನತೆಯ ಹಸ್ತಗತವಾಗಿದೆ. ಕೂಲಿಕಾರ ಮತ್ತು ರೈತ ಜನಸಾಮಾನ್ಯರೊಳಗೆ ನಿಕಟ ಬಾಂಧವ್ಯವುಂಟು. ಸಾಮ್ಯವಾದೀ ಸಮಾಜರಚನೆಗೆ ಇವು ಸಾಲವೆ? ಸಾಕು' ಎಂದು ಅವನು ಘೋಷಿಸಿದ್ದ.

ಹೀಗಿರುವಾಗ 'ಜಾಗತಿಕ ಕ್ರಾಂತಿ! ಜಾಗತಿಕ ಕ್ರಾಂತಿ'ಎಂದನ್ನುವುದರಲ್ಲಿ ಏನರ್ಥವಿದೆ? ಯುರೋಪದ ಮುಖ್ಯ ಮುಖ್ಯ ದೇಶಗಳಲ್ಲಿ ಕ್ರಾಂತಿಯೇಳಲು ಬಹಳ ಕಾಲ ಹಿಡಿಯಿತೆನ್ನೋಣ. ಅಷ್ಟರ ವರೆಗೆ ರಶಿಯದಲ್ಲಿ ಅಸ್ತಿತ್ವಕ್ಕೆ ಬಂದಿರುವ ಜನತಾ ಪ್ರಭುತ್ವದ ಸ್ಥಿತಿಗತಿಯೇನು? ಕುಂಬಳಕಾಯಂತೆ ಕೊಳೆಯಬೇಕೆ? ಯುರೋಪದಲ್ಲಿ ಕ್ರಾಂತಿಯೇ ಆಗಲಿಲ್ಲ! ಆಗ? ರಶಿಯದ ಬಾಲ್ಶೆವಿಕರು ಸಾಮ್ಯವಾದೀ ಸಮಾಜರಚನೆಗೆ ತಿಲಾಂಜಲಿ ಎರೆಯ

ಬೇಕೆ ? ಈ ಆಕ್ಷೇಪಣೆಗಳಿಗೆಲ್ಲ ಟ್ರಾಟ್‌ಸ್ಕಿಯ ಉತ್ತರವಿಲ್ಲವೆಂದು ಸ್ಟಾಲಿನ್ ಟೀಕಿಸಿದ್ದಾನೆ.

ಸೋವಿಯೆಟ್ ರಾಜ್ಯದಲ್ಲಿ ಸಾಮ್ಯವಾದೀ ಸಮಾಜವು ನಿರ್ಮಾಣ ಮಾಡಲ್ಪಟ್ಟರೆ ಇನ್ನಿತರ ದೇಶಗಳ ಜನಸಾಮಾನ್ಯರಿಗೆ ಹೊಸ ಬಲ ಬರುವುದು. ಜಾಗತಿಕ ಕ್ರಾಂತಿಗೆ ಅದೇ ದೊಡ್ಡ ಪ್ರೋತ್ಸಾಹ. ರಶಿಯಾದೇಶದ ಮಹಾಕ್ರಾಂತಿಯು ಜಾಗತಿಕ ಮಹಾಕ್ರಾಂತಿಯ ಒಂದಂಗ; ಜಾಗತಿಕ ಕ್ರಾಂತಿಗೆ ಹಾಕಿದ ತಳಹದಿ. ಆದುದರಿಂದ ಮೊದಲು ತಮ್ಮ ಮನೆಯನ್ನು ಸರ್ವಾಂಗ ಸುಂದರವಾಗಿ ಕಟ್ಟೋಣವೆಂದ ಸ್ಟಾಲಿನ್, ಬಾಲ್ಶೆವಿಕ್ ಪಕ್ಷದಲ್ಲಿ ಹಲವು ವರುಷಗಳವರೆಗೆ ಈ ವಿವಾದ, ಚರ್ಚೆ, ಟೀಕಾಟೀಕೆಗಳಾದ ಮೇಲೆ ಕೊನೆಗೆ ೧೯೨೭ರಲ್ಲಿ ಮತಗಣನೆ ಮಾಡಲು ನಿರ್ಧರಿಸಿದರು. ಪಕ್ಷದಲ್ಲಿ ಟ್ರಾಟ್‌ಸ್ಕಿಗೆ ೪ ಸಾವಿರ ಮತಗಳು ಮಾತ್ರ ದೊರೆತುವು. ಸಭೆಗೆ ಗೈರುಹಾಜರಿ ಇದ್ದವರ ಮತವೂ ಅವನ ಕಡೆಗೇ ಇತ್ತೆಂದು ಲೆಕ್ಕ ಹಾಕಿದರೂ ಅವನಿಗೆ ಬೆಂಬಲ ಕೊಡುವವರ ಸಂಖ್ಯೆ ೧೨ ಸಾವಿರಕ್ಕೆ ಏರುವುದಿಲ್ಲ. ಆದರೆ ಸ್ಟಾಲಿನ್‌ನಿಗೆ ೭೨೪೦೦೦ ಮತಗಳು ದೊರೆತುವು. ಟ್ರಾಟ್‌ಸ್ಕಿಗೆ ಮಹತ್ವದ ಅಪಜಯವುಂಟಾಯಿತು.

**ಅಧಃಪತನ**

ಸ್ಟಾಲಿನ್‌ನೊಡನೆ ಹೂಡಿದ ಯುದ್ಧದಲ್ಲಿ ಟ್ರಾಟ್‌ಸ್ಕಿಯ ಕಾಲು ಜಾರುತ್ತಲಿದೆ. ಯುದ್ಧಮಂತ್ರಿಯ ಬದಲು ವಿದೇಶೀಯರಿಗೆ ಸೌಕರ್ಯವನ್ನೊದಗಿಸುವ ಖಾತೆಯಲ್ಲಿ ಚಿಲ್ಲರೆ ಕೆಲಸ ಅವನ ಪಾಲಿಗೆ ಬಂತು. ಸೋಲಿನ ಮೇಲೆ ಸೋಲು. ಆದರೂ ಆತ ಅದನ್ನು ಒಪ್ಪಿಕೊಳ್ಳಲಾರ. ೧೯೨೭ರಲ್ಲಿ ಲೆನಿನ್‌ಗ್ರಾಡದಿಂದ ಹಿಡಿದು ಮಾಸ್ಕೋ ನಗರದ ವರೆಗೆ ಟ್ರಾಟ್‌ಸ್ಕಿಯ ಅನುಚರರು ಸಭೆ, ಮೆರವಣಿಗೆ ಹೂಡಿದರು. ಎಲ್ಲೆಲ್ಲಿ ನೋಡಿದರೂ ಸ್ಟಾಲಿನ್ನನ ರಾಜ್ಯಾಡಳಿತೆಯ ವಿರುದ್ಧ ಮತಪ್ರದರ್ಶನ! ಕಾಮೆನೊವ್, ಜಿನೊವಿವ್ ಮೊದಲಾದವರೂ ಬಣ್ಣ ಬದಲಾಯಿಸಿ ಟ್ರಾಟ್‌ಸ್ಕಿಗೆ ಬೆಂಬಲವಿತ್ತರು. ತಮಗೆ ಉನ್ನತಸ್ಥಾನ ದೊರೆಯಲಿಲ್ಲವೆಂದು ಖತಿಗೊಂಡ ಇವರೀರ್ವರೂ ಸ್ಟಾಲಿನ್ನನ ವಿರುದ್ಧಪಕ್ಷ ಸೇರಿದರು. ಟ್ರಾಟ್‌ಸ್ಕಿಯ ದೂರದೃಷ್ಟಿಯೇನು ? ಅಂತರರಾಷ್ಟ್ರೀಯ ಮನೋವೃತ್ತಿಯೇನು ? ಟ್ರಾಟ್‌ಸ್ಕಿಯೇ ಅವರಿಗೆ ಪರ-

ಬ್ರಹ್ಮನಾಗಿ ಕಂಡ. ಇವರೆಲ್ಲ ಕೂಡಿ ಸ್ಟಾಲಿನ್ನನ ವಿರುದ್ಧ ತಮ್ಮ ಪಕ್ಷವೊಂದನ್ನು ಕಟ್ಟಲು ಒಳಸಂಚು ನಡೆಸಿದರು. ಸ್ಟಾಲಿನ್ನನ ಸಹನೆ ಮೀರಿ ಬಂತು. ೧೯೩೭ನೆಯ ಕಾಂಗ್ರೆಸ್ಸಿನಲ್ಲಿ ಟ್ರಾಟಸ್ಕಿ ಮತ್ತು ಅವನ ಸಂಗಡಿಗರು ಬಾಲ್ಶೆವಿಕ್ ಪಕ್ಷದಿಂದ ತಳ್ಳಿಹಾಕಲ್ಪಟ್ಟರು. ಕ್ರಾಂತಿಯ ವೈರಿಗಳೆಂದು ಅವರ ಮೇಲೆ ಮುದ್ರೆ ಬಿದ್ದಿತು. ಇನ್ನಾರಾದರೂ ಆಗುತಿದ್ದರೆ ಅಂದೇ ಗುಂಡಿಗಾಹುತಿಯಾಗುತಿದ್ದರೋ ಏನೋ? ಟ್ರಾಟಸ್ಕಿಗೆ ಆ ಗತಿಬರದಗ ಲಿಲ್ಲ. ಅವನೂ ಜನಪ್ರೀತನಾದ ಮುಖಂಡ. ದೇಶದಲ್ಲಿ ಪ್ರಭಾವವೂ ಉಂಟು. ಆದುದರಿಂದ ೩ ಸಾವಿರ ಮೈಲು ದೂರವಿದ್ದ ಸ್ಥಳಕ್ಕೆ ಗಡೀಪಾರುಮಾಡಲಾಯಿತು. ಅಲ್ಲಿ ತೆರಳಿದ ಮೇಲೂ ಟ್ರಾಟಸ್ಕಿ ಸ್ಟಾಲಿನ್ನನ ವಿರುದ್ಧ ಜನರನ್ನು ಹುರಿದುಂಬಿಸಲೆತ್ನಿಸಿದ. ಕೊನೆಗೆ ೧೯೨೯ರಲ್ಲಿ ದೇಶದಿಂದಲೇ ಅವನನ್ನು ಹೊರಗೆ ದಬ್ಬಿದರು. ಆ ದೇಶ ಈ ದೇಶ ಸುತ್ತಿ ಎಲ್ಲಿಯೂ ವಾಸಿಸಲು ಅನುಮತಿ ದೊರೆಯದೆ ಕಡೆಗೆ ಮೆಕ್ಸಿಕೋ ದೇಶದಲ್ಲಿ ಆಶ್ರಯಪಡೆದನು.

### ಟ್ರಾಟ್‌ಸ್ಕಿ ಮತ್ತು ಸ್ಟಾಲಿನ್

ಸ್ಟಾಲಿನ್ ಮತ್ತು ಟ್ರಾಟ್‌ಸ್ಕಿ ಕಲಹಕ್ಕೆ ತಾತ್ವಿಕ ಘರ್ಷಣೆ, ಅಧಿಕಾರದ ಹಂಬಲ, ವೈಯಕ್ತಿಕ ದ್ವೇಷಾಸೂಯೆ ಮೊದಲಾದ ಅನೇಕ ಕಾರಣಗಳುಂಟು. ಆದರೆ ಎಲ್ಲಕ್ಕಿಂತಲೂ ಮುಖ್ಯ ಅವರೀರ್ವರ ಪರಸ್ಪರ ವಿರುದ್ಧ ಗುಣ ಸ್ವಭಾವ. ಟ್ರಾಟ್‌ಸ್ಕಿ ತೋಳವಿದ್ದಂತೆ. ಕಲಹಪ್ರಿಯ, ಉದ್ವೇಗಿ. ಭಾವನಾಪ್ರಧಾನಜೀವಿ. ಅಭಿಮಾನಿ, ಅಹಂಕಾರಿ ಆಡಂಬರ ಪ್ರಿಯ. ಗಾಳಿಯ ಕೋಳಿ. ಮಳೆ ಬಂದತ್ತ ಕೊಡೆ ಹಿಡಿಯುವ ಚಂಚಲ ಸ್ವಭಾವ; ಅನೇಕ ಬಾರಿ ಲೆನಿನ್‌ನೊಡನೆಯೇ ಬಡಿದಾಡಿದನು. ಇದರಿಂದ ಅವನ ಸಮಾನಸ್ಕಂಧರಿಗೆ ಟ್ರಾಟ್‌ಸ್ಕಿಯ ಮೇಲೆ ತಿರಸ್ಕಾರವುಂಟಾಯಿತು. ಲೆನಿನ್‌ನ ಮೇಲೆ ಆದರವಿದ್ದವರ (ಅಂತಹವರು ಬಹಳ ಮಂದಿ) ವಿರೋಧ ಕಟ್ಟಿಕೊಂಡ. ಝಾರ್ ಅಧಿಕಾರಿಗಳಿಗೆ ನೌಕರಿ ದೊರಕಿಸಿ ಕೊಡಲೆತ್ನಿಸಿದುದರಿಂದ ಹೆಚ್ಚುಕಡಿಮೆ ಉಗ್ರಗಾಮಿಗಳಾದ ಬಾಲ್ಶೆವಿಕರೂ ಝಾರನೆಂದರೆ ಹರಿದು ತಿನ್ನುವೆನೆನ್ನುತಿದ್ದ ನವ ತರುಣ ತರುಣಿಯರೂ ಟ್ರಾಟ್‌ಸ್ಕಿಯಿಂದ ದೂರ ಸರಿದರು. ಸವಜನಾಂಗದ ವಿಶ್ವಾಸವನ್ನು ಆತ ಕಳೆದುಕೊಂಡುದುದು

ದೊಡ್ಡ ತಪ್ಪು. ಸ್ಟಾಲಿನ್ ಹಾಗಲ್ಲ. ಅವನು ಕಟ್ಟಾ ಬಾಲ್ಶೆವಿಕ್. ಆದರಿಂದ ಆ ಪಂಥದವರೆಲ್ಲರ ಮತ ಅವನಿಗೇ. ಬಂಡವಲುಗಾರರು ದಂಡೆತ್ತಿ ಬಂದಾಗಲೂ, ಕಾರ್ಯದರ್ಶಿಯಾದ ಮೇಲೂ ಜವಾಬ್ದಾರಿ ಸ್ಥಳಗಳಿಗೆಲ್ಲ 'ಬಿಸಿ ನೆತ್ತರದವರನ್ನೆ' ನೇಮಿಸುತ್ತಿದ್ದನು. ಝಾರ್ ಅಧಿಕಾರಿಗಳಲ್ಲಿ ಅವನಿಗೆ ವಿಶ್ವಾಸ ಕಡಿಮೆ. ಇದರಿಂದ ನವ ಜನಾಂಗಕ್ಕೆ ಅವನ ಮೇಲೆ ಆದರವುಂಟಾಯಿತು. ತಂತ್ರದಲ್ಲಿ ಚಾಣಕ್ಯನೇ. ಟ್ರಾಟ್‌ಸ್ಕಿಯ ವಿಚಾರವನ್ನು ಖಂಡಿಸಲು ಹೊರಟಾಗ 'ನಾನು ಹೀಗನ್ನುತ್ತೇನೆ' ಎಂದು ಹೇಳಲಿಲ್ಲ. ಅದರ ಬದಲು 'ಲೆನಿನ್ ಹೀಗೆಂದಿರುವನು' ಎಂದು ಉಲ್ಲೇಖಿಸುತ್ತಿದ್ದ. ಲೆನಿನ್‌ನೆಂದರೆ ಜನಾಂಗಕ್ಕೆ ಜೀವ. ಅಧಿದೈವ. ಆತನನ್ನು ವಿರೋಧಿಸುವ ಟ್ರಾಟ್‌ಸ್ಕಿಯೆಂದರೆ ಜನ ರೇಗಿದರು. ಇನ್ನು ಸ್ಟಾಲಿನ್ ಮಾತಿನಿಂದ ಕೆಡದ ಮನುಷ್ಯ. ಕರ್ಮಪ್ರಿಯ. ರಾಜಯೋಗಿಯ ಜೀವನ ನಡೆಸಿ ದೇಶದ ಉದ್ಧಾರಕ್ಕಾಗಿ ಹೋರಾಡುತ್ತಿದ್ದ. ಅವನಲ್ಲಿದ್ದ ಅಸಾಧಾರಣ ಸಂಘಟನಾಶಕ್ತಿಯೇ ಲೆನಿನ್‌ನ ವಾರಸುದಾರನಾಗುವ ಅರ್ಹತೆಯನ್ನು ತಂದುಕೊಟ್ಟಿತು. ರಶಿಯದ ಜನತೆ ಸ್ಟಾಲಿನ್‌ನ ಕೊರಳಿಗೆ ಹೂಮಾಲೆ ತೊಡಿಸಿದುದರಿಂದ ಪ್ರಮಾದವಾಗಲಿಲ್ಲ; ಕಲ್ಯಾಣವೇ ಆಯಿತು. ಮುಂದಿನ ಇತಿಹಾಸ ಅದಕ್ಕೆ ಸಾಕ್ಷಿಯಾಗಿದೆ.

---

## ರಾಷ್ಟ್ರನಿರ್ಮಾಣ

ಮಾನವನ ಕೀರ್ತಿ ಉಳಿಯುವುದು ಅವನ ಸತ್ಕೃತಿಯಿಂದ. ಸ್ಟಾಲಿನ್ನನ ಯಶೋದುಂದುಭಿಯನ್ನು ಮೊಳಗಲು ಅವನು ಇಷ್ಟರವರೆಗೆ ಮಾಡಿದ ಕೆಲಸಗಳೇ ಸಾಕು. ಆದರೆ, ಅವನು ಕೈಕೊಂಡ ರಾಜ್ಯಪರಿಷ್ಕರಣವು ಮೊದಲಿನದೆಲ್ಲ ಕೃತಿಗಳಿಗೆ ಚಿನ್ನದ ಕಳಸವನ್ನಿಡುವಂತಹುದಾಗಿದೆ. ನೂತನ ರಾಷ್ಟ್ರನಿರ್ಮಾಣವು ಸ್ಟಾಲಿನ್ನನ ಮಹತ್ಕಾರ್ಯ. ಅವನ ಹೆಸರಿಗೆ ಅಮರತ್ವವನ್ನು ಕೊಡುವುದಾದರೂ ಅದೇ ಸರಿ. ಅವನು ಜಾರಿಗೆ ತಂದುದು ಕೆಲವು ಸುಧಾರಣೆಗಳೆಂದು ತಿಳಿದರೆ ಅದು ತಪ್ಪು. ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ನೈತಿಕ ಕ್ಷೇತ್ರಗಳಲ್ಲಿ ಆಮೂಲಾಗ್ರ ಒಡಲಾವಣೆ ಮಾಡಿರುವನು. ಅವನದು ಹೊಸ ಸೃಷ್ಟಿ. ವಿಶ್ವಾಮಿತ್ರನ ಸೃಷ್ಟಿ. ಈ ಚಿನಿವಾರ ತನ್ನ ಕುಲುಮೆಯಲ್ಲಿ ರಶಿಯದ ಜನಜೀವನವನ್ನೇ ಪುಟಕ್ಕಿಟ್ಟಿ-

ದ್ದಾನೆ. ಸ್ಫುಟಗೊಳಿಸಿದ್ದಾನೆ. ಬಂಡವಲುವಾದ, ವ್ಯಕ್ತಿ ಒಡೆತನ ಬಡತನ, ಅಜ್ಞಾನ, ರೋಗ-ರುಜೆಗಳೆಲ್ಲ ಆ ದೊಡ್ಡ ಕುಲುಮೆಯಲ್ಲಿ, ಯಜ್ಞಕುಂಡ ದಲ್ಲಿ ಸುಟ್ಟು ಬೂದಿಯಾಗಿ ಹೋಗಿವೆ. ಸಾಮ್ಯವಾದದ ಅಚ್ಚಿನಲ್ಲಿ ಜನ ಜೀವನದ ಎರಕ ಹೊಯ್ದು ಹೊಸ ಜನರಿಗೆ ರೂಪಕೊಟ್ಟಿರುವನು. ಅವರದು ಜೀವ ಹೊಸತು. ಜೀವನ ಹೊಸತು. ರಶಿಯದ ಕೋಟಿಗಟ್ಟಲೆ ಜನ ಹೊಸ ಹುಟ್ಟು ಪಡೆದಿದ್ದಾರೆ. ಅವರ ಗುಣ ಶೀಲ ಬದಲಾಗಿದೆ. ಸ್ವಾರ್ಥ ದುರಾಶೆಗಳು ಅಳಿದು, ಸ್ವಾತಂತ್ರ್ಯ, ಸರಿಸಮಾನತೆ, ಭ್ರಾತೃಭಾವದಿಂದ ಅವರು ಬಾಳಿ, ಬಾಳಿಗೆ ಬೆಳಕನ್ನು, ತಂದಿರುವರು. ಸ್ಟಾಲಿನ್ ಮಾನವೀ ಸ್ವಭಾವ ವನ್ನೇ ಬದಲಾಯಿಸಿ ಘನತೆಗೇರಿದ್ದಾನೆ.

**ಯೋಜನಾ ಮಂಡಲ**

ರಾಷ್ಟ್ರದ ಪುನರ್ರಚನೆಗಾಗಿ ೧೯೨೨ರಲ್ಲೇ ಬಾಲ್ಶೆವಿಕರು ಒಂದು ರಾಷ್ಟ್ರ ಯೋಜನಾಸಮಿತಿಯನ್ನು ರಚಿಸಿದ್ದರು. ರಶಿಯದಲ್ಲಿ ಇದಕ್ಕೆ ' ಗೋಸ್ಪ್ಲಾನ್ ' ಎಂದೆನ್ನುತ್ತಾರೆ. ದೇಶದ ಮೇಧಾವಿಗಳು, ತಜ್ಞರು ವಿಜ್ಞಾನಿಗಳು, ಇಂಜಿನಿಯರರು, ಕೂಲಿಕಾರರು ಎಲ್ಲ ಈ ಮಂಡಲದಲ್ಲಿರು ವರು. ಅವರ ಸಂಖ್ಯೆಯೂ ಒಂದೆರಡಲ್ಲ. ಸಾವಿರಗಟ್ಟಲೆ. ಯೋಜನೆ ತಜ್ಞ ರನ್ನು ಸಿದ್ಧಗೊಳಿಸಲು ಸ್ಟಾಲಿನ್ ರಶಿಯವು ಇತ್ತೀಚೆಗೆ ಪ್ರತ್ಯೇಕವಾದ ಒಂದು ವಿದ್ಯಾಲಯವನ್ನೇ ತೆರೆದಿದೆಯಂತೆ. ಆರ್ಥಿಕ, ಸಾಮಾಜಿಕ, ರಾಜ ಕೀಯ ಸುವ್ಯವಸ್ಥೆಗಾಗಿ ಇವರು ವಾರ್ಷಿಕ, ಮಾಸಿಕ ಯೋಜನೆಗಳನ್ನು ತಯಾರಿಸಿರುವರು. ಮೊಟ್ಟಮೊದಲು ದೇಶದ ಸರ್ವ ಸಂಪತ್ತಿನ ಅಂದಾಜು ಹಿಡಿಯುತ್ತಾರೆ. ಸರ್ವ ಸಂಪತ್ತು ಎಂದರೆ ಪ್ರಾಕೃತಿಕ ಸಂಪತ್ತು, ಕಾರ್ಖಾನೆಗಳು, ಜನಶಕ್ತಿ ಮೊದಲಾದವು ಬರುವವು. ಆಮೇಲೆ ಜನರ ಆವಶ್ಯಕತೆಯೆಷ್ಟಿದೆಯೆಂಬುದನ್ನು ಲೆಕ್ಕಹಾಕುತ್ತಾರೆ. ಯಾವ ಯಾವ ಕಣಿ, ಕಾರ್ಖಾನೆಗಳಲ್ಲಿ ಎಷ್ಟು ಉತ್ಪಾದನೆಯಾಗಬೇಕು, ಅವುಗಳನ್ನೆಷ್ಟು ಬೆಳೆಸಬೇಕು. ಮೊದಲಾದ ಪ್ರಮಾಣ, ಅಂಕೆ ಸಂಖ್ಯೆಯನ್ನು ಗೊತ್ತುಪಡಿ ಸುವವರೂ ಅವರೇ. ಇಷ್ಟಕ್ಕೇ ಈ ಮಂಡಲದ ಕೆಲಸ ಮುಗಿಯಲಿಲ್ಲ. ಉತ್ಪಾ ದನೆ ವಿತರಣಗಳ ಸಮನ್ವಯ, ಧನಸಹಾಯ, ಕೆಲಸದ ಪರಿಪೂರ್ಣತೆ ಮೊದ ಲಾದವುಗಳೂ ಈ ಮಂಡಲದ ಹೆಗಲಮೇಲಿರುವ ಭಾರ. ಈ ತಜ್ಞರು

ನಿರಂಕುಶವ್ಯಕ್ತಿಯಿಂದ ಯೋಜನೆಗಳನ್ನು ತಯಾರಿಸುವುದಿಲ್ಲ. ಯೋಜನೆಯ ಕರಡು ತಯಾರಿಸಿ ಪ್ರಸಿದ್ಧಗೊಳಿಸುವರು. ಗ್ರಾಮ ಸೋವಿಯೆಟದಿಂದ ಹಿಡಿದು ಸುಪ್ರೀಂ ಸೋವಿಯೆಟ (ಪಾರ್ಲಿಮೆಂಟ) ವರೆಗೆ ಅದರ ಬಗ್ಗೆ ಚರ್ಚೆ ನಡೆಯುವುದು. ಕಣ್ಣಿ, ಹೊಲಗಳಲ್ಲಿ ದುಡಿಯುವ ಕೂಲಿಕಾರರೂ ಅದನ್ನು ವಿಮರ್ಶಿಸಿ ಹೊಸ ಸೂಚನೆಗಳನ್ನು ಮಾಡುವರು. ಹೊಸ ಯೋಜನೆ ಗಳನ್ನೂ ಕಳಿಸಬಹುದಾಗಿದೆ. ಅದು ಗ್ರಾಹ್ಯ. ವಿವಿಧ ಸೋವಿಯೆಟ್‌ಗಳಿಂದ ಬಂದ ಸೂಚನೆಗಳ ಆಧಾರದ ಮೇಲೆ ಮುಖ್ಯ ಯೋಜನೆಯನ್ನು ಈ ಮಂಡಲ ದವರು ತಯಾರಿಸುವರೆಂದು ಹೇಳಿದರೂ ತಪ್ಪಾಗದು. ರಶಿಯದ ಪಂಚ ವಾರ್ಷಿಕ ಯೋಜನೆ ಈ ಮಂಡಲದ ಮಾನಸಿಕ ಶಿಶು.

**ಪಂಚವಾರ್ಷಿಕ ಯೋಜನೆ**

ರಶಿಯದ ಪಂಚವಾರ್ಷಿಕ ಯೋಜನೆಯು ಜಗದ್ವಿಖ್ಯಾತವಾದುದು. ಅಖಿಲ ರಶಿಯದ ಆರ್ಥಿಕ ಪುನರ್ವ್ಯವಸ್ಥೆಯು ಅದರ ಜೀವಾಳ. ಬಂಡ ವಲು ಪದ್ಧತಿಯ ನಿರ್ಮೂಲ ಮಾಡಿ ಸಾಮ್ಯವಾದೀ ರಾಷ್ಟ್ರವನ್ನು ಕಟ್ಟು ವುದು ಅದರ ಗೊತ್ತುಗುರಿ. ಇದನ್ನು ಸಾಧಿಸಲು ಔದ್ಯೋಗೀಕರಣ, ಸಾಮೂಹಿಕ ಒಕ್ಕಲತನ, ವಿದ್ಯಾದಾನ, ದೇಶದ ಸಂರಕ್ಷಣೆ ಮೊದಲಾದ ಅನೇಕ ವಿಭಾಗಗಳಿವೆ ಅದರಲ್ಲಿ. ರಶಿಯದ ಪಂಚವಾರ್ಷಿಕ ಯೋಜನೆಯು ಶಿವನ ಪಂಚಮುಖವಿದ್ದಂತೆ. ಒಂದೊಂದು ರೂಪಕ್ಕೂ ಅನೇಕ ಅಂಗಾಂಗ ಗಳಿರುವವು. ಕಲೆ, ಕೈಗಾರಿಕೆ, ಕೃಷಿ, ಶುಚಿ, ಆಟಪಾಟ, ಕೋಟೆ ಕೊತ್ತಲ, ಮೊದಲಾದ ನೂರಾರು, ವಿಷಯಗಳ ಕಡೆಗೂ ಗಮನವಿತ್ತಿರು ವರು. ಅದರ ಹೊಟ್ಟೆ ದೊಡ್ಡ ಬ್ರಹ್ಮಾಂಡವೇ ಸೈ. ಅದುಮುಟ್ಟದ ಗಿಡ ವಿಲ್ಲವಂತೆ. ಸ್ಟಾಲಿನ್ ಕೈಹಾಕದ ವಿಷಯವಿಲ್ಲ. ಸಂಕಲ್ಪಿತ ಕಾರ್ಯವನ್ನು ಐದು ವರುಷಗಳೊಳಗೆ ಸಿದ್ಧಿಸಬೇಕೆಂದು ನಿಶ್ಚಯಿಸಿ ಅದಕ್ಕೆ ಪಂಚವಾರ್ಷಿಕ ಯೋಜನೆಯೆಂಬ ಸುಂದರ ಹೆಸರಿಟ್ಟಿದ್ದಾರೆ. ೧೯೨೮ರಲ್ಲಿ ಮೊದಲನೆಯ ಯೋಜನೆಯು ಕಾರ್ಯರೂಪಕ್ಕೆ ಬಂದಿತು. ನಾಲ್ಕೇ ವರುಷಗಳಲ್ಲಿ ಸ್ಟಾಲಿ- ನ್ನನ ಇಷ್ಟಾರ್ಥ ಈಡೇರಿದುದರಿಂದ ೧೯೩೨ರಲ್ಲಿ ಮತ್ತೊಂದು ಯೋಜನೆ ಯನ್ನು ಆಚರಣೆಯಲ್ಲಿ ತಂದರು. ಅದು ಪರಿಪೂರ್ಣವಾದ ಮೇಲೆ ಮೂರ ನೆಯ ಯೋಜನೆಯನ್ನು ಸ್ವೀಕರಿಸಲಾಯಿತು. ಈ ಮೂರು ಯೋಜನೆ

ಗಳೂ ಒಂದರ ಮೇಲೊಂದು ಕಟ್ಟಿದ ಅಟ್ಟಳಿಕೆಗಳು. ಇವಕ್ಕೆಲ್ಲ ಔದ್ಯೋಗಿಕರಣವೇ ಅಡಿಗಲ್ಲೆಂದು ಹೇಳಬಹುದಾಗಿದೆ.

## ಔದ್ಯೋಗೀಕರಣ

### ಸೃಷ್ಟಿಸಂಪತ್ತು

ಉದ್ಯೋಗಗಳ ಬೆಳವಣಿಗೆಗೆ ರಶಿಯದಲ್ಲಿ ವಿಪುಲ ಸೃಷ್ಟಿಸಂಪತ್ತಿದೆ. ಅರಣ್ಯಗಳೇ ೬೦೦ ಮೈಲುಗಳ ವರೆಗೆ ವ್ಯಾಪಿಸಿಕೊಂಡಿರುವವು. ಈ ಅರಣ್ಯದಲ್ಲಿ ದೊರೆಯದ ಮರವಿಲ್ಲ. ವಿದ್ಯುಚ್ಛಕ್ತಿಯನ್ನು ದೊರಕಿಸಿಕೊಳ್ಳಲು ಅನೇಕ ನದಿಗಳಿರುವವು. ಕಬ್ಬಿಣ, ಕಲ್ಲಿದ್ದಲು, ಚಿನ್ನ, ಸೀಸ, ಮ್ಯಾಂಗನೀಸ ಮೊದಲಾದ ಲೋಹಗಳು ಈ ದೇಶದಲ್ಲಿ ಸಿಗುವಷ್ಟು ಇನ್ನೆಲ್ಲಿಯೂ ದೊರೆಯುವುದಿಲ್ಲ. ಉರಾಲ್‌ಪರ್ವತ ಪ್ರದೇಶವು ಕಬ್ಬಿಣದ ಬೆಟ್ಟ. ಕಾಕೇಶಿಯವು ಪೆಟ್ರೋಲ ಎಣ್ಣೆಯ ಕಾರಂಜಿ. ರಶಿಯಕ್ಕೆ ಯಾವುದಾದರೂ ಕೊರತೆಯಿದ್ದರೆ ಅದು ರಬ್ಬರ್ ಒಂದೇ. ಅದನ್ನು ನಿವಾರಿಸಿಕೊಳ್ಳಲು ಇತ್ತೀಚೆಗೆ ಕೃತಕ ರಬ್ಬರ್ ತಯಾರಿಸುತಿದ್ದಾರೆ. ಹೊಸ ಹೊಸ ರಬ್ಬರ್ ಗಿಡದ ತೋಟಗಳನ್ನು ಬೆಳೆಸಿದ್ದಾರೆ. ಸೃಷ್ಟಿಸಂಪತ್ತಿನಲ್ಲಿ ರಶಿಯವು ಕುಬೇರ ರಾಷ್ಟ್ರ. ಈಶಾನ್ಯ ದಿಕ್ಕು ಕುಬೇರನ ರಾಜ್ಯವೆಂದು ಹಿಂದುಗಳ ನಂಬಿಗೆ. ಪ್ರಾಯಶಃ ಹಿಂದೆ ರಶಿಯವು ಆ ರೀತಿ ಮೆರೆಯುತಿತ್ತೋ ಏನೋ? ಮಧ್ಯಏಶಿಯದಿಂದ ಇಳಿದು ಬಂದ ಪ್ರಾಚೀನ ಭಾರತೀಯರು ರಶಿಯವು ಕುಬೇರನ ದೇಶವೆಂದು ಕರೆದುದು ಆಶ್ಚರ್ಯವಾಗಿ ಕಾಣುವುದಿಲ್ಲ. ಆದರೆ ಮೊನ್ನೆ ಮೊನ್ನೆಯ ವರೆಗೆ ಈ ಸಂಪತ್ತು ನೆಲದಡಿ ಹಾಗೆಯೇ ಉಳಿಯಿತು. ಝಾರರ ಆಳಿಕೆಯಲ್ಲಿ ಭೂಗರ್ಭ ಸಂಶೋಧನೆಯು ಅಲ್ಪಸ್ವಲ್ಪ ನಡೆದರೂ ಸಂಪತ್ತಿನ ಉಪಯೋಗ ಮಾಡಿಕೊಂಡುದುದು ಅಷ್ಟಕಷ್ಟೆ. ಲೆನಿನ್‌ಗ್ರಾಡ್, ಮಾಸ್ಕೋ, ಯುಕ್ರೈನ್ ಮೊದಲಾದ ಕೆಲವು ಕಡೆಗಳಲ್ಲಿ ಕೆಲವು ಕೈಗಾರಿಕೆಗಳನ್ನು ಸ್ಥಾಪಿಸಿದ್ದರು. ವಿಶಾಲವಾದ ಸಾಗರದಲ್ಲಿ ಅಲ್ಲೊಂದು ಇಲ್ಲೊಂದು ಬಂಡೆಗಲ್ಲು ಇದ್ದಂತೆ ಅವುಗಳ ಸಂಖ್ಯೆ ಅಲ್ಪ. ರಶಿಯದ ಜನರ ಅವಶ್ಯಕತೆಯನ್ನು ಪೂರೈಸಲು ಆಗದು. ಅದರಿಂದ ದೇಶವು ಯಾವಾಗಲೂ ಪರರನ್ನು ಅವಲಂಬಿಸಬೇಕಿತ್ತು. ಕಚ್ಚಾಮಾಲುಗಳ ಬದಲಿಗೆ ಸಿದ್ಧವಸ್ತುಗಳನ್ನು ರಶಿಯ ತರಿಸಿಕೊಳ್ಳಹತ್ತಿತ್ತು.

ಕೊನೆಕೊನೆಗೆ ರಶಿಯವು ವಿದೇಶಿಯರ ಸಂತೆಯಾಗಿ ಮಾರ್ಪಟ್ಟಿತು. ವಿದೇಶಿ ಬಂಡವಳಗಾರರು ರಶಿಯಕ್ಕೂ ಕಾಲು ಚಾಚಿ ಕಚ್ಚಾ ಮಾಲುಗಳ ಉತ್ಪಾದನೆಗೆ ಪ್ರೋತ್ಸಾಹಿಸಿ, ಔದ್ಯೋಗೀಕರಣವನ್ನು ತಡೆದರು. ರಶಿಯವು ಯುರೋಪಿನ ರಾಷ್ಟ್ರಗಳಿಗಿಂತ ಹಿಂದುಳಿದುದು ಹೀಗೆ. ಪರಾವಲಂಬಿಯಾದುದು ಹೀಗೆಯೇ.

## ಸ್ಟಾಲಿನ್ನನ ಮಂತ್ರ

ದೇಶದ ಪುನರ್ರಚನೆಗೆ ತೊಡಗಿದಾಗ ಔದ್ಯೋಗೀಕರಣದ ಅಡಿಗಲ್ಲು ಹಾಕಬೇಕೆಂದು ಸ್ಟಾಲಿನ್ ಸಾರಿದ. ಔದ್ಯೋಗೀಕರಣವು ಅವನ ಮೋಹ ಮಂತ್ರ. ಗಾಯತ್ರಿ. ದೇಶದ ಸಂಪತ್ತನ್ನು ಹೆಚ್ಚಿಸಲು, ಜನರ ಜೀವನ ಮಟ್ಟವನ್ನು ಏರಿಸಲು ಉದ್ಯೋಗಗಳ ಬೆಳವಣಿಗೆಯೂ ಮುಖ್ಯ. ಕೃಷಿ-ಪ್ರಧಾನವಾಗಿದ್ದ ದೇಶವನ್ನು ಔದ್ಯೋಗಿಕ ರಾಷ್ಟ್ರವನ್ನಾಗಿ ಮಾಡಿ ತನ್ನ ಕಾಲ ಮೇಲೆ ನಿಲ್ಲುವಂತೆ ಮಾಡುವುದೂ ಅದರ ಹೇತು. ಒಂದೇ ಮಾತಿನಲ್ಲಿ ನುಡಿಯುವುದಿದ್ದರೆ ಆರ್ಥಿಕ ಸ್ವಾವಲಂಬನ. ದೇಶದ ರಕ್ಷಣೆಯ ದೃಷ್ಟಿಯಿಂದಲೂ ಔದ್ಯೋಗೀಕರಣವು ಅವಶ್ಯ. ದೊಡ್ಡ ದೊಡ್ಡ ಕೈಗಾರಿಕೆಗಳನ್ನು ಸ್ಥಾಪಿಸದೆ ಯಂತ್ರ, ಶಸ್ತ್ರಾಸ್ತ್ರಗಳನ್ನು ತಯಾರು ಮಾಡಲಾಗದು. ಇದನ್ನರಿತರೆ ಔದ್ಯೋಗೀಕರಣವು ಮಿಲಿಟರಿ ಬಲದ ಮೂಲವೆಂದು ಸ್ಪಷ್ಟವಾಗುತ್ತಿದೆ. ಬಂಡವಲು ಜಗತ್ತಿನ ಮಧ್ಯೆ ರಶಿಯವು ಪ್ರಾಣವುಳಿಸಿಕೊಳ್ಳಬೇಕಾದರೆ ಮಿಲಿಟರಿ ಶಕ್ತಿ ಸಂಪನ್ನ ರಾಷ್ಟ್ರವಾಗದೆ ಬೇರೆ ಗತ್ಯಂತರವಿಲ್ಲ. ಇನ್ನೊಮ್ಮೆ ಬಂಡವಲು ಜಗತ್ತು ದಂಡೆತ್ತಿ ಬಂದರೆ? ಆ ಭೀತಿ ಇದ್ದೇ ಇದೆ ಸ್ಟಾಲಿನ್ನನಿಗೆ. ಆದುದರಿಂದ ದೇಶದ ಸಂರಕ್ಷಣೆಯ ದೂರದೃಷ್ಟಿಯಿಂದಲೂ ಔದ್ಯೋಗೀಕರಣದ ಅವಶ್ಯಕತೆಯನ್ನು ಒತ್ತಿ ಹೇಳಿದನು. ಪಂಚವಾರ್ಷಿಕ ಯೋಜನೆಯು ಔದ್ಯೋಗೀಕರಣದ ತಳಹದಿಯಲ್ಲೇ ಕಟ್ಟಲ್ಪಟ್ಟಿರುವುದು.

ಔದ್ಯೋಗೀಕರಣದಲ್ಲಿ ಅನೇಕ ಶಾಖೋಪಶಾಖೆಗಳಿವೆ. ಮೋಟಾರ್, ವಿಮಾನ, ರೇಲ್ವೆ ಇಂಜಿನ್, ಟ್ರ್ಯಾಕ್ಟರ್ ಮೊದಲಾದ ದೊಡ್ಡ ದೊಡ್ಡ ಕೈಗಾರಿಕೆಗಳು ಹಾಗೂ ಚಿಕ್ಕ ಚಿಕ್ಕ ಕೈಗಾರಿಕೆಗಳು ಎಂಬ ವರ್ಗೀಕರಣ ಮಾಡಲಾಗಿರುವುದು. ಇದೆಲ್ಲ ಯೋಜನಾಬದ್ಧವಾಗಿಯೇ ಇರುವುದು. ಕೈಗಾರಿಕೆಗಳನ್ನು ಸ್ಥಾಪಿಸಿದಾಗ ಸ್ಟಾಲಿನ್ ಎರಡು ವಿಷಯಗಳ ಕಡೆ

ವಿಶೇಷ ಲಕ್ಷ್ಯ ಕೊಟ್ಟಿದ್ದಾನೆ. ಮೊದಲನೆಯದಾಗಿ ಸೃಷ್ಟಿಸಂಪತ್ತು ಎಲ್ಲಿ ದೊರೆಯುವುದೋ ಅಲ್ಲೇ ಕೈಗಾರಿಕೆಗಳನ್ನು ಸ್ಥಾಪಿಸಿದ. ಎರಡನೆಯದಾಗ ಆದಷ್ಟುಮಟ್ಟಿಗೆ ರಶಿಯದ ಒಳನಾಡಿನಲ್ಲಿ ಕಾರ್ಖಾನೆಗಳನ್ನು ತೆರೆದ. ಸ್ಟಾಲಿನ್ ಈ ರೀತಿ ಮಾಡಲು ಬಲವಾದ ಕಾರಣಗಳುಂಟು. ಝಾರ್ ರಶಿಯದಲ್ಲಿ ದೊಡ್ಡ ಕೈಗಾರಿಕೆಗಳೆಲ್ಲ ಡೊನೆಜ್, ಉಕ್ರೇನ್ ಮೊದಲಾದ ರಶಿಯದ ಪಶ್ಚಿಮ ಭಾಗಗಳಲ್ಲಿದ್ದುವು. ಪರಮಂಡಲದ ನಾಯಕರು ದಂಡೆತ್ತಿ ಬಂದೊಡನೆಯೇ ಈ ಪ್ರದೇಶವು ಶತ್ರುಪಾಲಾಯಿತು. ಯುದ್ಧದಲ್ಲಿ ಕಾರ್ಖಾನೆಗಳೇ ವಿಜಯಲಕ್ಷ್ಮಿಯ ಜೀವತಂತು. ಅದನ್ನು ಆಕ್ರಮಿಸಿದರೆ, ನಾಶಗೊಳಿಸಿದರೆ ಯಶಸ್ವಿಯುದ್ಧನಿರ್ವಹಣಕ್ಕೆ ಅನಾನುಕೂಲ. ಮದ್ದುಗುಂಡು, ಶಸ್ತ್ರಾಸ್ತ್ರಗಳಿಲ್ಲದ ಸೇನೆ ಹೋರಾಡುವುದಾದರೂ ಹೇಗೆ? ಸೋಲು ಕಟ್ಟಿಟ್ಟ ಬುತ್ತಿಯೇ ಸರಿ. ಈ ದುರ್ಗತಿ ಪ್ರಾಪ್ತವಾಗಕೂಡದೆಂದು ಸ್ಟಾಲಿನ್ನನ ಆಶೆ; ದೂರದೃಷ್ಟಿ; ಇಷ್ಟರಿಂದಲೇ ಅವನು ಪಶ್ಚಿಮ ರಶಿಯದಲ್ಲಿ ಕೈಗಾರಿಕೆಗಳ ಪುನರುಜ್ಜೀವನ ಮಾಡಲಿಲ್ಲವೆಂದರ್ಥವಲ್ಲ. ರಶಿಯದ ಔದ್ಯೋಗಿಕ ಸಂಪತ್ತಿನಲ್ಲಿ ಪಶ್ಚಿಮ ರಶಿಯಕ್ಕೆ ಅಗ್ರಸ್ಥಾನವಿದೆ. ಆದರೆ ಒಳನಾಡನ್ನು ಸ್ಟಾಲಿನ್ ಮರೆಯಲಿಲ್ಲ. ಅಂತಹ ಹೊಸ ಯತ್ನದಲ್ಲಿ ಉರಾಲ್-ಕುಜನೆಜ್ ಸಂಯೋಜನೆಯು ಮಹತ್ವವಾದುದು.

### ಉರಾಲ್-ಕುಜನೆಜ್

ದೊಡ್ಡ ದೊಡ್ಡ ಕೈಗಾರಿಕೆಗಳಲ್ಲಿ ಉರಾಲ್-ಕುಜನೆಜ್ ಸಂಯೋಜನೆಗೆ ಹಿರಿಯ ಸ್ಥಾನ. ಉರಾಲ್ ರಶಿಯದ ಹೆಸರಾದ ಪರ್ವತಾವಳಿ. ಇದರ ತಪ್ಪಲಲ್ಲಿ ಕಬ್ಬಿಣ ಯಥೇಷ್ಟವಿದೆ. ಕಾಲ ಬೆರಳಿಂದ ನೆಲವನ್ನು ತೀಡಿದರೆ ಸರಿ ಕಬ್ಬಿಣದ ಪದರುಗಳು ಏಳುವವು. ಕ್ರಾಂತಿಯ ಪೂರ್ವಕಾಲದಲ್ಲಿ ಅಲ್ಪ ಪ್ರಮಾಣದಲ್ಲಿ ಇಲ್ಲಿ ಕಬ್ಬಿಣವನ್ನು ಅಗೆಯುತ್ತಿದ್ದರು. ೬೦, ೭೦ ಮೈಲು ದೂರದಲ್ಲಿರುವ ಒಂದು ಕುಲುಮೆಗೆ ಕುದುರೆ ಬಂಡಿಗಳಲ್ಲಿ ಹೇರಿಕೊಂಡು ಹೋಗುತ್ತಿದ್ದರು. ಉರಾಲ್‌ದಲ್ಲೇ ಕುಲುಮೆ ರಚಿಸಲು ಸ್ಟಾಲಿನ್ನನ ಇಚ್ಛೆ. ಆದರೆ ಕಬ್ಬಿಣ ಕರಗಿಸುವ ಕುಲುಮೆಗೆ ಕಲ್ಲಿದ್ದಲು ಬೇಕಲ್ಲ. ಕಾರ್ಖಾನೆಗಳಿಗೆ ಕಲ್ಲಿದ್ದಲು ಮುಖ್ಯ ಆಹಾರ. ಸ್ಟಾಲಿನ್ ಚಿಂತಾತುರನಾಗಿ ಉರಾಲ್ ಕೋಡುಗಲ್ಲನ್ನೇರಿ ಸುತ್ತಲೂದಿಟ್ಟಿಸಿದ. ಆಗ ಪೂರ್ವದಲ್ಲಿ ಅವನಿಗೆ ಅಲ್ಟಾಯಿ

ಪರ್ವತ ಶಿಖರಗಳು ಕಾಣಿಸಿದುವು. ಕುಜನೆಜ್‌ದಲ್ಲಿ ಕಲ್ಲಿದ್ದಲು ಇವೆಯೆಂದರು ಭೂಗರ್ಭ ಸಂಶೋಧಕರು. ಇಡೀ ಪ್ರಪಂಚಕ್ಕೆ ೩,೦೦ ವರುಷಗಳ ವರೆಗೆ ಸಾಕಾಗುವಷ್ಟು ಕಲ್ಲಿದ್ದಲು ಇದೆಯೆಂದು ಕಂಡು ಹಿಡಿದರು. ಸರಿ. ಉರಾಲ್ ಮತ್ತು ಅಲ್ಟಾಯಿಗಳನ್ನು ಜೋಡಿಸಲು ನಿರ್ಧರಿಸಲಾಯಿತು. ಕುಜನೆಜ್‌ಗೆ ಕಬ್ಬಿಣ ಪೂರೈಸಿ, ಉರಾಲಿಗೆ ಕಲ್ಲಿದ್ದಲು ಒದಗಿಸಿ ಎರಡೂ ಕಡೆಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಅವರು ಬಯಸಿದರು. ಅದಕ್ಕನುಕೂಲವಾಗುವಂತೆ ಜೋಡು ರೇಲ್ವೆ ರಸ್ತೆ ಹಾಕಿದರು. ಒಂದರಲ್ಲಿ ಕುಜನೆಜ್‌ದಿಂದ ಉರಾಲಿಗೆ ಕಲ್ಲಿದ್ದಲು ಬರುತ್ತಿದೆ. ಇನ್ನೊಂದರಲ್ಲಿ ಕಬ್ಬಿಣ ರವಾನಿಸಲ್ಪಡುತ್ತಿದೆ. ಎರಡೂ ದೊಡ್ಡ ಔದ್ಯೋಗಿಕ ಕೇಂದ್ರಗಳಾದುವು. ಕಬ್ಬಿಣ ದೊರೆವ ಉರಾಲಲ್ಲಿ ಮಗ್ನಿಟೋಗಾರಸ್ಕ್ ನಗರ ತಲೆ ಎತ್ತಿದೆ. ಕುಜನೆಜ್‌ದ ನಾಲ್ಕು ಮೈಲು ದೂರದಲ್ಲಿ ಸ್ಟಾಲಿನ್‌ಸ್ಕ್ ನಗರ ಮೂಡಿರುವುದು. ಅತ್ಯಾಧುನಿಕ ರೀತಿಯಲ್ಲಿ ಈ ಪಟ್ಟಣಗಳನ್ನು ಕಟ್ಟಿದ್ದಾರೆ. ವಿಸ್ತಾರವಾದ ರಸ್ತೆಗಳು, ಟ್ರಾಂಕಾರುಗಳು, ಉದ್ಯಾನವನ, ನೀರಿನ ನಳ, ಶಾಲೆ, ವಿಜ್ಞಾನ ಶಾಲೆ, ಆಸ್ಪತ್ರೆ, ನಾಟಕಗೃಹ, ಸಿನೆಮಾ, ಗರಡಿಮನೆ, ಸರ್ಕಸ್ ಮೊದಲಾದುವುಗಳೆಲ್ಲ ಇವೆ ಇಲ್ಲಿ. ಒಂದೊಂದೂ ಅಮರಾವತಿ ಪಟ್ಟಣವೇನೋ ಎಂದೆನ್ನಿಸುವುದು.

ಉರಾಲ್‌ದಲ್ಲಿ ಸಿಗುವುದು ಬರಿ ಕಬ್ಬಿಣವೊಂದೇ ಅಲ್ಲ. ತಾಮ್ರ ಮೊದಲಾದ ನೂರಾರು ಲೋಹಗಳು ದೊರೆತಿವೆ. ಆದುದರಿಂದ ಪರ್ವತದ ಸಾಲಿಗೆ ಉದ್ದಕ್ಕೂ ಕಾರ್ಖಾನೆಗಳನ್ನು ರಚಿಸಿದ್ದಾರೆ. ಪ್ರತಿಯೊಂದು ಕಣಿವೆಯಲ್ಲಿ ಒಂದು ಕಾರ್ಖಾನೆಯಿದೆ. ಇದರಂತೆ ಪೂರ್ವ ಏಶಿಯದಲ್ಲಿ ಔದ್ಯೋಗಿಕ ಪ್ರಗತಿಯಾಗಿರುವುದು. ಸೈಬೀರಿಯದ ಕೊಮ್ಸೊಮೊಲ್ಸ್ಕಗೆ ಎರಡನೇ ಮಗ್ನಿಟೋಗಾರಸ್ಕ್ ಎಂದು ಹೆಸರು ಬಿದ್ದಿದೆ. ಪಂಚವಾರ್ಷಿಕ ಯೋಜನೆಗಳಲ್ಲಿ ಇಂತಹ ನೂರಾರು ಸಾಹಸೋದ್ಯಮಗಳನ್ನು ಕೈಕೊಳ್ಳಲಾಗಿರುವುದು. ಸ್ಟಾಲಿನ್‌ಸ್ಕ್ ಮೊದಲಾದವುಗಳನ್ನು ಉದಾಹರಣೆಯಾಗಿ ಕೊಡಲಾಗಿದೆ ಅಷ್ಟೆ.

**ಜೀವರಸ**

ಉದ್ಯೋಗಗಳಿಗೆ ಕಬ್ಬಿಣವು ಮೂಳೆ; ಕಲ್ಲಿದ್ದಲು ಆಹಾರ; ಪೆಟ್ರೋಲ್

ರಕುತವಿದ್ದಂತೆ ಜೀವರಸ. ಯಂತ್ರಗಳ ಎದೆಗುಂಡಿಗೆಗೆ (ಪೆಟ್ರೋಲ್ ಟಾಕಿ) ಈ ರಸವನ್ನು ಸುರಿದೊಡನೆಯೇ ಯಂತ್ರಗಳು ಉಸಿರಾಡಲುತೊಡಗುವವು. ಜಡ ಮೋಟಾರ್, ಟ್ರಾಕ್ಟರ್, ವಿಮಾನಗಳಿಗೆ ಕ್ಷಣಾರ್ಧದಲ್ಲಿ ಚೈತನ್ಯ ಬರುವುದು. ಪೆಟ್ರೋಲಿನ ಅದ್ಭುತಶಕ್ತಿ ಸಂಜೀವನದಷ್ಟು. ರಶಿಯನರು ಭಾಗ್ಯವಂತರು. ಪ್ರಕೃತಿದೇವಿ ಅವರ ರಾಜ್ಯದಲ್ಲಿ ಪ್ರಸನ್ನಳಾಗಿದ್ದಾಳೋ ಏನೋ ? ದಕ್ಷಿಣ ರಶಿಯದ ಕಾಕೇಶಿಯ ಭೂಮಿಯಡಿ ಪೆಟ್ರೋಲಿನ ನದಿಗಳೇ ಹರಿಯುತ್ತಿರುವವು. ಝಾರ್ ಕಾಲದಲ್ಲೂ ಬಾಕುಂ, ಬಾಟುಂ, ಗ್ರೋಜ್ನಿ, ನ್ಯೂಕೋಪ್ ಮೊದಲಾದ ಎಣ್ಣೆ ಕಣಿ ಆಗೆದಿದ್ದರು. ಅಖಿಲ ರಶಿಯಕ್ಕೆ ಬೇಕಾಗುವ ಎಣ್ಣೆ ಇಲ್ಲಿಂದಲೇ ಪೂರೈಸಲ್ಪಡುತಿತ್ತು. ಸ್ಟಾಲಿನ್ ರಶಿಯವು ಕಾಕೇಶಿಯದ ಸಂಪತ್ತನ್ನು ನೂರ್ಮಡಿ ಹೆಚ್ಚಿಸಿರುವುದು. ಇದರೊಂದಿಗೆ ಬೇರೆ ಎಣ್ಣೆ ಕೇಂದ್ರಗಳನ್ನೂ ಅವರು ಹುಡುಕಿದ್ದಾರೆ. ಶತ್ರುಗಳಿಂದ ಕಾಕೇಶಿಯಕ್ಕೆ ಗಂಡಾಂತರ ಬಂದಲ್ಲಿ ರಶಿಯದ ರಕುತನಾಳ ಬತ್ತಿ ಹೋಗಬಾರದೆಂದು ಸ್ಟಾಲಿನ್ನನ ವಿಚಾರ. ೧೯೪೧ರಲ್ಲಿ ಜರ್ಮನರು ಆ ರೀತಿ ಮಾಡಿದ್ದುದು ಸ್ಟಾಲಿನ್ನನ ಸ್ಮೃತಿಪಟಲದಿಂದಳಿಸಿ ಹೋಗಿಲ್ಲ. ಆ ಗತಿ ಪುನಃ ಬಾರದಂತೆ ಸ್ಟಾಲಿನ್ ಮುಂಜಾಗ್ರತೆ ವಹಿಸಿ ಬೇರೆ ಕಡೆ ಎಣ್ಣೆ ಕಣಿಗಳಿಗಾಗಿ ಸಂಶೋಧಿಸಿದ. ಉರಾಲದ ಪಶ್ಚಿಮ ತಪ್ಪಲಲ್ಲಿ ಪೆಟ್ರೋಲಿನ ಸರೋವರಗಳೇ ಇದ್ದುವು. ಕಾಸ್ಪಿಯನ್ ಸಮುದ್ರದಿಂದ ಹಿಡಿದು ಆರ್ಕ-ಟಿಕ್ ಸಾಗರದ ವರೆಗೆ ಎಣ್ಣೆಯ ಬುಗ್ಗೆ ಚಿಮ್ಮತೊಡಗಿತು. ಟರ್ಕಮೆನಿಸ್ತಾನ್, ಕಜಕಸ್ತಾನ್, ಸ್ಟಾರ್ಲಿಟಾಮುಕ್, ಚುಸೋವಾಯ ಮೊದಲಾದ ಕಡೆಗಳಲ್ಲಿರುವ ಎಣ್ಣೆಕಣಿಗಳು ಬಹಳ ದೊಡ್ಡವು. ಇಷ್ಟು ಪೆಟ್ರೋಲ್ ಸಂಪತ್ತು ಇದ್ದುದರಿಂದಲೇ ಒಕ್ಕಲುತನಕ್ಕಾಗಿ ಯಂತ್ರಗಳನ್ನು ಉಪಯೋಗಿಸಲು ರಶಿಯಕ್ಕೆ ಸಾಧ್ಯವಾಯಿತು.

### ಲೆನಿನ್‌ನ ಬೆಳಕು

ಆಧುನಿಕ ಜಗತ್ತಿನಲ್ಲಿ ವಿದ್ಯುಚ್ಛಕ್ತಿ ಅಮೂಲ್ಯ. ಮನೆ ಬೆಳಗಲು, ಕಾರ್ಖಾನೆ ನಡೆಯಲು ವಿದ್ಯುಚ್ಛಕ್ತಿ ಬೇಕು. ಅಖಿಲ ರಶಿಯವನ್ನೇ ವಿದ್ಯುಚ್ಛಕ್ತಿಯಿಂದ ಬೆಳಗಿಸಬೇಕೆಂದು ಲೆನಿನ್ ಬಯಸಿದ್ದ. ವಿದ್ಯುತ್ + ಸೋವಿಯೆಟ್ ಎಂಬರೆ ಸಾಮ್ಯವಾದವೆಂದೂ ಹೇಳುತಿದ್ದನು. ಅದಕ್ಕಾಗಿ ೧೯೨೦

ರಲ್ಲೇ ಒಂದು ಯೋಜನೆಯನ್ನು ಜಾರಿಗೆ ತಂದಿದ್ದರು. ಸ್ಟಾಲಿನ್ ಅದನ್ನು ಪರಿಪೂರ್ಣಗೊಳಿಸಿದ. ಯಂತ್ರಗಳಿಂದ ವಿದ್ಯುಚ್ಛಕ್ತಿ ಪಡೆವ ಮಾತಂತೂ ಸರಿಯೆ. ರಶಿಯದ ಜಲಶಕ್ತಿಯ ಉಪಯೋಗವನ್ನೂ ಮಾಡಿಕೊಂಡಿದ್ದಾರೆ. ನೀಪರ್ ನದಿಗೆ ಅಣೆಕಟ್ಟು ಕಟ್ಟಿ ಅನೇಕ ಸೋವಿಯೆಟಗಳಿಗೆ ವಿದ್ಯುಚ್ಛಕ್ತಿ ಒದಗಿಸಿರುವರು. ಈ ನೀಪ್ರೋಗೆಸ್ ಅಣೆಕಟ್ಟು ಲೋಕವಿಖ್ಯಾತವಾದುದು. ರಶಿಯನರ ಸಾಹಸಕೃತಿಯಿದು. ಇದರಂತೆ ವೋಲ್ಗಾನದಿಗೂ ದೊಡ್ಡ ಒಡ್ಡುಕಟ್ಟಿ ವಿದ್ಯುಚ್ಛಕ್ತಿ ಪಡೆದಿರುವರು. ಪ್ರತಿಯೊಂದು ಕಣಿ ಕಾರ್ಖಾನೆ, ಮನೆ, ಮಠ, ಹಳ್ಳಿಪಳ್ಳಿಗಳಿಗೂ ಸ್ಟಾಲಿನ್ ವಿದ್ಯುಚ್ಛಕ್ತಿಯನ್ನು ಕೊಟ್ಟಿದ್ದಾನೆ. ಈ ಕೃತಕ 'ಮಿಂಚು ಹುಳ'ಕ್ಕೆ ರಶಿಯದ ಜನ 'ಲೆನಿನ್‌ನ ಬೆಳಕು' ಎಂಬ ದಿವ್ಯವಾದ ಹೆಸರಿಟ್ಟಿದ್ದಾರೆ. ವೈಮಾನಿಕರಿಗೆ (ಅಥವಾ ದೇವತೆಗಳಿಗೆ) ಮಿಂಚುವ ಈ ವಿದ್ಯುತ್ಪ್ರಭೆ ನರಲೋಕದ ಮಿನುಗುವ ನಕ್ಷತ್ರ ಸಮೂಹದಂತೆ ಕಾಣಲಿಕ್ಕಿಲ್ಲವೇ ?

**ರಕುತ ನಾಳ**

ನವನಾಗರಿಕತೆಯ ಗಾಳಿ ರಶಿಯಕ್ಕೆ ಮೊನ್ನೆ ಮೊನ್ನೆಯ ವರೆಗೂ ಬೀಸದೇ ಇರಲು ವಾಹನಸೌಕರ್ಯಗಳ ಕೊರತೆಯೂ ಒಂದು ಕಾರಣವೆಂದೆನ್ನುವವರುಂಟು. ವಾಹನಸೌಕರ್ಯಗಳು ದೇಹದ ರಕುತನಾಳಗಳಿದ್ದಂತೆ. ಸರಿಯಾಗಿ ರಕುತ ಚಲನೆಯಾಗದೇ ಇದ್ದರೆ, ಅಂಗವಿದ್ದೂ ಇಲ್ಲದಂತಾಗುವುದು. ಝಾರ್ ರಶಿಯದ ಅನೇಕ ಭಾಗಗಳಿಗೆ ಈ ರೀತಿ ಪಕ್ಷವಾತವೇ ಹಿಡಿದಿದ್ದಿತು. ಕೆಲವು ಪ್ರಾಂತಗಳಿಗೆ ಕಾಲ್ನಡಿಗೆಯಿಂದಲೇ ಹೋಗಬೇಕಾಗಿತ್ತು. ಕುದುರೆ ಗಾಡಿಯೇ ಮುಖ್ಯವಾಹನ. ಇದರಿಂದ ವ್ಯಾಪಾರ, ವ್ಯವಹಾರ ಕೂಡ ಅಭಿವೃದ್ಧಿ ಹೊಂದಲಿಲ್ಲ. ಪಂಚವಾರ್ಷಿಕ ಯೋಜನೆಯಲ್ಲಿ ವಾಹನ ಸೌಕರ್ಯಗಳಿಗಾಗಿ ಪ್ರತ್ಯೇಕ ಹಣವನ್ನು ತೆಗೆದಿಡಲಾಯಿತು. ಮಾಸ್ಕೋ ಕೇಂದ್ರದಿಂದ ಈಗ ಅಷ್ಟದಿಕ್ಕುಗಳಿಗೂ ರೇಲ್ವೆಗಳು ಕವಲೊಡೆದಿವೆ. ಜೇಡರ ಬಲೆಯಂತೆ ರೇಲ್ವೆ ರಸ್ತೆಗಳನ್ನು ಹೆಣೆದಿದ್ದಾರೆ. ಲೆನಿನ್-ಗ್ರಾಡ್-ವ್ಲಾಡಿವೋಸ್ಟಾಕ್‌ಗಳ ನಡುವೆ ಮೊದಲೇ ಒಂದು ರೇಲ್ವೆ ರಸ್ತೆಯಿದ್ದಿತು. ಈಗ ಮತ್ತೊಂದು ಸ್ಟ್ರಾಕನ್ನು ಹಾಕಿದರು. ಇದಕ್ಕಿಂತಲೂ ದೊಡ್ಡ ಸಾಹಸ ಸ್ಟಾಲಿನ್ [illegible] ಯೋಜನೆ. ಉತ್ತರದ ಬಿಳಿ

ಸಮುದ್ರದಿಂದ ಕಾಲಿವೆ ಕಡಿದು ಒನೆಗಾ, ಲಡೊಗಾ ಸರೋವರಗಳನ್ನು ಕೂಡಿಸಿ, ಲೆನಿನ್‌ಗ್ರಾಡದ ಒಳಿ ಹಾಯಿಸಿ ಫಿನ್‌ಸಮುದ್ರಕೊಲ್ಲಿಗೆ ಮುಟ್ಟಿಸಿದರು. ಇದಕ್ಕೆ ಸ್ಟಾಲಿನ್ ಕಾಲಿವೆಯೆಂದು ಹೆಸರಿಟ್ಟಿದ್ದಾರೆ. ಕಪ್ಪು ಸಮುದ್ರಕ್ಕೆ ಸಂಗಮವಾಗುವ ನೀಪರ್ ನದಿ, ಬಾಲ್ಟಿಕ್ ಸಮುದ್ರಕ್ಕೆ ಸೇರುವ ವೀಣಾ ನದಿಗಳ ಮಧ್ಯೆ ಒಂದು ಕಾಲಿವೆ ಕಡಿದು ಇವೆರಡನ್ನು ಜೋಡಿಸಿದ್ದಾರೆ. ಇದರಂತೆ ಡಾನ್-ವೋಲ್ಗಾ ನದಿಗಳನ್ನು ಕೂಡಿಸಿರುವರು. ವೋಲ್ಗಾನದಿಯು ಮೇಲ್ಭಾಗದಲ್ಲಿ ಒಂದು ಕಾಲುವೆ ತೋಡಿ ಒನೆಗಾ ಸರೋವರಕ್ಕೆ ಮುಟ್ಟಿಸಿರುವರು. ಕೇವಲ ನೀರಾವರಿ ಸೌಕರ್ಯಕ್ಕಾಗಿ ಇವುಗಳನ್ನು ಕಡಿಯಲಾಗಿಲ್ಲ. ಈ ಕಾಲಿವೆಗಳು ಸಾಕಷ್ಟು ಆಳವಿರುವುದರಿಂದ ಚಿಕ್ಕ ಚಿಕ್ಕ ಹಡಗಗಳೂ ಪ್ರಯಾಣ ಬೆಳೆಸಬಹುದಾಗಿದೆ. ೧೯೪೬ನೇ ಇಸವಿಯೊಳಗೆ ಮಾಸ್ಕೋ ನಗರವು ಒಂದು ಒಳನಾಡಿನ ಬಂದರವಾಗುವಂತೆ ಮಾಡಲು ಸ್ಟಾಲಿನ್ ನಿರ್ಧರಿಸಿದ್ದನಂತೆ. ಪ್ರಾಯಶಃ ಯುದ್ಧದಿಂದ ಆ ಯೋಜನೆಯನ್ನು ತಡೆದು ಹಿಡಿದಿರಲು ಸಾಕು. ಅದೇನೇ ಇರಲಿ, ಬಾಲ್ಟಿಕ್ ಸಮುದ್ರ, ಕಪ್ಪುಸಮುದ್ರ, ಕಾಸ್ಪಿಯನ್‌ಸಮುದ್ರ, ಬಿಳಿ ಸಮುದ್ರ ಮೊದಲಾದವುಗಳನ್ನು ಕೂಡಿಸಿದ ಸ್ಟಾಲಿನ್ನನ ಯೋಜನೆಯನ್ನು ಕಂಡು ಜನ ಬೆರಗಾಗಿದ್ದಾರೆ. ಸಪ್ತಸಮುದ್ರಗಳನ್ನೆ ಕೂಡಿಸುವ ಯೋಜನೆ ಅವನದೇನೋ! ವೈಮಾನಿಕ ಸೌಕರ್ಯವೂ ಇಷ್ಟೇ ವ್ಯಾಪಕವಾಗಿದೆ.

### ಉತ್ಪಾದನೆ

ಪಂಚವಾರ್ಷಿಕ ಯೋಜನೆಯು ನಾಲ್ಕೇ ವರುಷಗಳಲ್ಲಿ ಪರಿಪೂರ್ಣ ಹೊಂದಿತು. ೧೯೧೩ರಿಂದ ಔದ್ಯೋಗಿಕ ಸಂಪತ್ತು ಮೂರುಪಟ್ಟು ಹೆಚ್ಚು ಆಯಿತು. ಎರಡನೇ ಯೋಜನೆಯಲ್ಲಿ ಎಂಟರಷ್ಟು ಹೆಚ್ಚಿದೆ. ೧೯೧೩ರಲ್ಲಿ ಉರಾಲದಲ್ಲಿ ಕೇವಲ ೯ ಲಕ್ಷ ಟನ್ ಉಕ್ಕು ಸಿದ್ಧವಾಗುತ್ತಿದ್ದರೆ ಹೆಚ್ಚು. ೧೯೩೭ರಲ್ಲಿ ಇದು ೩೬ ಲಕ್ಷ ಟನ್‌ಗೆ ಏರಿದೆ. ೧೯೩೮ರ ವರೆಗೆ ಸಾಮೂಹಿಕ ಒಕ್ಕಲತನಕ್ಕಾಗಿ ೫ ಲಕ್ಷ ಟ್ರ್ಯಾಕ್ಟರ್, ೩ಲಕ್ಷ ಲಾರಿ ೧೬ಲಕ್ಷ ಇನ್ನಿತರ ಒಕ್ಕಲುತನ ಉಪಕರಣಗಳು ಹಾಗೂ ಲಕ್ಷಗಟ್ಲೆ ಬೆಳೆಕೊಯ್ಯುವ ಯಂತ್ರಗಳನ್ನು ಪೂರೈಸಿದ್ದಾರೆ. ೧೯೧೩ರಲ್ಲಿ ಅಖಿಲ ರಶಿಯದಲ್ಲಿ ದೊರೆಯುತ್ತಿದ್ದ ಉಕ್ಕು ಹೆಚ್ಚು ಕಡಿಮೆ ೪೨ ಲಕ್ಷ ಟನ್. ೧೯೪೨ರಲ್ಲಿ ೫ ಕೋಟಿ ಟನ್.

ಯಂತ್ರಗಳು ಒಂದು ಸಾವಿರಕ್ಕೆ ೪೮ ಸಾವಿರ. ಎಣ್ಣೆ ೯೦ ಲಕ್ಷ ಟನ್‌ದ ಬದಲು ೩೩ಕೋಟಿ ಟನ್. ಕಲ್ಲಿದ್ದಲು ೨೩ಕೋಟಿ ಟನ್ ಇದ್ದುದು ೧೬ ಕೋಟಿ ಟನ್‌ಸ ಒಳಹೊರಗಿದೆ. ಕಚ್ಚಾ ವಸ್ತುಗಳ ಉತ್ಪಾದನೆಯಲ್ಲಿಯೂ ಇನ್ನಿತರ ತಯಾರಿ ವಸ್ತುಗಳಲ್ಲಿಯೂ ರಶಿಯುವು ಕೆಲವೇ ವರುಷಗಳಲ್ಲಿ ಅನೇಕ ಔದ್ಯೋಗಿಕ ರಾಷ್ಟ್ರಗಳನ್ನು ಹಿಂದೆ ಹಾಕಿ ಜಗತ್ತಿನಲ್ಲಿ ಉನ್ನತ ಸ್ಥಾನ ಪಡೆದಿದೆ. ಚಿನ್ನದಲ್ಲಿ ಅದಕ್ಕೆ ಅಗ್ರಸ್ಥಾನ. ಎಣ್ಣೆ ಸಂಪತ್ತನ್ನು ಅಳೆದರೆ ಜಾಗತಿಕ ರಾಷ್ಟ್ರಗಳ ಪಟ್ಟಿಯಲ್ಲಿ ಅದರ ಹೆಸರು ಎರಡನೆಯದಾಗಿ ಬರುತ್ತಿದೆ. ಜಗತ್ತಿನಲ್ಲಿ ರಶಿಯವು ಇಂದು ಮೂರನೇ ದೊಡ್ಡ ಔದ್ಯೋಗಿಕ ದೇಶವಾಗಿರುವುದು. ಯಂತ್ರತಂತ್ರದ ಕೊರತೆ, ಕೂಲಿಕಾರರ ಅಭಾವ, ಆರ್ಥಿಕ ಮುಗ್ಗಟ್ಟು ಮೊದಲಾದ ಎಲ್ಲ ಅಡ್ಡಿ ಆತಂಕಗಳನ್ನು ಪರಿಹರಿಸಿ ಕೊಂಡು ಶತಮಾನಗಳಿಂದ ಹಿಂದುಳಿದಿದ್ದ ದೇಶವು ಪ್ರಮುಖ ಔದ್ಯೋಗಿಕ ರಾಷ್ಟ್ರವಾಗುವಂತೆ ಮಾರ್ಪಡಿಸಿ, ಅದು ಸ್ವಾವಲಂಬಿಯಾಗುವಂತೆ ಸಾಧಿಸಿ ಉದ್ಧರಿಸಿದ ಸ್ಟಾಲಿನ್ನನ ಕೆಲಸ ಅತ್ಯಮೋಘವಾದುದು.

**ಕೂಲಿಕಾರರು**

ದೇಶದಲ್ಲಿ ಉದ್ಯೋಗಗಳ ಬೆಳವಣಿಗೆಯಾದ ಮಾತ್ರಕ್ಕೆ ಸ್ವರ್ಗದ ಬಾಗಿಲು ತೆರೆಯಿತೆಂದು ಹೇಳುವುದರಲ್ಲಿ ಹುರುಳಿಲ್ಲ. ಈಗ ಬ್ರಿಟನ್, ಅಮೇರಿಕೆ, ಜರ್ಮನಿ ಮೊದಲಾದವೂ ಔದ್ಯೋಗಿಕ ರಾಷ್ಟ್ರಗಳೇ. ಆದರೆ ಆ ದೇಶಗಳ ಕೂಲಿಕಾರರ ಗೋಳು ಹೇಳಿ ತೀರದು. ಜನರ ಸ್ಥಿತಿಗತಿಯೇನು? ಅವರ ಸುಖ ಸಾಧಿಸಲ್ಪಟ್ಟಿದೆಯೇ? ಅವರ ಜೀವನಮಟ್ಟ ಏರಿದೆಯೇ? ಕೂಲಿಕಾರರ ರಕುತ ಹೀರಲಾಗುತ್ತಿವೆಯೋ? ಮೊದಲಾದ ಪ್ರಶ್ನೆಗಳಿಗೆ ತೃಪ್ತಿಕರ ಉತ್ತರಗಳು ಸಿಗಬೇಕು. ಸ್ಟಾಲಿನ್ ಕೊಡುವ ಉತ್ತರ ಸಮಾಧಾನಕರವಿದೆ. ೧೯೩೪ರಲ್ಲಿ ರಶಿಯದ ಸಾಮಾನ್ಯ ಕೂಲಿಕಾರನ ವೇತನವು ೪೫೦ರೂಬಲ್‌ಗಳಿದ್ದುವು. (ಒಂದುರೂಬಲ್=ರೂ ೧-೬-೯) ೧೯೫೭ರಲ್ಲಿ ೩೦೪೩ ರೂಬಲ್‌ಗಳು ಅವರಿಗೆ ದೊರೆತಿದೆ. ಸ್ತ್ರೀಕೂಲಿಕಾರರಿಗೂ ಗಂಡಸರಷ್ಟೇ ಕೂಲಿ. ಕುಶಲರಾದ ಕೂಲಿಕಾರರಿಗೆ ಇದಕ್ಕಿಂತಲೂ ಹೆಚ್ಚು ದೊರೆತಿದೆ. ಸಂಬಳದಲ್ಲಿರುವ ಈ ವ್ಯತ್ಯಾಸವು ಸಮತಾಧರ್ಮಕ್ಕೆ ಹೇಗೆ ಸರಿಹೋಗುವುದೆಂದು ಯಾರಾದರೂ ಪ್ರಶ್ನಿಸಬಹುದು. ಈ ಶಂಕೆಗೆ ಅವಕಾಶ-

ವಿಲ್ಲ. ೧೦೦ರೂಬಲ್ ದೊರೆವ ಕೂಲಿಕಾರ ೧೦ರೂಬಲ್ ಮನೆಬಾಡಿಗೆ ಕೊಟ್ಟರೆ ೫೦೦ ರೂಬಲ್ ಇದ್ದವನು ೫೦ ರೂಬಲ್‌ಗಳನ್ನು ಕೊಡಬೇಕಾಗುವುದು. ಇನ್ನೊಂದು ಮಹತ್ವದ ವಿಚಾರವೂ ಉಂಟು. ಝಾರ್ ರಶಿಯದಲ್ಲಿ ಕಾರ್ಖಾನೆಗಳೆಲ್ಲ ವ್ಯಕ್ತಿಒಡೆತನಕ್ಕೊಳಗಾಗಿದ್ದುವು. ಕೂಲಿಕಾರರು ದುಡಿವ ಯಂತ್ರಗಳಾಗಿದ್ದರು. ಅವರು ಕೊಟ್ಟ ಕೂಲಿ. ನೌಕರಿಯ ಭದ್ರತೆಯೂ ಇರಲಿಲ್ಲ. ಈಗ ಹಾಗಿಲ್ಲ. ಪ್ರತಿಯೊಬ್ಬನಿಗೂ ನೌಕರಿ ಕೊಡುವ ಭಾರ ಸರಕಾರದ ಮೇಲಿದೆ. ಕಾರಖಾನೆ ತಮ್ಮದು, ಸಂಪತ್ತು ತಮ್ಮದು, ಆಡಳಿತಗಾರರು ತಮ್ಮವರು ಎಂಬ ಆತ್ಮೀಯತೆ ಕೂಲಿಕಾರರಲ್ಲಿ ಉದಯಿಸಿದೆ. ಏಕೆಂದರೆ ಕಾರಖಾನೆಯನ್ನು ನಡೆಸುವವರು ಕೂಲಿಕಾರರೆ. ಕೂಲಿಕಾರರಿಂದಲೇ ಆರಿಸಿದ ಆಡಳಿತಮಂಡಲವು ಕಾರ್ಖಾನೆಯನ್ನು ನಡೆಸುತ್ತಿದೆ. ಉತ್ಪಾದನೆ, ಕೆಲಸದ ನಿಯಮ, ಯಾರು ಯಾರು ಯಾವ ಯಾವ ಕೆಲಸ ಮಾಡಬೇಕೆಂಬುದನ್ನು ಅವರು ನಿರ್ಧರಿಸುವರು. ಪ್ರತಿಯೊಬ್ಬನಿಗೂ ಆಡಳಿತೆಯನ್ನು ಟೀಕಿಸುವ, ಪ್ರಶ್ನಿಸುವ ಹಕ್ಕಿದೆ. ಸೂಚನೆ ಸಲಹೆಗಳನ್ನು ನೀಡಬಹುದು. ತಮ್ಮ ಕಷ್ಟ-ನಷ್ಟಗಳನ್ನೂ ತಿಳಿಸುವರು. ಇದಲ್ಲದೆ ಅವರ ಹಕ್ಕು ಹಿತರಕ್ಷಣೆಯನ್ನು ನೋಡಿಕೊಳ್ಳಲು ಟ್ರೇಡ್‌ಯೂನಿಯನ್‌ಗಳು ಸಂಘಟಿಸಲ್ಪಟ್ಟಿವೆ. ವಿವಿಧ ಕೈಗಾರಿಕೆಗಳಲ್ಲಿ ದುಡಿವ ಕೂಲಿಕಾರರ ಪಾಲನೆ ಮಾಡಲು ಈ ಟ್ರೇಡ್‌ಯೂನಿಯನದಲ್ಲಿ ವಿವಿಧ ಶಾಖೆಗಳಿರುವವು.

**ವಿಮೆ-ವಿಶ್ರಾಂತಿ**

ರಶಿಯವು ಕೂಲಿಕಾರರ ನಾಡು. ಅವರದೇ ರಾಜ್ಯ. ಪ್ರಭುತ್ವ. ಅಂದ ಬಳಿಕ ಅವರಿಗಿದ್ದಷ್ಟು ಸೌಕರ್ಯ, ಸೌಲಭ್ಯಗಳು ಇನ್ನಾರಿಗೂ ಇಲ್ಲ. ಸರಕಾರಕ್ಕೆ ಕೂಲಿಕಾರರ ಹಿತಚಿಂತೆ ಬಹಳವಿದೆ. ನೌಕರಿಯ ಭದ್ರತೆ, ಅಧಿಕ ಕೂಲಿ, ಮತದಾನ ಹಕ್ಕುಗಳೊಂದಿಗೆ ವಿಮಾಸೌಕರ್ಯವನ್ನು ಏರ್ಪಡಿಸಿದ್ದಾರೆ. ಹೆಣ್ಣು-ಗಂಡು ಭೇದವಿಲ್ಲದೆ ಎಲ್ಲ ಕೂಲಿಕಾರರೂ ವಿಮೆ ಮಾಡತಕ್ಕದು. ಕೂಲಿಕಾರರು ತಮ್ಮ ವೇತನದಿಂದ ಪ್ರೀಮಿಯಂ ಕಟ್ಟಬೇಕಾಗಿಲ್ಲ. ನಿಯೋಜನ ಸಂಸ್ಥೆಗಳೇ ಕೆಲವು ಪ್ರಮಾಣದ ಆಧಾರದ ಮೇಲೆ ಪ್ರೀಮಿಯಂ ಕಟ್ಟುವವು. ಸ್ತ್ರೀಯರಿಗೆ ಪ್ರಸವಕಾಲದ ವೇತನವನ್ನು ಕೊಡುವದರೊಂದಿಗೆ ಈ ವಿಮಾ ಕಂಪೆನಿಗಳು ಅವರಿಗೆ ಪ್ರತ್ಯೇಕ ಭತ್ಯೆ,

ಹಂಚುತ್ತಿವೆ. ಅನಾರೋಗ್ಯಕ್ಕೀಡಾದ ಕೂಲಿಕಾರರಿಗೆ, ವಯೋವೃದ್ಧರಿಗೆ ವಿಧವೆಯರಿಗೆ ಜೀವಾವಧಿ ವರೆಗೂ ಭತ್ತೆ ಸಲ್ಲುವುದು. ಎರಡು ವರುಷಗಳ ವರೆಗೆ ದುಡಿದ ಕೂಲಿಕಾರರಿಗೆ ಅವರ ವೇತನದಲ್ಲಿ ನೂರಕ್ಕೆ ೬೦ರಷ್ಟು ಭತ್ತೆ, ಆರು ವರುಷಗಳ ದುಡಿತದ ನಂತರ ವೇತನದಷ್ಟೇ ಭತ್ತೆ ಕೊಡುವ ಏರ್ಪಾಟಿದೆ. ನಿಯೋಜಕ ಸಂಸ್ಥೆಗಳ ಮೂಲ ಧನದಿಂದಲೇ ಈ ಭತ್ತೆಯು ವ್ಯವಸ್ಥೆ ಮಾಡಿರುವರು.

ದಿನಂಪ್ರತಿ ೭ ತಾಸುಗಳ ದುಡಿತ. ಐದು ದಿವಸಕ್ಕೊಂದು ದಿನರಜೆ. ಕಾರ್ಖಾನೆಗಳಿದ್ದಲ್ಲೆಲ್ಲ ಪುಸ್ತಕ ಭಾಂಡಾರ, ಕ್ಲಬ್, ಆಟದ ಸ್ಥಳ ಮೊದಲಾದವುಗಳ ಕಡೆ ವಿಶೇಷ ಲಕ್ಷ್ಯ ಕೊಟ್ಟಿರುವರು. ಕೂಲಿಕಾರರ ಶಿಕ್ಷಣವಂತೂ ಖಡ್ಡಾಯವಾಗಿದೆ. ಅವರ ಮನರಂಜನೆಗಾಗಿ ಸಿನಿಮಾ, ನಾಟಕಗೃಹ ಮೊದಲಾದವುಗಳನ್ನು ತೆರೆದಿರುವರು. ಸ್ತ್ರೀ ಕೂಲಿಕಾರರ ಅನುಕೂಲತೆಗಾಗಿ ಈ ಕಾರ್ಖಾನೆಗೆ ಹೊಂದಿಕೊಂಡು ಶಿಶು ಸಂರಕ್ಷಣಾಲಯಗಳನ್ನು ಕಟ್ಟಿರುವರು. ಇವು ಕಾರ್ಖಾನೆಗಳ ಅಂಗಾಂಗಗಳಾಗಿಯೇ ಇವೆ. ಕೆಲಸದ ವೇಳೆ ತಂತಮ್ಮ ಶಿಶುಗಳನ್ನು ಸ್ತ್ರೀಯರು ಈ ಸಂಗೋಪನ ಕೇಂದ್ರದಲ್ಲಿಡುವರು. ಮೂರು ತಿಂಗಳ ಕೂಸಿನಿಂದ ಮೂರು ವರುಷದ ಕೂಸಿನ ವರೆಗೆ ಪಾಲನೆ-ಪೋಷಣೆ ಈ ಕೇಂದ್ರಗಳಲ್ಲಿ ನಡೆಯುತ್ತಿದೆ. ಆಗಾಗ ತಾಯಿ ಕಾರ್ಖಾನೆಯಿಂದ ಬಂದು ಮಗುವಿಗೆ ಮೊಲೆಯುಣ್ಣಿಸಿ ಹೋಗುವಳು. ಸಂಜೆ ಮನೆಗೆ ಹಿಂತಿರುಗಿದಾಗ ತನ್ನ ಮಗುವನ್ನು ಎತ್ತಿ ಮುದ್ದಾಡಿ ಕೊಂಡು ಹೋಗುತ್ತಾಳೆ.

## ಸಾಮೂಹಿಕ ಒಕ್ಕಲುತನ

ರಶಿಯವು ಕೃಷಿಪ್ರಧಾನದೇಶ. ಬಹುಸಂಖ್ಯಾಕರು ರೈತರು. ಗಾಂಧೀ ದೇಶದಲ್ಲಿದ್ದ ಹಾಗೆ. ಮಳೆ ಬಂದರೆ ಬೆಳೆ. ಮಳೆಯಿಲ್ಲದ ಭಾಗದಲ್ಲಿ ಬರ. ಕ್ಷಾಮ ತಪ್ಪದ ವರುಷವಿಲ್ಲ. ಸಾಗುವಳಿಗೆ ಗತಕಾಲದ, ಹಲವು ಯುಗಗಳ ಹಿಂದಿನ ಮರದ ನೇಗಿಲುಗಳನ್ನು ಉಪಯೋಗಿಸುತಿದ್ದರು. ದಿನವಿಡೀ ಕೆಲಸ. ಆದರೂ ಸುಖವುಂಟೇ? ಹಳ್ಳಿಗಳು ದಾರಿದ್ರ್ಯದ ಬೀಡು. ಬೋಲ್ಶೇಗೌಡನ ಬಳಗ ಈ ರೀತಿ ತೊಳಲಿ ಬಳಲುತ್ತಿರುವುದನ್ನು ನೋಡಿ ಸ್ಟಾಲಿನ್ನನ

ಕರುಳು ಕರಗಿ ಬಂದಿತು. ಒಕ್ಕಲುತನದಲ್ಲಿ ಸುಧಾರಣೆ ಮಾಡಲು ಬಯಸಿದ. ಪಂಚವಾರ್ಷಿಕ ಯೋಜನೆಯಲ್ಲಿ ಅದೂ ಒಂದು ಮುಖ್ಯವಾದ ಅಂಗವಾಗಿದೆ.

## ಒಕ್ಕಲುತನಪದ್ಧತಿ

ಒಕ್ಕಲುತನದ ಸುಧಾರಣೆಗೆ ಇನ್ನೊಂದು ಕಾರಣವಿದೆ. ಅದು ಜಮೀನ್ದಾರೀ ಪದ್ಧತಿಯ ನಿರ್ಮೂಲದ ಅವಶ್ಯಕತೆ. ಜಮೀನ್ದಾರೀಪದ್ಧತಿ, ವ್ಯಕ್ತಿ ಒಡೆತನ ಇವು ಹಳ್ಳಿಗಳಿಗೆ ಇಳಿದ ಬಂಡವಲುಶಾಹಿಯ ಬೇರುಗಳು. ಬಾಲ್ಶೆವಿಕರು ಅಧಿಕಾರಕ್ಕೆ ಬಂದೊಡನೆಯೇ ಆಸ್ತಿಪಾಸ್ತಿ ಸರಕಾರದ್ದೆಂದು ಸಾರಿದ್ದರೂ ಅದು ಪುಸ್ತಕದ ಬದನೇಕಾಯಾಗಿಯೇ ಉಳಿದಿತ್ತು. ಕ್ರಾಂತಿಯ ಕಾಲದಲ್ಲಿ ರೈತರು ಜಮೀನುದಾರರ ಒಣವೆಗಳಿಗೆ ಬೆಂಕಿಕೊಟ್ಟು ಅವರ ಆಸ್ತಿಪಾಸ್ತಿ ಸ್ವಾಧೀನ ಮಾಡಿಕೊಂಡು ಎಷ್ಟೋ ಕಾಲದಿಂದ ಕೊರೆಯುತಿದ್ದ ತಮ್ಮ ಹೊಲದ ಹಂಬಲವನ್ನು ತೀರಿಸಿಕೊಂಡರು. ಆಳಿದ ಊರಿಗೆ ಉಳಿದವನೇ ಗೌಡ. ಅವರನ್ನು ಕೇಳುವವರು ಯಾರು? ಕೇಳಿದರೆ ಕಿವಿಗೊಡಬೇಕಲ್ಲವೆ? ಕ್ರಾಂತಿಯೆಂದರೆ ಜಮೀನುದಾರರ ಆಸ್ತಿಯನ್ನು ವಶಪಡಿಸಿಕೊಳ್ಳುವ ಉಪಾಯ,. ಸಂದರ್ಭವೆಂದು ಅವರ ತಿಳುವಳಿಕೆಯಾಗಿತ್ತೋ ಏನೋ? ಅದೇನಿದ್ದರೂ ಕ್ರಾಂತಿಯಾದನಂತರ ಹೆಚ್ಚುಕಡಿಮೆ ೨½ ಕೋಟಿ ಹೊಲಗಳ ತುಣುಕುಗಳು ರೈತರ ವ್ಯಕ್ತಿಒಡೆತನಕ್ಕೆ ಒಳಗಾದುವು. ಸಾಮ್ಯವಾದಕ್ಕೆ ಇದು ಸಂಹಾರಪ್ರಾಯವೇ ಸರಿ. ಹೊಲಗಳೆಲ್ಲ ಹೋಳುಹೋಳಾಗಿ ಹೋಗಿರುವುದರಿಂದ ಉತ್ಪಾದನೆಯೂ ಕಡಿಮೆಯಾಗುತ್ತಿದೆ. ಜನರಿಗೆ ಆಹಾರವಸ್ತುಗಳು ಸಾಕಾಗುವಂತಿಲ್ಲ. ಅಧಿಕ ಆಹಾರ ಬೇಕು. ದೊಡ್ಡ ಪ್ರಮಾಣದಲ್ಲಿ ಒಕ್ಕಲುತನ ನಡೆಯಬೇಕು. ಯಂತ್ರದ ಸಹಾಯವೇ ಅದಕ್ಕೆ ಉಪಾಯ. ಆದರೆ ಹೊಲಗಳು ತುಣುಕು ತುಣುಕುಗಳಾಗಿದ್ದರೆ ಟ್ರಾಕ್ಟರ್‌ಗಳ ಓಡಾಟಕ್ಕೆ ಅನಾನುಕೂಲ. ಆದುದರಿಂದ ಹೊಲಗಳನ್ನೆಲ್ಲ ಒಟ್ಟುಗೂಡಿಸಿ ಸಾಮೂಹಿಕ ಒಕ್ಕಲುತನಕ್ಕೆ ಪ್ರೋತ್ಸಾಹ ನೀಡಿದರು.

## ರೈತರ ವಿರೋಧ

ಸಾಮೂಹಿಕ ಒಕ್ಕಲುತನ, ಯಂತ್ರಗಳ ಉಪಯೋಗದಿಂದ ಅಧಿಕ ಬೆಳೆ ಬರುವುದೆಂದು ಜನರಿಗೆ ಖಚಿತಗೊಳಿಸಲು ಸ್ಟಾಲಿನ್ ಯತ್ನಿಸಿದ.

ಮಾದರಿಗಾಗಿ ಕೆಲವು ಸರಕಾರಿ ಕೃಷಿಕ್ಷೇತ್ರಗಳನ್ನೂ ತೆರೆದರು. ಈ ಪದ್ಧತಿಯನ್ನು ಸ್ವೀಕರಿಸಿದರೆ ಬೀಜ, ಟ್ರ್ಯಾಕ್ಟರ್, ಬೆಳೆ ಕೊಯ್ಯುವಯಂತ್ರ, ಗೊಬ್ಬರ ಮೊದಲಾದವುಗಳನ್ನು ಒದಗಿಸುವುದಾಗಿ ಉತ್ತೇಜನದ ಆಶೆ ತೋರಿಸಿದರು. ಆದರೆ ರೈತರ ಮನವೊಲಿಸುವುದು ಸುಲಭವಿರಲಿಲ್ಲ. ಹೊಲದ ಮಾಲ್ಕೀ ಹಕ್ಕನ್ನು ಬಿಟ್ಟುಕೊಡುವುದೆಂದರೆ ರೈತನ ಪ್ರಾಣಕ್ಕೆ ಸಂಕಟ ಬಂದಂತೆ. ಮರದ ಬೇರು ಭೂಮಿಯೊಳಗೆ ನುಸುಳಿರುವಂತೆ ರೈತರೂ ಭೂಮಿಗೆ ಅಂಟಿಕೊಂಡಿದ್ದಾರೆ! ಹುಟ್ಟಿದುದೂ ಮಣ್ಣಿನಲ್ಲಿ. ಬೆಳೆದ ಮೇಲೆ ಒದ್ದಾಡುವುದೂ ಮಣ್ಣಿನ ಮೇಲೆ. ಮಣ್ಣಿನಿಂದಲೇ ಕಾಯ. ಮಣ್ಣಿನಿಂದಲೇ ಜೀವ. ಕೊನೆಗೆ ಅವನು ಸತ್ತಮೇಲೂ ಸೇರುವುದು ಮಣ್ಣನ್ನೇ. ಅದು ತನ್ನದು, ತನಗೆ ದೈವದತ್ತವಾಗಿ ಬಂದುದು ಎಂಬ ಭಾವನೆ ಅವನ ತಲೆ ತುಂಬ ಇದೆ. ತನ್ನ ಹಕ್ಕನ್ನು ಕಸಿದುಕೊಳ್ಳುವವನು ಹಗೆಯೆಂದೇ ತಿಳಿದು ಕುಡುಗೋಲು ಹಿಡಿಯುತ್ತಾನೆ. ಅದು ಹೊಲ ಮೇಯಲು ಬಂದ ಹಸಿ ಮುಳ್ಳು ಗಿಡವಾದರೂ ಸರಿ; ದೇಸಾಯಿಯಾದರೂ ಸರಿ; ಅವರ ವಿರುದ್ಧ ಕತ್ತಿಯೆತ್ತುತ್ತಾನೆ. ನಮ್ಮದೇಶದಲ್ಲಾದರೂ ಅಷ್ಟೇ. ರಶಿಯದಲ್ಲಾದರೂ ಅಷ್ಟೆ. ರಾಷ್ಟ್ರ ಬೇರೆಯಾದೊಡನೆ ಜನರ ಭಾವ ಏನೂ ಬೇರೆಯಾಗುವುದಿಲ್ಲ. ರೈತರಲ್ಲಿದ್ದ ಮೂಢನಂಬಿಗೆಯೂ ಅವರ ವಿರೋಧವನ್ನು ಪ್ರಜ್ವಲಿಸಿತು. ಯಾಂತ್ರೀಕರಣಕ್ಕೆ ಅವನು ಒಪ್ಪಲಾರ. ಶತಮಾನಗಳಿಂದ ಉಪಯೋಗಿಸಿದ ಮರದ ನೇಗಿಲನ್ನೇ ಕೊರಳಿಗೆ ಕಟ್ಟಿಕೊಳ್ಳಲು ಅವನ ಇಚ್ಛೆ. 'ಹಿರಿಯರು ನಡೆಸುತ್ತಿದ್ದರು. ನಾವು ಅದನ್ನು ಬಿಡಬಾರದು 'ಎಂದು ಅವನ ವಾದ. ಅಂಧಶ್ರದ್ಧೆ ಹಳೇ ಸಂಪ್ರದಾಯಕ್ಕೆ ಆತ ಶರಣು. ಟ್ರ್ಯಾಕ್ಟರರ ಅಕರಾಳವಿಕರಾಳ ಸ್ವರೂಪ ಕಂಡು ಅದು ರಾಕ್ಷಸನ ಅವತಾರ ಎಂದರು ಗೊಡ್ಡು ಪುರಾಣ ಮತವಾದಿಗಳು. ಸೈತಾನನ ಕಪಟಜಾಲ ಎಂದು ಅದನ್ನು ಹಳಿದರು. ಬುಸುಗುಟ್ಟುವ ಭೇತಾಳವೆಂದು ಬೆದರಿದರು.

## ಕುಲಕರ ಕುಲನಾಶ

ಕುಲಕರ ವಿರೋಧವು ಪರಾಕಾಷ್ಠೆಗೆ ಮುಟ್ಟಿತು. ಕುಲಕರು ರಶಿಯದ ಜಮೀನುದಾರರು. ಅವರ ಸಂಖ್ಯೆ ೧೦ ಲಕ್ಷಕ್ಕೂ ಏರಿದ್ದಿತು. ಪರಾನ್ನಪುಷ್ಟರಾಗಿ ಬೆಳೆದ ಜನ. ಆಳು ಕಾಳುಗಳನ್ನಿಟ್ಟುಕೊಂಡು ಮೊಗಲ

ಲೀಪಿಯಿಂದ ಮೆರೆದವರು. ಸಾಮೂಹಿಕ ಕೃಷಿಕ್ಷೇತ್ರಕ್ಕೆ ಹೊಲ-ನೆಲ ಒಪ್ಪಿಸಲು, ಅಲ್ಲಿ ಕೆಲಸ ಮಾಡಲು ಅವರು ಸಿದ್ಧರಿಲ್ಲ. ಟ್ರ್ಯಾಕ್ಟರುಗಳನ್ನು ಎತ್ತಿ ಹೊಳೆಗೆಸೆದರು. ಅಧಿಕಾರಿಗಳನ್ನು ಕಡಿದೊಗೆದರು. ತಾವು ಸಾಕಿದ ದನಕರುಗಳ ಕೊರಳು ಕೊಯ್ದರು. ಇದರಿಂದ ರಶಿಯದ ಪಶುಸಂಪತ್ತಿಗೆ ಬಹಳ ಹಾನಿಯಾಯಿತು. ನೂರಕ್ಕೆ ೫೦ರಷ್ಟು ಕಟುಕರ ಪಾಲಾದುವು. ೧೯೨೯ರಲ್ಲಿ ಕುದುರೆಗಳ ಸಂಖ್ಯೆಯೇ ೩೪೦೦೦೦೦೦ ಇದ್ದುವಂತೆ. ೧೯೩೩ರಲ್ಲಿ ೧೬೦೦೦೦೦೦ಕ್ಕೆ ಇಳಿಯಿತು. ಸಾಮದಾನ ಭೇದಗಳೆಲ್ಲ ನಿಷ್ಫಲವಾದ ಮೇಲೆ ಸ್ಟ್ಯಾಲಿನ್ ದಂಡನೀತಿಯನ್ನೇ ಅವಲಂಬಿಸಿದ. ಕುಲಕರ ನಾಗುವಳಿ ನಡೆಸುದಂತೆ ಅನೇಕ ಅಡ್ಡಿ ಆತಂಕಗಳನ್ನೊಡ್ಡಲಾಯಿತು. ಅದಕ್ಕೂ ಬಗ್ಗದವರನ್ನು ಹಿಡಿದು ಸೈಬೀರಿಯಕ್ಕೆ ಕಳಿಸಿಕೊಟ್ಟರು. ಪರಶುರಾಮನಂತೆ ಸ್ಟ್ಯಾಲಿನ್ ಕುಲಕರ ಕುಲವನ್ನೇ ನಾಶಮಾಡಿದ. ಅವರೆಲ್ಲ ಪ್ರಾಣ ಕಳೆದುಕೊಂಡರೆಂದರ್ಥವಲ್ಲ. ಜಮೀನ್ದಾರೀ ಪದ್ಧತಿಗೇ ಕೊಡಲಿಯನ್ನೆಸೆದ. ಇದರಿಂದ ಚಿಕ್ಕ ಚಿಕ್ಕ ಜಮೀನ್ದಾರರೂ ಕಣ್ತೆರೆದು ಸಾಮೂಹಿಕ ಕೃಷಿಕ್ಷೇತ್ರಗಳಿಗೊಪ್ಪಿದರು. ಅಂತೂ ಯೋಜನೆಯನ್ನು ಯಶಸ್ವಿಗೊಳಿಸಲು ಸ್ಟ್ಯಾಲಿನ್‌ನಿಗೆ ಮೂರು ನಾಲ್ಕು ವರುಷಗಳು ಹಿಡಿದುವು. ೧೯೩೮ರಲ್ಲಿ ನೂರಕ್ಕೆ ೯೯ ೩ರಷ್ಟು ಭೂಭಾಗವು ಸಾಮೂಹಿಕ ಒಕ್ಕಲುತನಕ್ಕೊಳಗಾಯಿತು. ಬಲಪ್ರಯೋಗದಿಂದ ಈ ಯೋಜನೆಗೆ ಯಶ ದೊರೆಯಿತೆಂದೂ, ಕುಲಕರ ಮೇಲೆ ಕೈಯೆತ್ತಬಾರದಿತ್ತೆಂದೂ ಅನೇಕರು ಸ್ಟ್ಯಾಲಿನ್ನನನ್ನು ಟೀಕಿಸಿದ್ದಾರೆ. ಬುಖಾರಿನ್ ಕಾಮೆನೆವ್, ಜಿನೊವಿವ್ ಮೊದಲಾದ ರಶಿಯದ ಮುಖಂಡರೂ ಸ್ಟ್ಯಾಲಿನ್‌ನನ್ನು ಖಂಡಿಸಿದರು. ಆದರೆ ದೇಶದ ಪುನರ್ರಚನೆಗೆ ಕೈಹಾಕಿದಾಗ ಸರ್ವಜನ ಹಿತದೃಷ್ಟಿಯಿಂದ ಉಗ್ರ ಉಪಾಯಗಳನ್ನು ಕೈಕೊಳ್ಳುವ ಪ್ರಸಂಗಗಳು ಬರುವುದುಂಟು. ಅದನ್ನು ತೆಗೆದುಕೊಳ್ಳಲು ಹಿಂಜರಿದರೆ ಹಿತದ ಬದಲು ಅಹಿತವೇ ಆಗಬಹುದು.

## ಕೃಷಿ ಹೇಗೆ ನಡೆಯುತ್ತಿದೆ ?

ಕಾರ್ಖಾನೆಗಳಂತೆಯೇ ಕೃಷಿಕ್ಷೇತ್ರಗಳ ಆಡಳಿತೆ ನಡೆದಿದೆ. ಆಡಳಿತೆ ಸಮಿತಿಯಲ್ಲಿರುವವರೆಲ್ಲರೂ ರೈತ ಪ್ರತಿನಿಧಿಗಳು. ರೈತರೂ ಇವರೂ ಕೂಡಿ ವರುಷದ ಉತ್ಪಾದನೆ, ಆವಶ್ಯವಿದ್ದ ಯಂತ್ರ, ಗೊಬ್ಬರ ಮೊದಲಾದವುಗಳನ್ನು

ನಿರ್ಣಯಿಸುವರು. ಕೃಷಿಯಲ್ಲೂ ಬೇಸಾಯ, ತೋಟಗಾರಿಕೆ, ಗೋಪಾಲನೆ, ಮನೆಕಟ್ಟುವ ಕೆಲಸ, ಹಾದಿ ಬೀದಿ, ಶಿಕ್ಷಣ, ಟ್ರ್ಯಾಕ್ಟರ್ ನಡೆಸುವವರು ಮೊದಲಾದ ಅನೇಕ ವಿಭಾಗಗಳಿರುವವು. ಕೆಲಸ ಸುಸೂತ್ರವಾಗಿ ಸಾಗಲು ಪ್ರತ್ಯಪ್ರತ್ಯೇಕ ತಂಡಗಳಾಗಿ ಇವರು ದುಡಿಯುವರು. ಯಾರು ಯಾರು ಯಾವ ಯಾವ ಕೆಲಸ ಮಾಡಬೇಕೆಂದು ಆಡಳಿತಕಮಿಟಿಯವರು ನಿಶ್ಚಯಿಸಿರುವರು. ಯಾರಿಗೆ ಯಾವ ಕೆಲಸದಲ್ಲಿ ಪ್ರೀತಿಯಿದೆಯೋ ಅದನ್ನೇ ಆರಿಸಿಕೊಳ್ಳಲು ಸ್ವಾತಂತ್ರ್ಯವುಂಟು. ಆ ಕೆಲಸದಲ್ಲಿ ನೈಪುಣ್ಯಪಡೆಯಲು ಬೇಕಾದ ಎಲ್ಲ ಶಿಕ್ಷಣವನ್ನು ದಯಪಾಲಿಸಲಾಗುತ್ತಿದೆ. ಕೃಷಿಕ್ಷೇತ್ರಗಳ ಸಮೀಪದಲ್ಲೇ ಅದಕ್ಕೆ ತಕ್ಕ ಶಿಕ್ಷಣಶಾಲೆಗಳಿರುವವು. ಕೂಲಿಕಾರರಲ್ಲಿ ಹೆಣ್ಣು ಮಕ್ಕಳ ಸಂಖ್ಯೆಯೂ ವಿಶೇಷವಿದೆ ೧೯೩೭ರಲ್ಲಿ ಈ ಕೃಷಿಕ್ಷೇತ್ರಗಳಲ್ಲಿ ದುಡಿವವರ ಸಂಖ್ಯೆ ನೂರಕ್ಕೆ ೩೩ರಷ್ಟಿದ್ದಿತು. ಅವರಿಗೂ ಗಂಡಸರಷ್ಟೇ ಕೂಲಿ. ಈ ವೇತನವನ್ನು ಸರಕಾರವೇ ಕೊಡುತ್ತಿದೆ. ಇದಲ್ಲದೆ ಬೆಳೆಯಲ್ಲಿಯೂ ಸ್ವಲ್ಪಾಂಶ ಅವರಿಗೆ ಸಿಗುತ್ತಿದೆ. ಅದಕ್ಕೊಂದು ಪ್ರಮಾಣವುಂಟು. ಬೆಳೆಯಲ್ಲಿ ಟ್ರ್ಯಾಕ್ಟರದ ಬಾಡಿಗೆ, ಕೆಂಪು ಸೇನೆಗೆ ಮತ್ತು ಶಿಶುಸಂಗೋಪನಕ್ಕೆ ಸ್ವಲ್ಪ ಭಾಗ ಸಲ್ಲುವುದು. ಉಳಿದುದನ್ನು ರೈತರೇ ಹಂಚಿಕೊಳ್ಳುವರು.

**ಸುಖಸೌಕರ್ಯ**

ಔದ್ಯೋಗಿಕ ಕೂಲಿಕಾರರು ಮತ್ತು ರೈತರು ಇವರೊಳಗೆ ಸರಕಾರವು ಯಾವ ಭೇದವನ್ನೂ ಕಲ್ಪಿಸಿಲ್ಲ. ಸರಕಾರದ ದೃಷ್ಟಿಯಲ್ಲಿ ಎಲ್ಲರೂ ಒಂದೆ. ನಾಲ್ಕು ಮಕ್ಕಳ ತಾಯಿಯ ಹಾಗೆ. ಆದುದರಿಂದ ರೈತರ ಸುಖ, ಹಿತ, ಉದ್ಧಾರಕ್ಕಾಗಿಯೂ ಅನೇಕ ಸೌಕರ್ಯಗಳನ್ನು ಒದಗಿಸಿರುವರು. ಇವುಗಳಲ್ಲಿ ಕ್ಲಬ್, ಪುಸ್ತಕಭಾಂಡಾರ, ಸಿನಿಮಾ, ಉಪಹಾರಗೃಹ, ಶಿಶುಸಂಗೋಪನ ಕೇಂದ್ರ, ಕಿಂಡರ್‌ಗಾರ್ಟನ್‌ಶಾಲೆ ಮೊದಲಾದವು ಮುಖ್ಯ. ರೈತರಿಗೆ ಕೃಷಿಕೇಂದ್ರಗಳಲ್ಲಿ ಅತ್ಯಾಧುನಿಕ ಬೇಸಾಯ ಪದ್ಧತಿಗಳ ಶಿಕ್ಷಣ ಕೊಡುವರು. ಯಂತ್ರತಂತ್ರಗಳ ಮರ್ಮ ತಿಳಿಸುವರು. ಪ್ರತಿಯೊಬ್ಬನೂ ಅವನ ಕಸುಬಿನಲ್ಲಿ ನಿಷ್ಣಾತನಾಗಬೇಕೆಂಬುದೇ ಸರಕಾರದ ಲವಲವಿಕೆ. ಸರಕಾರದ ಉತ್ತೇಜನದಿಂದ ರಶಿಯದ ರೈತ ವಿಜ್ಞಾನವನ್ನು ತನ್ನ ಕೈಕೂಸನ್ನಾಗಿಮಾಡಿ

ಕೊಂಡಿದ್ದಾನೆ. ಕೃಷಿಗಾಗಿ ರಶಿಯವು ವಿಜ್ಞಾನದ ಉಪಯೋಗಮಾಡಿ ಕೊಂಡಂತೆ ಇನ್ನಾವ ರಾಷ್ಟ್ರವೂ ಮಾಡಿಕೊಂಡಿಲ್ಲ. ರೈತರಿಗಾಗಿ ೫ಲಕ್ಷ ಟ್ರ್ಯಾಕ್ಟರುಗಳನ್ನು ಕೊಟ್ಟಿರುವರು. ಬೆಳೆ ಕೊಯ್ಯುವ ಯಂತ್ರಗಳು ೨ ಲಕ್ಷ. ಪಶುವೈದ್ಯರು ೩೫ ಸಾವಿರವಿದ್ದಾರೆ ೨೫ ಸಾವಿರ ವಿಜ್ಞಾನಿಗಳು ಕೃಷಿಸಂಶೋಧನೆ ನಡೆಸಿ ರೈತನಿಗೆ ಅದರ ಪರಿಜ್ಞಾನಮಾಡಿಕೊಡುತ್ತಿದ್ದಾರೆ. ಮಿಡಿತೆಗಳ ಉಪಟಳವನ್ನು ಹುಟ್ಟಡಗಿಸುವುದಕ್ಕಾಗಿ ವಿಮಾನಗಳ ಮೂಲಕ ವಿಷದ್ರವ ಚಿಮುಕಿಸುವ ವಿಧಾನವನ್ನು ಕಂಡು ಹಿಡಿದವರು, ಪ್ರಯೋಗಿಸಿ ದವರು ರಶಿಯದ ಕೃಷಿಕರು. ನೆಲದ ಏಳೆಂಟು ಅಡಿ ಎತ್ತರದಲ್ಲೇ ಈ ವಿಮಾನಗಳು ಹಾರಿ ದ್ರವವನ್ನು ಪ್ರೋಕ್ಷಿಸುತ್ತಿವೆ. ಗಿಡದಲ್ಲೇ ಬಣ್ಣ ಬಣ್ಣದ ಅರಳೆಯನ್ನು ಬೆಳೆಸುತ್ತಿರುವರಂತೆ.

ರಶಿಯದಲ್ಲಿ ರೈತನ ಭಾಗ್ಯೋದಯವಾಗಿದೆ. ಜಮೀನುದಾರ ಸರ್ಪ ಹೆಡೆ ಅರಳಿಸುವಂತಿಲ್ಲ. ಅದರ ನೆಳಲಲ್ಲಿ ರೈತ ಕಪ್ಪೆ ಬದುಕಬೇಕಾಗಿಯೂ ಇಲ್ಲ. ಎತ್ತು ಕುದುರೆ ಸತ್ತರೆ, ಮುಪ್ಪಾದರೆ ಒಕ್ಕಲುತನಕ್ಕೇನು ಗತಿ ಯೆಂದು ರಶಿಯದ ರೈತರು ನೆತ್ತಿಗೆ ಕೈಯಿಟ್ಟು ಮೊರೆಯಿಡುವ ಕಾಲವೂ ಹೋಯ್ತು. ಟ್ರ್ಯಾಕ್ಟರ್ ಬುಸುಗುಟ್ಟುತ್ತ ಹಳ್ಳಿಗೆ ಬಂದಾಗಲೇ ಭಾಗ್ಯ ತಂದಿತು. ಈಗ ರಶಿಯದ ರೈತ ಟ್ರ್ಯಾಕ್ಟರ ಕಂಡೊಡನೆಯೇ ಬೆದರಲಾರ. ನೆಟಿಕೆ ಮುರಿಯಲಾರ. ಸೈತಾನನ ಕಪಟಜಾಲವೆನ್ನುವುದರ ಬದಲು ದೈವೀ ಕೃಪೆಯೆಂದೆನ್ನುವ. ಅದರ ಗುಣಗಾನಮಾಡುವನು. ಇದು ಸಾಮ್ಯವಾದದ ಕಬ್ಬಿಣದ ಕುದುರೆಯೆಂದು ರಶಿಯದ ಕವಿಯು ಹಾಡಿ ಟ್ರ್ಯಾಕ್ಟರ್‌ಗೆ ಅಮರತ್ವ ಕೊಟ್ಟಿದ್ದಾನೆ. ಒಕ್ಕಲಿಗರು ಹೆಣ್ಣು ಗಂಡು ಎಲ್ಲ ಈಗ ನಿರ್ಭೀತಿ ಯಿಂದ ಅದರ ಬೆನ್ನೇರಿ ಸವಾರಿ ಮಾಡುತ್ತಿದ್ದಾರೆ.

—

## ಅಕ್ಕನ ಬಳಗ

ಜನಿತಕ್ಕೆ ತಾಯಾಗಿ ಹುಟ್ಟಿದಳು ಮಾಯೆ; ಕೂಟಕ್ಕೆ ಸ್ತ್ರೀಯಾಗಿ ಬಂದಳು ಮಾಯೆ; ಮೋಹಕ್ಕೆ ಸುತೆಯಾಗಿ ಜನಿಸಿದಳು ಮಾಯೆ; ಎಂದು ಬಸವೇಶ್ವರರು ನುಡಿದು, ಹೆಣ್ಣು ಆದಿಮಾಯೆಯು ಅವತಾರವೆಂದಿದ್ದಾರೆ. ಸಂಸಾರದಲ್ಲಿ, ಸಮಾಜದಲ್ಲಿ, ರಾಜ್ಯದಲ್ಲಿ ಅವಳ ಪಾತ್ರವೇ ಮುಖ್ಯ. ಹೆಣ್ಣಿನಿಂದಲೇ ಮೈ. ಮಣ್ಣು. ಮನೆ. ಮಾರು. ಮನುಷ್ಯಜೀವಸಕ್ಕೆ ಸುಖ ತಂದವಳು, ಸೌಂದರ್ಯ ಕೊಟ್ಟವಳು, ಸವಿಯುಣ್ಣಿಸಿದವಳು ಅವಳೇ. ಮಾನವ ವಂಶವು ಅಮರತ್ವವನ್ನು ಪಡೆದುದೂ ಹೆಣ್ಣಿನಿಂದಲೇ.

**ಅಧೋಗತಿ**

ಆದರೆ ಜಗತ್ತಿನಲ್ಲಿ ಪುರುಷನದೇ ಪ್ರಾಬಲ್ಯ. ಹೆಣ್ಣಿನ ಮೇಲೆ ಅವನದು ಸ್ವಚ್ಛಂದಾಧಿಕಾರ. ಸುಂದರವಾದ ಅರಗಿಳಿ, ಮೈನಾ ಹಕ್ಕಿಯನ್ನು ಪಂಜರದಲ್ಲಿಟ್ಟಂತೆ ಹೆಣ್ಣನ್ನು ಬಂಧನದಲ್ಲಿಟ್ಟಿದ್ದಾರೆ. ಅವಳ ಕರ್ತೃತ್ವ ಬೇರೆ. ಹೀಗಾಗಿ ಶರೀರದಲ್ಲಿ ಸ್ವಲ್ಪ ವ್ಯತ್ಯಾಸವುಂಟು. ಇದೇ ಒಂದು ಕುಂಟುನೆವದಿಂದ ಅವಳನ್ನು ಅಬಲೆಯೆಂದು ಕರೆದ. ಜರೆದ. ಜಗ್ಗಿದ. ಮೂಲೆಗೊತ್ತಿದ ಹೆಣ್ಣು ಅಡಿಗೆಮನೆ ಸೇರಿದಳು. ಲಗ್ನ, ಗಂಡ, ಮಕ್ಕಳುಮರಿ ಇವರ ಲಾಲನೆ, ಪಾಲನೆ ಅವಳ ಆಯುಷ್ಯಕರ್ಮ. ಹೊಸ್ತಿಲು ದಾಟಿ ಬರಬಾರದಂತೆ, 'ಪತಿಯೇ ಪರದೈವ' ಮೊದಲಾದ ಏಕಪಕ್ಷೀಯ ಶಾಸ್ತ್ರ ಪುರಾಣಗಳ ಕಟ್ಟುಕತೆಗಳನ್ನು ಒರೆದು ಅವಳ ಮುಂದೆ ಗುಡ್ಡದಂತೆ ಒಟ್ಟಿದ. ಸಂಪ್ರದಾಯ, ಸದಾಚಾರ, ಧರ್ಮ, ದೈವಜ್ಞತೆಗಳೆಂಬ ಸಂಕೋಲೆಗಳ ಮುಳ್ಳುಮೇಲಿ ಜಿಗಿದ. ತಾನು ಸ್ವೇಚ್ಛಾಚಾರಿಯಾದ. ಹೆಣ್ಣನ್ನು ಬರಿ ಭೋಗ್ಯವಸ್ತುವನ್ನಾಗಿ ಮಾಡಿಕೊಂಡ. ಸ್ತ್ರೀ, ಪುರುಷನ ಪಾಶಪೀಶಕ್ತಿಯ ಗುಲಾಮಳಾದಳು. ಹಿಂದುಸ್ತಾನ, ಚೀನಗಳಲ್ಲಿ ಇದೇ ರೀತಿಯ ದಾಸ್ಯ. ಸ್ತ್ರೀಸ್ವಾತಂತ್ರ್ಯವೆಂದು ಬೊಬ್ಬೆಯೆಬ್ಬಿಸಿರುವ ಅಮೇರಿಕ, ಬ್ರಿಟನ್, ಜರ್ಮನಿ, ಫ್ರಾನ್ಸ್ ಮೊದಲಾದ ದೇಶಗಳಲ್ಲೂ ಅಷ್ಟೇ. ಬರೀ ಗುಲ್ಲು; ಸಿದ್ದೆಗೇಡು. ಹೆಣ್ಣಿಗೆ ಆರ್ಥಿಕ, ರಾಜಕೀಯ ಸ್ವಾತಂತ್ರ್ಯವಿಲ್ಲ. ಸರಿಸಮಾನತೆಯಿಲ್ಲ.

### ರಶಿಯದ ಮಹಿಳೆಯರು

ಅಕ್ಟೋಬರಕ್ರಾಂತಿಯ ವರೆಗೆ ರಶಿಯದ ಹೆಣ್ಣುಮಕ್ಕಳು ಅಧೋಗತಿಯಲ್ಲಿದ್ದರು. ಏಶಿಯದ ಭಾಗದಲ್ಲಂತೂ ಅವರದು ನಾಯಿಪಾಡು. ೧೦, ೧೨ರ ಒಳಗಿನ ಎಳೆ ವಯಸ್ಸಿನಲ್ಲೇ ಲಗ್ನ. ಹೆಣ್ಣು ಹುಟ್ಟುವುದೇ ದೊಡ್ಡ ಪಾಪವೆಂಬ ಭಾವನೆ ಅವರಲ್ಲಿ. ಹೊಸ್ತಿಲು ದಾಟಿಸಿ ಬಿಡಲು ಯಾರ ಕೊರಳಿಗಾದರೂ ಕಟ್ಟಿಬಿಡುತ್ತಿದ್ದರು. ಅವನು ಕುಂಟ, ಕುರುಡ, ತುಂಟ, ನೂರೆಂಟು ವರುಷದವನೆಂಬುದನ್ನು ವಿಚಾರಮಾಡುತ್ತಿರಲಿಲ್ಲ. ಓದುಬರಹವಿದ್ದವರೂ ಕಡಿಮೆ. ಶ್ರೀಮಂತರಿಗೆ ಮಾತ್ರ ವಿದ್ಯಾಭ್ಯಾಸದ ಸೌಕರ್ಯ. ಹಳ್ಳಿಪಳ್ಳಿಗಳು ಅಜ್ಞಾನದ ತವರೂರುಗಳೇ ಆಗಿದ್ದುವು. ಮುಸಲ್ಮಾನರಲ್ಲಿ ಘೋಷಾಪದ್ಧತಿ. ಅವರ ಸಂಖ್ಯೆ ರಶಿಯದಲ್ಲಿ ಒಂದಾರರಷ್ಟು. ಇದು ಕಡಿಮೆಯೇನೂ ಅಲ್ಲ. ಗಂಡ ಕಣ್ಮುಚ್ಚಿದೊಡನೆಯೇ ಆ ಹೆಣ್ಣು, ಅವಳ ಒಡವೆ ಉಳಿದವರ ವಶವಾಗುತ್ತಿತ್ತು. ಬಹುಪತ್ನಿತ್ವವು ಸಾಂಕ್ರಾಮಿಕ ರೋಗದಷ್ಟು ವ್ಯಾಪಕ. ಹೆಣ್ಣುಮಕ್ಕಳನ್ನು ಪೇಟೆಯಲ್ಲಿ ತರಕಾರಿಯಂತೆ ಮಾರಾಟ ಮಾಡುತ್ತಿದ್ದರು. ವೇಶ್ಯಾವೃತ್ತಿ ದಿನೇ ದಿನೇ ಹೆಚ್ಚುತ್ತಿತ್ತು. ಪ್ರಸೂತಿ ಕಾಲದಲ್ಲಿ ಸಾಯುವ ಹೆಣ್ಣುಮಕ್ಕಳಿಗಂತೂ ಲೆಕ್ಕವೇ ಇಲ್ಲ. ಶಿಶುಗಳ ಮರಣವೂ ವಿಶೇಷ. ಯುಗಯುಗಾಂತರಗಳ ಹಿಂದಿನ ಮೂಢ ಭಕ್ತಿ, ಅಂಧ ಶ್ರದ್ಧೆ, ಆಚಾರ-ವಿಚಾರ ಜನಜೀವನದೊಂದಿಗೆ ಬಿಡಿಸಲಾಗದ ರೀತಿಯಲ್ಲಿ ಬೆರೆತು ಹೋಗಿದ್ದುವು. ಎಷ್ಟೋ ರಾಜ್ಯಗಳು ಮಣ್ಣು ಮುಕ್ಕಿದುವು. ಹೊಸವು ತಲೆ ಎತ್ತಿದುವು. ಆದರೂ ಇವು ಹೋಗಲಿಲ್ಲ. 'ಬೇಡ. ಏಳೇಳು ಜನ್ಮಕ್ಕೂ ಹೆಣ್ಣು ಜನ್ಮ ಬೇಡ. ತಂದೆ' ಎಂದು ಅವಳು ನೊಂದು ನೊಂದು ಬಿಸಿಯುಸಿರು ಬಿಡುವಂತೆ ಮಾಡಿದ್ದರು. ಅವಳ ವಿಮೋಚನೆಯಾಗಬೇಕಾದರೆ ಬಾಲ್ಶೆವಿಕರು ಬರಬೇಕಾಯಿತು.

### ಸ್ವಾತಂತ್ರ್ಯ

ಈಶಸೃಷ್ಟಿಯಲ್ಲಿ ಹೆಣ್ಣುಗಂಡು ಎಲ್ಲ ಒಂದೆ. ಹೆಣ್ಣು ಗಂಡಿನಂತೆಯೇ ಮಾನವಳು. ಆದುದರಿಂದ ಗಂಡಸಿಗೆ ಎಷ್ಟು ಅಧಿಕಾರವಿದೆಯೋ ಹಕ್ಕಿದೆಯೋ ಅಷ್ಟೇ ಇದೆ ಅವಳಿಗೆ ಕೂಡಾ. ಲಿಂಗಭೇದವಿದ್ದೊಡನೆಯೇ ಅವಳು ಅನರ್ಹಳಾಗುವುದಿಲ್ಲ. ಇದನ್ನು ಬಾಲ್ಶೆವಿಕರು ಮನ್ನಿಸಿ, ಸ್ತ್ರೀಯರಿಗೆ

ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಸ್ವಾತಂತ್ರ್ಯ ಕೊಟ್ಟರು. ಇದನ್ನು ಆಚರಣೆಯಲ್ಲಿ ತರಬೇಕಾದರೆ ಬಹಳ ಪರಿಶ್ರಮಪಡಬೇಕಾಯಿತು. ಲಜ್ಜೆಯಿಂದ ಸ್ತ್ರೀಯರೇ ಮುಂದೆ ಬರುತ್ತಿರಲಿಲ್ಲ. ಹೇಸುತ್ತಿದ್ದರು. ಪುರುಷರಿಗೂ ಸಂಶಯ. ಕಟ್ಟುಪಾಡುಗಳ ಬಂಧನ ಒಂದೆಡೆ. ಸನಾತನಿಗಳ ಬೊಬ್ಬೆ ಇನ್ನೊಂದೆಡೆ. ಈ ನೂರಾರು ಅಡೆತಡೆಗಳನ್ನು ಪರಿಹರಿಸಿಕೊಂಡುದುದು ಮಹತ್ತರವಾದ ಕೆಲಸ. ಅದಕ್ಕಾಗಿ ಸ್ಟ್ಯಾಲಿನ್ ರಶಿಯವು ಮೊದಲು ಸ್ತ್ರೀ-ಮುಂದಾಳುಗಳ ಸಹಾಯ ಪಡೆಯಿತು. ಅಲ್ಲಲ್ಲಿ ಸ್ತ್ರೀಯರ ಸಭೆಗಳನ್ನು ಕೂಡಿಸಿದರು. ಸೇಕಾರ ಸ್ತ್ರೀಯರ ಸಂಘ ಸ್ಥಾಪಿಸಿದರು. ಕ್ಲಬ್‌ಗಳನ್ನು ತೆರೆದರು. ಇಲ್ಲಿ ಸ್ತ್ರೀ ಸುಧಾರಣೆಯ ಬಗೆಗೆ ಪ್ರಚಾರ ನಡೆಯಿತು. ವಿದ್ಯಾ-ದಾನ ಮಾಡಿದರು. ಸ್ತ್ರೀ ಕೂಲಿಕಾರರಿಗೆ ಪುರುಷರಷ್ಟೇ ವೇತನವನ್ನಿತ್ತರು. ಶಿಶುಗಳಿಗಾಗಿ ಪುಕ್ಕಟೆ ಹಾಲನ್ನೊದಗಿಸಿದರು. ಇದರ ಪರಿಣಾಮ ಸ್ತ್ರೀಯರ ಮೇಲೆ ಆಗದೇ ಇರಲಿಲ್ಲ. ಒಂದು ದಿನ ಅವರೆಲ್ಲ ಒಟ್ಟುಗೂಡಿ ಘೋಷೆಯನ್ನು ಹರಿದೆಸೆದು ಬೆಂಕಿಕೊಟ್ಟರು. ಅಡಿಗೆಮನೆಯಿಂದ ಹೊರಗೆ ಬಂದರು. ಈ ಸ್ವಾತಂತ್ರ್ಯಕ್ಕಾಗಿ ಅನೇಕ ಸ್ತ್ರೀಯರು ವಿಧವಿಧದ ಕಷ್ಟನಷ್ಟಗಳನ್ನು ಸಹಿಸಬೇಕಾಗಿ ಬಂದಿತು. ಕೆಲವು ಕಡೆ ಹಳ್ಳಿಯ ಜನರು ಒಟ್ಟುಗೂಡಿ ಸ್ತ್ರೀ-ಸ್ವಾತಂತ್ರ್ಯವನ್ನು ಪ್ರತಿಪಾದಿಸಿದವರ ಮನೆಗಳಿಗೆ ಬೆಂಕಿಕೊಟ್ಟರು. ಅನೇಕ ಗಂಡಂದಿರು ಹೆಂಡಂದಿರನ್ನು ಬಡಿದರು. ಪ್ರಾಣವನ್ನರ್ಪಿಸಿದ ಹುತಾತ್ಮರೂ ಇದ್ದಾರೆ. ಹೊಸ ವಾತಾವರಣಕ್ಕೆ ಸರಿಯಾಗಿ ಹೊಂದಿಕೊಳ್ಳಲು ಪುರುಷರಿಗೆ ಬಹಳ ಸಮಯ ಹಿಡಿಯಿತು.

## ಉದ್ಯೋಗಗಳಲ್ಲಿ ಸ್ತ್ರೀಯರು

ಸೋವಿಯೆಟ್ ಯೂನಿಯನ್‌ದಲ್ಲಿ ಎಲ್ಲ ಉದ್ಯೋಗಗಳಲ್ಲೂ ಸ್ತ್ರೀಯರಿಗೆ ಮುಕ್ತದ್ವಾರವಿದೆ. ಸ್ತ್ರೀಯರಿಗೆ ಆರ್ಥಿಕ ಸ್ವಾತಂತ್ರ್ಯ ಕೊಟ್ಟುದುದು ಹಾಗೆ. ಗಂಡಸರೇ ಮಾಡಬೇಕಾದ ಕೆಲಸ, ಹೆಣ್ಣುಮಕ್ಕಳು ಮಾಡಬೇಕಾದ ಕೆಲಸವೆಂಬ ಬೇಲಿ ಹಾಕಿರುವುದಿಲ್ಲ. ಸಂಪಾದನೆಗಾಗಿ ಸ್ತ್ರೀಯರಿಗೆ ಅವಕಾಶ ದೊರೆಯುವಂತೆ ಸಾರ್ವಜನಿಕ ಊಟದ ವ್ಯವಸ್ಥೆ ಮಾಡಿರುವರು. ಕೈಗಾರಿಕೆಗಳಲ್ಲಿ ದುಡಿವವರು ಇಲ್ಲೇ ಊಟಮಾಡುವರು. ಇಂತಹ ಸಾರ್ವಜನಿಕ ಊಟದ ಮನೆಗಳು ದೇಶದಲ್ಲಿ ೩೦ಸಾವಿರವಿವೆ. ಮಾಸ್ಕೋ

ಪ್ರಾಂತದ ತುಲಾ ಎಂಬಲ್ಲಿಯ ಒಂದು ಕಾರ್ಖಾನೆಯಲ್ಲಿ ೧೫ಸಾವಿರ ಜನರಿಗೆ ಊಟದ ಏರ್ಪಾಡು ಮಾಡಿದ್ದಾರೆ. ಇಲ್ಲಿ ಲಾಭದ ದೃಷ್ಟಿಯೂ ಇಲ್ಲ. ಅಗ್ಗದರದಲ್ಲಿ ಶ್ರೇಷ್ಠ ಆಹಾರ. ಪ್ರಾಯಶಃ ಸ್ತ್ರೀಯರನ್ನು ಅಡಿಗೆಮನೆಗಳಿಂದ ಹೊರಗೆಳೆಯಲು ಸರಕಾರವು ಈ ಸಾರ್ವಜನಿಕ ಊಟದ ವ್ಯವಸ್ಥೆ ಮಾಡಿರಬೇಕು! ೧೮೯೭ರಲ್ಲಿ ಜನಗಣನೆ ತೆಗೆದಾಗ ಉದ್ಯೋಗದಲ್ಲಿರುವ ರಶಿಯದ ಸ್ತ್ರೀಯರಲ್ಲಿ ನೂರಕ್ಕೆ ೫೫ರಷ್ಟು ಜಮೀನ್ದಾರರಲ್ಲಿ ವ್ಯಾಪಾರಿಗಳಲ್ಲಿ, ಶ್ರೀಮಂತರಲ್ಲಿ ತೊತ್ತುಗಳಾಗಿದ್ದರು. ಈಗ ಆ ಪದ್ಧತಿಯೇ ಇಲ್ಲ. ಇನ್ನು ಮನೆಗೆಲಸಮಾಡುವ ಸ್ತ್ರೀಯರು ಯಾರೂ ಇಲ್ಲವೇ? ಇದ್ದಾರೆ ಅವರ ಸಂಖ್ಯೆ ಬಹಳ ಇಳಿದಿರುವುದು. ಉದ್ಯೋಗಹೊಂದದ ಸ್ತ್ರೀಯರಲ್ಲಿ ಮನೆಗೆಲಸಮಾಡುವವರು ನೂರಕ್ಕೆ ಇಬ್ಬರು. ಈಗ ಎಲ್ಲ ಉದ್ಯೋಗಗಳಲ್ಲೂ ಅವರಿಗೆ ಪ್ರವೇಶ ದೊರೆತಿರುವುದರಿಂದ ಹೆಣ್ಣು ಹೆರವರ ತೊತ್ತಾಗಿ ಬಾಳಬೇಕಾಗಿರುವುದಿಲ್ಲ. ಈಗ ೫ಲಕ್ಷ ಸ್ತ್ರೀಯರು ರೇಲ್ವೆ ಖಾತೆಯಲ್ಲಿದ್ದಾರೆ. ೪೦೦ಸ್ಟೇಶನ್ ಮಾಸ್ತರರು, ೧೪೦೦ ಅಸಿಸ್ಟಂಟ್ ಸ್ಟೇಶನ್ ಮಾಸ್ಟರರು ಸ್ತ್ರೀಯರು. ರೇಲ್ವೆ ಇಂಜಿನಿಯರರಲ್ಲಿ ೧೦ ಸಾವಿರ ಸ್ತ್ರೀಯರಿದ್ದಾರೆ. ಬೇರೆ ಬೇರೆ ವಿಷಯಗಳಲ್ಲಿ ಪಾರಂಗತರಾದ ಇಂಜಿನಿಯರರ ಸಂಖ್ಯೆ ೧ ಲಕ್ಷ ಇದೆ ಇಡೀ ದೇಶದಲ್ಲಿ. ದೇಶದ ಡಾಕ್ಟರರಲ್ಲಿ ನೂರಕ್ಕೆ ೫೦·೬ರಷ್ಟು ಸ್ತ್ರೀಯರು. ಅವರ ಸಂಖ್ಯೆ ೭೦ಸಾವಿರ. ಉಪಾಧ್ಯಾಯರ ಕೆಲಸದಲ್ಲಿ ಗಂಡಸರಿಗಿಂತ ಅವರೇ ಹೆಚ್ಚು. ನೂರಕ್ಕೆ ೬೪.೮ರಷ್ಟು ಸ್ತ್ರೀಯರಿದ್ದಾರೆ. ೧೨೫೦೦ ಮಹಿಳೆಯರು ವಿಜ್ಞಾನಿಗಳಾಗಿರುವರು. ೧ ಕೋಟಿ ೯೦ಲಕ್ಷ ಸ್ತ್ರೀಯರು ಸಾಮೂಹಿಕ ಕೃಷಿಕ್ಷೇತ್ರಗಳಲ್ಲೂ ದುಡಿಯುತ್ತಿರುವರು. ಬರಿ ಟ್ರ್ಯಾಕ್ಟರ್ ನಡೆಸುವವರೇ ೫ ಲಕ್ಷ. ವಿಮಾನ, ಹಡಗ, ಸೇನೆಗಳಲ್ಲೂ ೪೦ಲಕ್ಷ ಸ್ತ್ರೀಯರಿರುವರು. ಕೆಲವು ಸ್ತ್ರೀಯರು ಸೇನಾಧಿಪತ್ಯಕ್ಕೆ ಅರ್ಹರಾಗಿರುವರು. ಸೋವಿಯೆಟ್ ಯೂನಿಯನ್‌ದ ನ್ಯಾಯಾಧೀಶರಲ್ಲಿ ಒಂದು ನಾಲ್ಕನೇ ಅಂಶದಷ್ಟು ಸ್ತ್ರೀಯರಿದ್ದಾರೆ.

**ರಾಜ್ಯಭಾರ**

ಉದ್ಯೋಗಗಳಲ್ಲಿ ಸೇರಿಸಿಕೊಂಡು ಸೋವಿಯೆಟ್ ಯೂನಿಯನ್‌ದ ಮಹಿಳೆಯರಿಗೆ ಆರ್ಥಿಕ ಸ್ವಾತಂತ್ರ್ಯ ಕೊಟ್ಟರೇನೋ ನಿಜ. ಆದರೆ ಅಷ್ಟೇ

ಅಲ್ಲ ದೇಶದ ಆಡಳಿತೆಯಲ್ಲೂ ಅವಳಿಗೆ ಸಮಾನವಾದ ಹಕ್ಕನ್ನು ಕೊಟ್ಟಿದ್ದಾರೆ. ರಾಜ್ಯಭಾರದ ಹೊಣೆಯನ್ನು ಅವಳು ಹೊತ್ತಿರುವಳು. ಸುಪ್ರೀಂ ಪಾರ್ಲಿಮೆಂಟಿಗೆ ೧೮೯ ಸ್ತ್ರೀಯರು ಪ್ರತಿನಿಧಿಗಳಾಗಿ ಆರಿಸಿ ಬಂದಿರುವರು. ವಿವಿಧ ರಿಪಬ್ಲಿಕ್‌ಗಳ ಪಾರ್ಲಿಮೆಂಟಿನಲ್ಲೂ ೮೪೮ ಪ್ರತಿನಿಧಿಗಳಿರುವರು. ಸೋವಿಯೆಟ್ ಯೂನಿಯನ್‌ದ ಮೀನುಕೈಗಾರಿಕೆಯ ಮಂತ್ರಿ ಪೌಲೀನಾ. ಬೇರೆ ಬೇರೆ ರಿಪಬ್ಲಿಕ್‌ಗಳಲ್ಲಿ ಒಟ್ಟು ೧೩ ಸ್ತ್ರೀಯರು ಮಂತ್ರಿಪದವಿಯನ್ನು ಸ್ವೀಕರಿಸಿರುವರು. ಅಜರ್‌ಬೈಜಾನ್ ರಿಪಬ್ಲಿಕದಲ್ಲಿ ಫರಜಾದೆ ಎಂಬ ಹೆಣ್ಣುಮಗಳು ಆರೋಗ್ಯಖಾತೆಯ ಮಂತ್ರಿ. ಅಲ್ಲಿಬಾಯುವ್ವಳು ಟರ್ಕ್‌ಮೆನಿಸ್ತಾನ್ ರಿಪಬ್ಲಿಕ್‌ದ ಕೈಗಾರಿಕೆಯ ಮಂತ್ರಿ. ಸೋವಿಯೆಟ್‌ಯೂನಿಯನ್‌ದ ಮಂತ್ರಿಮಂಡಳಸಮಿತಿಯ ಉಪಾಧ್ಯಕ್ಷಳು ಹೊಸಾಲಿಯಾ. ಪಾರತಂತ್ರ್ಯದಿಂದ ತಮ್ಮ ಸೋದರಿಯರನ್ನು ಬಿಡಿಸಲು ಇವರು ಅಹೋರಾತ್ರಿ ದುಡಿದಿದ್ದಾರೆ. ಬಾಲ್ಯವಿವಾಹ, ವಿಷಮವಿವಾಹ, ಬಲಾತ್ಕಾರದ ವಿವಾಹ, ಬಹುಪತ್ನಿತ್ವ, ವೇಶ್ಯಾವೃತ್ತಿ ಇವುಗಳನ್ನೆಲ್ಲ ಒದ್ದುಬಿಟ್ಟಿರುವರು.

**ಮದುವೆ**

ಮದುವೆಯ ಪದ್ಧತಿಯಲ್ಲಿಯೂ ಬಹಳ ಸುಧಾರಣೆಯಾಗಿರುವುದು. ೧೮ ವರುಷದ ಕೆಳಗಿನ ಸ್ತ್ರೀಯರು ಲಗ್ನವಾಗಕೂಡದೆಂಬ ಶಾಸನವಿದೆ. ಸೋವಿಯೆಟ್ ಏಶಿಯದ ಹವಾಮಾನವು ಭಿನ್ನವಾಗಿರುವುದರಿಂದ ಅಲ್ಲಿ ಈ ವಯಸ್ಸನ್ನು ೧೬ಕ್ಕೆ ಇಳಿಸಿರುವರು. ಶಾರೀರಿಕ ದೌರ್ಬಲ್ಯ, ರೋಗರುಜಿಗಳಿದ್ದವರು ಮದುವೆಯಾಗದಂತೆ ಮುಂಜಾಗ್ರತೆ ವಹಿಸಿದ್ದಾರೆ. ವಿವಾಹದ ಮೊದಲು ಆರೋಗ್ಯಭಾಗ್ಯದ ಬಗ್ಗೆ ಡಾಕ್ಟರರ ಸರ್ಟಿಫಿಕೇಟ್ ಪಡೆಯಬೇಕಾಗಿದೆ. ಹಣ ಚೆಲ್ಲಿದರೆ ಸರ್ಟಿಫಿಕೇಟುಗಳಿಗೇನು ಕಡಿಮೆಯೆಂದೆನ್ನುವ ಹಾಗಿಲ್ಲ. ಡಾಕ್ಟರರಿಗೆಲ್ಲ ಸರಕಾರವೇ ಸಂಬಳ ಕೊಡುತ್ತಿದೆ. ಅವರು ಧರ್ಮಾರ್ಥ ವೈದ್ಯಕೀಯ ಪರೀಕ್ಷೆ ನಡೆಸುವರು. ಆದುದರಿಂದ ದೇಶದ ಹಿತದೃಷ್ಟಿಯನ್ನು ಲಕ್ಷಿಸಿ ಯಾರೂ ಸುಳ್ಳು ಸರ್ಟಿಫಿಕೇಟ್ ಕೊಡಲಾರರು. ರೋಗವಿದ್ದು ಮುಚ್ಚಿಕೊಂಡು ವಿವಾಹವಾದಲ್ಲಿ ಎಲ್ಲರೂ ಶಿಕ್ಷೆಗೆ ಗುರಿಯಾಗುತ್ತಾರೆ. ಇಷ್ಟು ಹೊರತು ಮದುವೆಗೆ ಬೇರಾವ ನಿರ್ಬಂಧವೂ ಇಲ್ಲ. ಸೋವಿಯೆಟ್ ಯೂನಿಯನ್ ೧೫೦ ಜಾತಿ ಜನಾಂಗಗಳ ರಾಜ್ಯ. ಆದರೆ

ಮದುವೆಗೆ ಈ ಜಾತಿ ಜನಾಂಗಗಳ ಪ್ರಶ್ನೆಯು ಅಡ್ಡಿ ಆತಂಕವಾಗಿಲ್ಲ. ಎಲ್ಲರೂ ಸರಿಸಮಾನರು. ಎಲ್ಲರಿಗೂ ವಿವಾಹಸ್ವಾತಂತ್ರ್ಯವಿದೆ; 'ವರ್ಣಸಂಕರ, ಜಾತಿಭ್ರಷ್ಟತೆ ' ಎಂದು ಕೂಗುವವರಿಲ್ಲ. ಒಬ್ಬರ ಕೊರಳಿಗೆ ಮತ್ತೊಬ್ಬರನ್ನು ಕೊಡದಿನಂತೆ ಕಟ್ಟಲಾರರು. ಮದುವೆಯ ಮೊದಲು ಹುಟ್ಟು, ಅವರ ಮನೆತನದ ಇತಿಹಾಸವನ್ನು ಓದಲಾರರು ಶ್ರೀಮಂತಿಕೆಯೆಷ್ಟಿದೆಯೆಂದು ಅಳೆಯಲಾರರು. ವರದಕ್ಷಿಣೆಗೆ ತವಕಪಡರು. ಹೆಣ್ಣುಗಂಡು ಪರಸ್ಪರ ಸಮ್ಮತಿಸಿದರೆ ಸರಿ. ಎಲ್ಲರೂ ವಿದ್ಯಾವಂತರಾಗಿರುವುದರಿಂದ ಇದೇ ರೀತಿ ನಡೆಯುತ್ತಿದೆ. ಮದುವೆಗೂ ವೆಚ್ಚವಿಲ್ಲ. ಆಡಂಬರವಿಲ್ಲ. ರಜಿಸ್ಟರ್ ಪದ್ಧತಿಯೇ ಆಚರಣೆಯಲ್ಲಿರುವುದು. ರಜಿಸ್ಟರ ಆಗಬೇಕೆಂಬ ಒತ್ತಾಯವೂ ಇಲ್ಲ. ಇಬ್ಬರಲ್ಲಿ ಪ್ರೇಮವುಂಟಾದರೆ ಸರಿ, ಅವರು ಭಾರ್ಯಾಭರ್ತರಂತೆ ಬಾಳ್ವೆ ನಡೆಸಬಹುದು. ಯಾರೂ ಆಕ್ಷೇಪಿಸಲಾರರು. ಇದರಂತೆ ವಿಚ್ಛೇದದ ಸ್ವಾತಂತ್ರ್ಯವೂ ಸ್ತ್ರೀಪುರುಷರಿಗಿದೆ. ಸಂಸಾರ ವಿರಸವಾದಾಗ ಪರಸ್ಪರ ಸಮ್ಮತಿಯಿಂದ ವಿಚ್ಛೇದನಕ್ಕೂ ಅರ್ಜಿಮಾಡಿಕೊಳ್ಳುವರು ಒಬ್ಬರು ಬರೆದು ಕೊಂಡರೆ ಸಾಕು. ಇನ್ನೊಬ್ಬರಿಗೆ ತಿಳಿಸುತ್ತಾರೆ.

## ಪ್ರೇಮ

ಈ ರೀತಿಯ ಸ್ವಾತಂತ್ರ್ಯದಿಂದ ಸೋವಿಯೆಟ್ ಯೂನಿಯನ್‌ದಲ್ಲಿ ಸ್ವೇಚ್ಛಾಚಾರ ನಡೆದಿದೆಯೆಂದು ತಿಳಿದರೆ ಅದು ತಪ್ಪು. ಮದುವೆಯ ವಿಷಯದಲ್ಲಿ ಸಹಜವಾಗಿ ನಡೆದುಕೊಳ್ಳುತಿದ್ದಾರೆ. ಪ್ರೇಮವೇ ಅವರ ಮದುವೆಯ, ಕೌಟುಂಬಿಕ ಜೀವನದ ತಳಹದಿಯಾಗಿದೆ ಕೌಟುಂಬಿಕ ಜೀವನವು ಯಾವುದಾದರೊಂದು ಕಾರಣದಿಂದ ಕಲುಷಿತವಾದಾಗ ಹೆಣ್ಣು-ಗಂಡನ್ನು ರೂಢಿಯಿಂದ ಬಿಗಿಯುವುದರಲ್ಲಿ ಏನೂ ಅರ್ಥವಿಲ್ಲ. ಆದುದರಿಂದ ಇಬ್ಬರಿಗೂ ವಿಚ್ಛೇದನ ಸ್ವಾತಂತ್ರ್ಯವಿದೆ. ಅಮೇರಿಕ, ಜರ್ಮನಿ, ಬ್ರಿಟನ್, ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ಸ್ತ್ರೀಯರಿಗೆ ವಿಚ್ಛೇದನ ಹಕ್ಕಿದೆ. ಅಂದ ಬಳಿಕ ಸೋವಿಯೆಟ್ ಯೂನಿಯನ್‌ದ ಮಹಿಳೆಯರು ಪಡೆದ ಅಧಿಕಾರ ಆಶ್ಚರ್ಯಕರವಾದುದೇನೂ ಅಲ್ಲ. ಸಂತಾನದ ಪೋಷಣೆಗಾಗಿ ಸತಿಪತಿಯರಿಬ್ಬರೂ ಹೊಣೆಗಾರರು. ಅವರ ವೇತನದಿಂದ ಸ್ವಲ್ಪಾಂಶವನ್ನು ಕೊಡಬೇಕಾಗಿದೆ. ವಿವಾಹ ವಿಚ್ಛೇದನವಾದರೂ ಅಷ್ಟೆ. ಆ ಹೊಣೆ ಜಾರಿಸಿ-

ಕೊಳ್ಳಲು ಬರುವುದಿಲ್ಲ. ವಿಚ್ಛೇದನಗಳನ್ನು ಆದಷ್ಟುಮಟ್ಟಿಗೆ ತಡೆಹಾಕಲು ಈ ರೀತಿಯ ವ್ಯವಸ್ಥೆ ರಾಮಬಾಣವಾಗಿದೆ. ಇದಲ್ಲದೆ ಪ್ರಥಮ ವಿವಾಹದ ನಂತರದ ಮದುವೆಗಳಿಗೆ ಹೆಚ್ಚೆಚ್ಚು ಕರಕೊಡಬೇಕಾಗುತ್ತದೆ. ಸ್ತ್ರೀಪುರುಷ ರಿಬ್ಬರಿಗೂ ಇದು ಅನ್ವಯಿಸುವುದು. ಇದೂ, ಕೌಟುಂಬಿಕ ಜೀವನವು ಸುಸರಾಗವಾಗಿ ನಡೆಯಲು ಬಂಧನಕಾರಕವಾಗಿದೆ. ತತ್ಪರಿಣಾಮವಾಗಿ ಸೋವಿಯೆಟ್ ಯೂನಿಯನ್‌ದಲ್ಲಿ ವಿವಾಹ ವಿಚ್ಛೇದನಗಳ ಸಂಖ್ಯೆ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿರುವುದು. ಅಮೇರಿಕ ಮತ್ತು ಸೋವಿಯೆಟ್ ಯೂನಿಯನ್ ದೇಶಗಳನ್ನು ಸರಿಹೋಲಿಸಿದರೆ ವಿವಾಹವಿಚ್ಛೇದನಗಳು ಅಮೇರಿಕೆಯಲ್ಲೇ ಅತ್ಯಧಿಕ. ಅಮೇರಿಕೆಯ ಜನಸಂಖ್ಯೆ ೧೨ ಕೋಟಿ. ಸೋವಿಯೆಟ್ ಯೂನಿಯನ್ನದ್ದು ೨೦. ಇದನ್ನರಿತರೆ ಅಮೇರಿಕೆಗಿಂತಲೂ ಸೋವಿಯೆಟ್ ರಾಷ್ಟ್ರದಲ್ಲಿ ಕುಟುಂಬ ಜೀವನವು ಹೆಚ್ಚು ಸುಖಮಯ ವಾಗಿದೆ. ಸಮಾಜದಲ್ಲಿ ಬಿಗುವಿದೆಯೆಂದು ಅರ್ಥವಾಗುವದು. ಇನ್ನು ಸ್ತ್ರೀ ಪುರುಷರು ರಜಿಸ್ಟರ್ ವಿವಾಹವಾಗದೆ ಸತಿಪತಿಗಳಂತೆ ಜೀವಿಸುವುದು ಬೇರೆ ಯವರಿಗೆ ವಿಲಕ್ಷಣವಾಗಿ ಕಾಣಲು ಸಾಕು. ಇಂತಹ ಜೀವನದಲ್ಲಿ ಮರೆ, ಮೋಸ, ದ್ರೋಹ ನಡೆಯಲಿಕ್ಕಿಲ್ಲವೇ? ನಡೆಯುವುದು ಬಾರೀ ಅಪರೂಪ. ಪರಸ್ಪರ ಸಮ್ಮತಿಯಿಂದ, ಪ್ರೇಮದಿಂದ ಜೊತೆಗೂಡಿದ ಹಕ್ಕಿಗಳು. ಅಗಲಿ ಹೋಗುವುದಾದರೂ ಹೇಗೆ? ನಿರುದ್ಯೋಗ, ದಾರಿದ್ರ್ಯವಿಲ್ಲವೆಂದ ಬಳಿಕ ಅವಳನ್ನು ನಡುನೀರಲ್ಲಿ ಕೈಬಿಟ್ಟು ಓಡಿಹೋಗುವ ಅವಶ್ಯಕತೆಯಾದರೂ ಏನು? ಹೋದರೂ ಸಂತಾನದ ಪೋಷಣೆಗೆ ತನ್ನ ಸಂಪಾದನೆಯಲ್ಲಿ ಸ್ವಲ್ಪಾಂಶವನ್ನು ಕೊಡದೆ ಗತ್ಯಂತರವಿಲ್ಲ. ಅದೇನೇ ಇರಲಿ, ಸೋವಿಯೆಟ್ ಯೂನಿಯನ್‌ದ ಸ್ತ್ರೀಪುರುಷರು ಒಬ್ಬರನ್ನೊಬ್ಬರು ವಂಚಿಸಲಾರರು. ಏಕೆಂ ದರೆ ಎಲ್ಲರೂ ಸುಶಿಕ್ಷಿತರು. ಬಾಲ್ಯದಿಂದಲೇ ಅವರಿಗೆ ಹೊಸ ವಾತಾವರಣ. ಸಮಾಜಕ್ಕನುಗುಣವಾದ ಶಿಕ್ಷಣ ದೊರೆಯುತ್ತಿದೆ. ವಯಸ್ಸಿಗೆ ಬಂದಾಗ ಅವರಿಗೆ ತಂತಮ್ಮ ಕರ್ತವ್ಯ, ಹೊಣೆಯ ಅರಿವು ಚೆನ್ನಾಗಿರುವುದು. ಸ್ತ್ರೀ ಪುರುಷರು ಎಂದೂ ಒಬ್ಬರಿಗೊಬ್ಬರು ದ್ರೋಹ ಬಗೆಯುವುದಿಲ್ಲ. ಬಹಳ ಸಭ್ಯತನದಿಂದ ಅವರು ಬಾಳುತ್ತಾರೆ. ಭ್ರಾತೃತ್ವದಿಂದ ನಡೆದುಕೊಳ್ಳು ತ್ತಾರೆ. ಬಾಲ್ಯದಿಂದಲೇ ಹಾಗೆ. ಶಾಲೆ-ಕಾಲೇಜುಗಳಲಿ ಅವರಿಗೆ ಸಹ

ಶಿಕ್ಷಣ. ಒಂದೇ ವಿದ್ಯಾರ್ಥಿನಿಲಯದಲ್ಲೂ ವಾಸಿಸುವರು. ಜೊತೆಜೊತೆಯಾಗಿ ತಿರುಗುತ್ತಾರೆ. ಸಲಿಯುತ್ತಾರೆ; ಆದುದರಿಂದ ಒಬ್ಬರನ್ನೊಬ್ಬರು ಕಂಡೊಡನೆಯೇ, ಸೆರಗು ಸೋಂಕಿದೊಡನೆಯೇ ವಿಕಾರವಶರಾಗುವುದಿಲ್ಲ. ಪುರುಷರನ್ನು ತಮ್ಮ ಬಲೆಯೊಳಗೆ ಸೆಳೆದುಕೊಳ್ಳಲು ಸ್ತ್ರೀಯರು ಯತ್ನಿಸುವುದಿಲ್ಲ. ಗಂಡಸರ ಕಣ್ಮನಸನ್ನು ಆಕರ್ಷಿಸಲು ಅರ್ಧನಗ್ನರಾಗಿ ತಿರುಗುವುದಿಲ್ಲ. ಮೋಹಕ ಚೇಷ್ಟೆಗಳನ್ನೂ ಮಾಡಲಾರರು. ಪ್ರಾಯಶಃ ಸ್ತ್ರೀ-ಪುರುಷರ ಪರಿಚಯ, ಸ್ನೇಹ, ಸಹವಾಸ, ಸಂಗಗಳಿಗೆ ಬೇರೆ ರಾಷ್ಟ್ರಗಳಲ್ಲಿ ನಿರ್ಬಂಧ ಹೇರಿರುವುದರಿಂದಲೇ ಕಳ್ಳಾಟಿಕೆಯ ಕಾಮ, ಪ್ರೇಮ, ಮೋಹಕ ಚೇಷ್ಟೆಗಳು ನಡೆದಿರಲೂ ಸಾಕು.

**ವೇಶ್ಯಾಸಂಸ್ಕಾರ**

ಮಹಿಳೆಯರ ಉದ್ಧಾರಕ್ಕಾಗಿ ಸ್ಟಾಲಿನ್ ಕೈಕೊಂಡ ಕಾರ್ಯಗಳಲ್ಲಿ ವೇಶಾವೃತ್ತಿಯ ನಿರ್ಮೂಲವೂ ಒಂದಾಗಿದೆ. ವೇಶ್ಯಾವ್ಯವಸಾಯವು ಸ್ತ್ರೀಯ ಘನವ್ಯಕ್ತಿತ್ವಕ್ಕೆ ದೊಡ್ಡ ಕಳಂಕ. ಸ್ತ್ರೀಯ ಸ್ವಾಭಿಮಾನ ಅಲ್ಲಿಗೆ ನಾಶವಾದಂತೆಯೇ ಸರಿ. ಅದು ಹೆಣ್ಣಿನ ಅಧೋಗತಿಯ ಕೊನೆಯಮೆಟ್ಟಲು. ಇಹಲೋಕದಲ್ಲಿ ಅದೇ ನಾರಿಗೆ ದೊರೆತ ನರಕ. ದಾರಿದ್ರ್ಯವೇ ಹೆಚ್ಚಾಗಿ ಸ್ತ್ರೀಯರನ್ನು ಈ ದಾರಿಗೆ ಹಚ್ಚುತ್ತದೆ. ಬಾಲ್ಯವಿವಾಹ, ವಿಷಮವಿವಾಹ, ಅವಿವಾಹಿತ ಮಾತೃತ್ವ, ಅತಿ ಕಾಮೋಚ್ಛೆ ಇವು ಎಲ್ಲ ಅದಕ್ಕೆ ಪೋಷಕವಾಗಿ ಇರುವವು. ಸ್ಟಾಲಿನ್ ರಶಿಯವು ಈ ಬೇರುಗಳನ್ನೇ ಕಡಿಮುಬಿಟ್ಟುದುದರಿಂದ ಹೊಸತಾಗಿ ವೇಶ್ಯಾವೃತ್ತಿಗಿಳಿದವರು ಲಕ್ಷಕೊಬ್ಬರೂ ದೊರೆಯಲಿಲ್ಲ. ಆದರೆ ಝಾರ್ ಕಾಲದಲ್ಲಿದ್ದವರ ಸಂಖ್ಯೆ ಕಡಿಮೆಯೇ? ಲೆನಿನ್‌ಗ್ರಾಡ ನಗರವೊಂದರಲ್ಲೇ ೪೦ ಸಾವಿರ ವೇಶ್ಯೆಯರಿದ್ದರು. ಅಖಿಲ ರಶಿಯದಲ್ಲಿ ಎಷ್ಟಿರಬೇಡ! ಕೊಪ್ಪೆಯಲ್ಲಿ ಬಿದ್ದಿದ್ದ ಈ ನಾರೀರತ್ನಗಳನ್ನು ಹೆಕ್ಕಲು ಸ್ಟಾಲಿನ್ ರಶಿಯವು ನಿರ್ಧರಿಸಿ ಅದಕ್ಕಾಗಿ ವೇಶ್ಯಾಸಂಸ್ಕಾರ ಗೃಹಗಳನ್ನು ತೆರೆಯಿತು. ಈ ಗೃಹಗಳಲ್ಲಿ ವೇಶ್ಯೆಯರು ಒಂದು ವರುಷದ ವರೆಗೆ ಇರತಕ್ಕುದೆಂದು ನಿರ್ಬಂಧಿಸಿದರು. ಒಂದು ವರುಷದ ಅವಧಿಯಲ್ಲಿ ಅವಳದು ಸೆರೆಮನೆಯ ವಾಸವೆಂದು ತಿಳಿಯಬಾರದು. ಸಭೆ, ನಾಟಕ, ಸಿನಿಮಾ ಉತ್ಸವ, ಹಬ್ಬಗಳಿಗೆ ಅವಳನ್ನು ಕರೆದೊಯ್ಯುವರು. ರೋಗ-ರುಜೆಗಳಿಗೀಡಾದವರಿಗೆ

ವೈದ್ಯಕೀಯ ಉಪಚಾರ ಮಾಡಿದರು. ಶಿಕ್ಷಣಕೊಟ್ಟರು. ಹೊರಗೆ ಹೋದ ಮೇಲೆ ಜೀವನ ನಡೆಸಲು ಶಕ್ಯವಾಗುವಂತೆ ಕೈಗಾರಿಕೆಗಳನ್ನು ಕಲಿಸಿದರು. ಈ ರೀತಿಯ ಏರ್ಪಾಡಿನಿಂದ ಆ ರಮಣಿಯು ಮನಃಪ್ರವೃತ್ತಿಯನ್ನೇ ಬದಲಾಯಿಸುತ್ತಾರೆ. ವೇಶ್ಯಾವೃತ್ತಿ ಹೇಯವಾದುದೆಂಬ ಭಾವನೆ ಆಕೆಯ ಮನಸ್ಸಿನಲ್ಲಿ ಬೇರೂರಿ ಹೋಗುತ್ತದೆ. ಈ ಗೃಹಗಳನ್ನು ಬಿಟ್ಟು ತೆರಳಿದ ಮೇಲೆ ಸರಕಾರವು ಕೆಲಸಕೊಡಿಸುವುದರಿಂದ ಪುನಃ ಅವಳು ದುರಾಚಾರಿಯಾಗುವುದು ಕಡಿಮೆ. ಆಗೃಹದಿಂದ ಹೊರಗೆ ಕಾಲಿಟ್ಟಾಗ ಆದು ಸಂಸ್ಕೃತಿ ಹೊಂದಿದ ಜೀವಿಯಾಗುವುದು ನಿಶ್ಚಯ. ಹೊರಗಿನ ಹೊಸ ವಾತಾವರಣದಲ್ಲಿ ಲಗ್ನವಾಗಲು ಅವಕಾಶವಿದೆಯಲ್ಲದೆ ವ್ಯಭಿಚಾರದ ದುಶ್ಚಟಕ್ಕೆ ಬಲಿಬೀಳುವಂತಿಲ್ಲ. ಅವಳು ಸಂಸ್ಕಾರಗೃಹದಿಂದ ಹೊರಬಿದ್ದಾಗ ವೇಶ್ಯೆಯೆಂದು ಕರೆದು ಯಾರೂ ಅಪಮಾನ ಮಾಡಲಾರರು. ಅವಳಲ್ಲಿ ಹುಟ್ಟಿದ ಮಕ್ಕಳನ್ನು ಜಾರಜಾತರೆಂದು ಕರೆಯಲಾರರು. ಅದು ಮಹಾಪರಾಧ. ಸೋವಿಯೆಟ್ ಯೂನಿಯನ್‌ದಲ್ಲಿ ಗಂಡು ಹೆಣ್ಣು ಎಲ್ಲರೂ ಪರಸ್ಪರ ಕಾಮ್ರೇಡ್ (ಬಂಧು) ಎಂದನ್ನುವುದು ರೂಢಿ. ಅದಿರಲಿ, ವಿಶೇಷ ಕಾಮೇಚ್ಛೆಯಿಂದ ವೇಶ್ಯಾವೃತ್ತಿಗಿಳಿದವರು ಈಗಲೂ ಇದ್ದಾರೆ. ಊರಿದ್ದಲ್ಲಿ ಹೊಲಗೇರಿಯಿದ್ದೇ ಇದೆ. ಆದರೆ ಅವರ ಸಂಖ್ಯೆಯು ಅತ್ಯಲ್ಪ. ಅಲಕ್ಷಿಸುವಷ್ಟು ಕಡಿಮೆ. ಯಾವುದೇ ಕಾರಣದಿಂದಿರಲಿ, ಸ್ತ್ರೀಯರು ವೇಶ್ಯಾವೃತ್ತಿಗಿಳಿದರೆ ಅಥವಾ ಲೈಂಗಿಕ ರೋಗಗಳಿಗೆ ತುತ್ತಾದರೆ ಕೂಡಲೇ ಈ ವೇಶ್ಯಾಸಂಸ್ಕಾರ ಗೃಹಗಳಿಗೆ ಮುಟ್ಟಿಸುವರು.

**ತಾಯಿತನ**

ಬಾಳಿನ ಗಿಡಕ್ಕೆ ಪ್ರೇಮ ಹೂ. ಹೂ ಹೋಗಿ ಮಿಡಿಯಾಗಿ ಹಣ್ಣು ದೊರೆತಾಗ ಮರಕ್ಕೆ ಮಲರು ಬಂದುದು ಸಾರ್ಥಕ. ಜನಜೀವನದಲ್ಲಿ ಒಲುಮೆ ಸಾಫಲ್ಯ ಹೊಂದುವುದು ಸಂತಾನವಾದಾಗಲೇ. ಸ್ತ್ರೀಯ ಜೀವನದಲ್ಲಿ ಮಾತೃತ್ವದಷ್ಟು ಮಹತ್ವವಾದ ಘಟನೆ ಇನ್ನೊಂದಿಲ್ಲ. ಅದರೊಂದಿಗೆ ಯಾವುದನ್ನೂ ಸರಿಹೋಲಿಸಲಾಗದು. ಆದರಿಂದಲೇ ಮಹಿಳೆ ಘನತೆಗೇರಿದ್ದಾಳೆ. ಸೋವಿಯೆಟ್ ಯೂನಿಯನ್‌ದಲ್ಲಿ ತಾಯ್ತನದ ರಕ್ಷಣೆಗಾಗಿ ಬಹಳ ಎಚ್ಚರಿಕೆಯಿಂದಿದ್ದಾರೆ. ಬಸಿರಾದ ಹೆಣ್ಣುಮಕ್ಕಳಿಗೆ ಅಲ್ಲಿ ಬಹಳ ಗೌರವ.

ಟ್ರಾಂ ಕಾರುಗಳಲ್ಲಿ, ರೇಲ್ವೆಗಳಲ್ಲಿ, ಮೋಟಾರುಗಳಲ್ಲಿ ಪ್ರಯಾಣಮಾಡು ವಾಗ ಗರ್ಭಿಣಿಸ್ತ್ರೀಯರಿಗೆ ಯೋಗ್ಯ, ಸುರಕ್ಷಿತ, ಅನುಕೂಲ ಸ್ಥಳವನ್ನು ಬಿಟ್ಟುಕೊಡಬೇಕೆಂಬ ನಿಯಮವಿದೆ. ವ್ಯಾಪಾರಕ್ಕೆ ತೆರಳಿದಾಗ ಅಂಗಡಿ ಗಳಲ್ಲಿ ಅವಳಿಗೆ ಅವಶ್ಯಬಿದ್ದ ವಸ್ತುಗಳನ್ನು ಮೊದಲು ಕೊಟ್ಟು ಕಳಿಸುವರು. ತಾಸುಗಟ್ಟಲೆ ನೊಣ ಹೊಡಿಯುತ್ತ ಕುಳಿತುಕೊಳ್ಳಬೇಕಾಗಿಲ್ಲ. ಉತ್ತಮ ಆಹಾರವನ್ನು ಸರಕಾರವು ಒದಗಿಸುತ್ತಿದೆ. ಕಷ್ಟಕೆಲಸಮಾಡುವ ಸ್ತ್ರೀಯ ರನ್ನು ಸುಲಭ ಕೆಲಸಗಳಿಗೆ ಹಚ್ಚುವರು. ಪ್ರಸೂತಿಯ ಎರಡು ತಿಂಗಳ ಮೊದಲು ಆಮೇಲೆ ಎರಡು ತಿಂಗಳ ವೇತನ ಸಹಿತ ರಜೆ. ಸ್ತ್ರೀಯರು ದುಡಿದಲ್ಲೆಲ್ಲ ಶಿಶುಸಂಗೋಪನಗಳಿರಬೇಕು. ಪ್ರಸೂತಿಯಾದ ಮೂರನೇ ತಿಂಗಳಲ್ಲಿ ಅವಳು ಕೆಲಸಕ್ಕೆ ಹಾಜರಾಗುವಳು. ಕೆಲಸದ ಅವಧಿಯಲ್ಲಿ ಮಗುಗಳನ್ನು ಈ ಗೃಹಗಳಲ್ಲಿಡುವರು. ಆಗಾಗ ಮೊಲೆಯುಣ್ಣಿಸಿ ಬರುವ ಹಕ್ಕಿದೆ ಅವಳಿಗೆ. ಮಗುವಿನ ಪೋಷಣೆಗಾಗಿ ತಾಯಿಗೆ ಸರಕಾರವು ಪ್ರತ್ಯೇಕ ಭತ್ತೆಯನ್ನು ಕೊಡುತ್ತಿದೆ.

ಹೆರಿಗೆಗಾಗಿ ಸರಕಾರವು ಪ್ರಸೂತಿ ಗೃಹಗಳನ್ನು ಕಟ್ಟಿರುವದು. ದೇಶದ ಎಲ್ಲ ಭಾಗಗಳಲ್ಲಿಯೂ ಒಟ್ಟು ಳ೩ಲಳ ಹೆರಿಗೆ ಮನೆಗಳಿವೆ. ಸ್ತ್ರೀಯರು ಗರ್ಭಿಣಿಯರಾದೊಡನೆಯೇ ಅವರ ಹೆಸರನ್ನು ರಜಿಸ್ಟರ ಮಾಡುವರು. ದಾದಿ, ಹಾಗು ಡಾಕ್ಟರರು ಆಗಾಗ ಆ ಮಹಿಳೆಯು ವಾಸವಾಗಿದ್ದಲ್ಲಿ ತೆರಳಿ ಅವಳ ಯೋಗಕ್ಷೇಮ ವಿಚಾರಿಸಿಕೊಂಡು ಬರುವರು. ಪ್ರಸೂತಿಗೃಹಗಳಲ್ಲೇ ಹೆರಿಗೆಯಾಗುತ್ತಿದೆ. ಗೃಹಗಳಿಲ್ಲದ ಸ್ಥಳದಲ್ಲಿದ್ದ ಸ್ತ್ರೀಯರನ್ನೂ ಅಲಕ್ಷಿಸ ಲಾಗುವುದಿಲ್ಲ. ಅವರ ಮನೆಗಳು ಆರ್ಕಟಿಕ್ ಪ್ರದೇಶದಲ್ಲಿರಲಿ, ಗುಡ್ಡ ಗಾಡುಗಳಲ್ಲಿರಲಿ, ಪ್ರಸೂತಿಕಾಲದ ಮುಂಚಿತವಾಗಿಯೇ ಡಾಕ್ಟರರೂ ದಾದಿಯೂ ಅಲ್ಲಿಗೆ ತೆರಳುವರು. ಹೆರಿಗೆ, ಔಷಧೋಪಚಾರ ಮೊದಲಾದವು ಗಳಿಗೆ ದಾದಿಯಾಗಲೀ, ಡಾಕ್ಟರರಾಗಲೀ, ಫೀ ಕೇಳುವುದಿಲ್ಲ. ಎಲ್ಲ ವೆಚ್ಚವೂ ಸರಕಾರದ್ದೇ ಮಕ್ಕಳು ದೇಶದ ಸರ್ವ ಸಂಪತ್ತು. ಆದುದ ರಿಂದ ಶಿಶು ಮರಣವಾಗದಂತೆ ಎಚ್ಚರಿಕೆಯಿಂದಿದ್ದಾರೆ. ದಾದಿಯರಿಗೂ ಡಾಕ್ಟರರಿಗೂ ನವನವ ವಿಚಾರ, ಹೆರಿಗೆ ಪದ್ಧತಿ, ಸಂಶೋಧನೆಗಳ ಪಾಠ

ಹೇಳುವರು. ಪ್ರಸವ ವೇದನೆಯನ್ನು ಕಡಿಮೆಮಾಡಲು ಇತ್ತೀಚೆಗೆ ಹೊಸ ವೈಜ್ಞಾನಿಕ ಉಪಕರಣವೊಂದನ್ನು ಕಂಡುಹಿಡಿದಿದ್ದಾರೆ.

**ಸರ್ವತೋಮುಖ ಏಳಿಗೆ**

ಮಹಿಳೆಯರನ್ನು ಉದ್ಧರಿಸಲು ಅವರ ಜೀವನವನ್ನು ಪಾವನಗೊಳಿಸಲು ಪಾಪಕವಾಡಲು ಸೋವಿಯೆಟ್ ಯೂನಿಯನ್ ಪ್ರಾಮಾಣಿಕತನದಿಂದಲೂ ನಿಷ್ಠೆಯಿಂದಲೂ ದುಡಿದಿದೆ. ೨೫ ವರುಷಗಳ ದಾಖಲೆಯಿದೆ ಸ್ಟಾಲಿನ್ನನದ್ದು. ಅದರ ಪರಿಣಾಮವಾಗಿ ಇಂದು ಸ್ತ್ರೀಯರು ಕಲೆ, ಕೈಗಾರಿಕೆ, ಕಾವ್ಯ, ಕ್ರಾಂತಿ ಕ್ಷೇತ್ರಗಳಲ್ಲಿ ಮುಂದೆ ಬಂದಿರುವರು. ಪರರಾಷ್ಟ್ರಗಳಲ್ಲೂ ಸ್ತ್ರೀಯರ ಉನ್ನತಿಯ ಯತ್ನಗಳು ನಡೆದಿವೆಯೇನೋ ನಿಜ. ಆದರೆ ಸೋವಿಯೆಟ್ ಯೂನಿಯನ್ನದರೊಂದಿಗೆ ಹೋಲಿಸಿದರೆ ಅದು ಅಣುಮಾತ್ರ. ಸರಕಾರೀ ನೌಕರರ ಮಕ್ಕಳಿಗೆ, ಶ್ರೀಮಂತರಿಗೆ, ವಿದ್ಯೆ, ಕಲೆ, ಕಾವ್ಯಗಳಲ್ಲಿ ತಲೆಹಾಕುವ ಸಂದರ್ಭಗಳಿರುತ್ತವೆ. ಬಹು ಸಂಖ್ಯಾಕರಾದ ಬಡಜನಕ್ಕೆ ಅವಕಾಶವಿಲ್ಲ. ಅನುಕೂಲತೆಯೂ ಇಲ್ಲ. ಸ್ಟಾಲಿನ್ ರೀತಿಯು ಪ್ರತಿಯೊಬ್ಬನಿಗೂ ಸಂದರ್ಭಕೊಟ್ಟಿರುವುದು. ಪ್ರತಿಯೊಬ್ಬರ ಆತ್ಮವಿಕಾಸಕ್ಕೆ ಪ್ರೋತ್ಸಾಹ ಕೊಡಲ್ಪಟ್ಟಿದೆ. ಬಡರೈತರ ಮಕ್ಕಳಿಂದು ಕೈಗಾರಿಕೆ ತಜ್ಞರಾಗಿದ್ದಾರೆ. ಕವಿಗಳಾಗಿದ್ದಾರೆ. ಕಲಾವಿದರಾಗಿದ್ದಾರೆ. ಲಿಡಿಯಾ ಸಫುಲಿನಾ ಅಂತಹ ಸಾವಿರಾರು ಮಹಿಳೆಯರಲ್ಲಿ ಒಬ್ಬಳು. ದೊಡ್ಡ ಸಾಹಿತಿ. ತಾತಾರರ ಮಗಳು. ೯ನೇ ವಯಸ್ಸಿನಲ್ಲೇ ಕಥೆ ಕಾದಂಬರಿಗಳನ್ನು ಬರೆಯತೊಡಗಿದಳು. ಈ ಚಿಕ್ಕ ವಯಸ್ಸಿನಲ್ಲಿ ಇಷ್ಟು ಪ್ರತಿಭಾನ್ವಿತ ಕಥೆಗಳನ್ನು ಬರೆಯುವುದುಂಟೇ? ಅಶಕ್ಯ. ಯಾರೋ ಬೇರೆಯವರು ಬರೆದು ಕೊಟ್ಟಿರಬೇಕೆಂದು ಶಾಲಾಧಿಕಾರಿಗಳ ಸಂಶಯ. ಕ್ರಾಂತಿಯ ಪೂರ್ವದಲ್ಲಿ ಉಪಾಧ್ಯಾಯಿನಿಯಾಗಿ ಹೊಟ್ಟೆಹೊರೆದುಕೊಂಡಳು. ಕ್ರಾಂತಿಯನಂತರ ಅವಳ ಬದುಕಿಗೆ ಕಳೆಬಂದಿತು. ಅವಳ ಕೃತಿಗಳಲ್ಲೆಲ್ಲ ವಿರಿನೆಯಾ ಕಾದಂಬರಿ ದೇಶವಿದೇಶಗಳಲ್ಲಿ ಅಚ್ಚುಮೆಚ್ಚಿಗೆ ಪಾತ್ರವಾಗಿರುವುದು. ಆ ಕಥೆಯ ಮೇಲೆ ವಾಕ್ಪಟವನ್ನೂ ರಚಿಸಿದ್ದಾರೆ. ಕ್ರಿವೊಪೊಲಿನೋವಾ ಜನಪದ ಕಟ್ಟಿ ಹಾಡಿದ ಕವಯಿತ್ರಿ. ಸರ್ವಜ್ಞ ಮೂರುತಿಯಂತೆ ತುಣುಕು ರೊಟ್ಟಿಗಾಗಿ ಹಾಡು ಕಟ್ಟಿ ಜನಮನವನ್ನೊಲಿಸಿ ಅವರ ಎದೆಯರಳಿಸಿದವಳು. ಕ್ರಾಂತಿಯಾದ

ಮೇಲೆ ಸರಕಾರವು ಮಾಸ್ಕೋಗೆ ಅವಳನ್ನು ಆಮಂತ್ರಿಸಿತು. ೭೮ ವರುಷದ ಹಣ್ಣು ಹಣ್ಣು ಮುದುಕಿ ಆಗ. ಹಲ್ಲುಗಳೆಲ್ಲ ಬಿದ್ದುಹೋಗಿದ್ದವು. ಅವಳ ಸ್ಮರಣೆಯಲ್ಲಿದ್ದ ಹಾಡುಗಳನ್ನೆಲ್ಲ ಬರೆದುಕೊಂಡು ಪ್ರಸಿದ್ಧಿಸಿದರು. ಪ್ರತಿಭೆ, ಪ್ರಾಸ, ಜೀವನದ ಅನುಭವ ಚರಣ ಚರಣಗಳಲ್ಲಿ ಕುಣಿ ಕುಣಿದಾಡುತ್ತಿದೆ ಅವಳ ಹಾಡುಗಳಲ್ಲಿ. ಪತ್ರಿಕೋದ್ಯಮದಲ್ಲಿ ಲಾರಿಸಾರೇಸ್ನರಳ ಹೆಸರು ಅಚ್ಚಳಿಯದೆ ನಿಲ್ಲುವಂತಹುದು. ತನ್ನ ೩೩ನೇ ವಯಸ್ಸಿನಲ್ಲಿ ಇವಳು ಕಣ್ಮುಚ್ಚಿದಳು (೧೯೨೮). ಆದರೂ ಆದರ್ಶ ಪತ್ರಿಕೋದ್ಯಮಿಯೆಂದು ಇಂದು ನವಜನಾಂಗವು ಅವಳ ದಿವ್ಯನಾಮವನ್ನು ಸ್ಮರಿಸುತ್ತಿದೆ. ಗಾರ್ಕಿಯ ನವಜೀವನ (ನ್ಯೂಲೈಫ್) ಪತ್ರಿಕೆಯ ಸ್ಥಾಪನೆಗೆ ಇವಳೇ ಕಾರಣಳು. ಸರೋಜಿನಿದೇವಿಯಂತೆ ಈ ಕವಯಿತ್ರಿ ರಾಜಕಾರಣಕ್ಕೆ ಇಳಿದವಳು. ಅಂತಃ ಕಲಹದ ಕಾಲದಲ್ಲಿ ತೋಪು ಹಿಡಿದು ರಣರಂಗ ಸೇರಿದಳು. ಶಾಂತಿಯ ಕಾಲದಲ್ಲಿ ಲೇಖನಿಯೇ ಜಡಜನತೆಯ ಜೀವನವನ್ನು ಹೊಡೆದೆಬ್ಬಿಸುವ ತೋಫಾಯಿತು. ಇದರಂತೆ ದೇಶದ ಸ್ವಾತಂತ್ರ್ಯಹೋರಾಟದಲ್ಲಿಯೂ ಸೋವಿಯೆಟ್ ಯೂನಿಯನ್‌ದ ಮಹಿಳೆಯರು ಪುರುಷರ ಹೆಗಲಿಗೆ ಹೆಗಲು ಕೊಟ್ಟಿದ್ದಾರೆ. ಬಂಡವಲು ರಾಷ್ಟ್ರಗಳು ದಂಡೆತ್ತಿ ಬಂದಾಗ ಪೆಸಿಕೋವಾ ಸೇನೆಯಲ್ಲಿ ಸೇರಿ ಅಸದೃಶ ಧೈರ್ಯ ತೋರಿಸಿದಳು. ಒಮ್ಮೆ ಈ ದಳವು ಅಸಂಖ್ಯ ಶತ್ರುಸೈನಿಕರನ್ನು ಇದಿರಿಸಬೇಕಾಗಿಬಂದಿತು. ಕೆಂಪು ಸೈನಿಕರು ಎದೆಗುಂದಿದರು. ಆಗ ಈ ರಮಣಿ 'ನೀವು ಹೇಡಿಗಳಾಗಿ. ನಾನು ಒಂದು ಹೆಜ್ಜೆ ಕಾಲು ಹಿಂದಿಡಲಾರೆ' ಎಂದವಳೇ ಸಿಡಿಲಿನ ಮರಿಯಂತೆ ಮುಂದೆ ನುಗ್ಗಿದಳು. ಕೆಂಪು ಸೈನಿಕರು ಹೊಸ ಹುಮ್ಮಸ್ಸಿನಿಂದ ವೀರಾವೇಶದಿಂದ ಮುನ್ನುಗ್ಗಿ ಶತ್ರುಗಳನ್ನು ಸೋಲಿಸಿದರು. ಪ್ಲೊಟ್ನಿಕೋವಾ ಇನ್ನೊಬ್ಬಳು ಶೂರಸ್ತ್ರೀ. ಅಶ್ವದಳದ ಅಧಿಪತಿ. ಅವಳ ಉತ್ಸಾಹೀ ನಾಯಕತ್ವದಲ್ಲಿ ಆ ದಳಕ್ಕೆ ಸೋಲೇ ದೊರೆಯಲಿಲ್ಲ. ಇಂದು ನಡೆದ ಈ ಘೋರ ಹೋರಾಟದಲ್ಲೂ ಅನೇಕ ಸ್ತ್ರೀಯರು ಭಾಗವಹಿಸಿದ್ದಾರೆ. ತಾನ್ಯಾ ಹೆಣ್ಣುಮಗಳು ಗೊರಿಲ್ಲ ದಳದೊಡನೆ ಕೂಡಿಕೊಂಡು ದೇಶಕ್ಕಾಗಿ ದೇಹವನ್ನರ್ಪಿಸಿದಳು. ಯುದ್ಧವಾರಂಭವಾಗುವ ಮೊದಲು ೪೦ ಲಕ್ಷ ಸ್ತ್ರೀ ವೈಮಾನಿಕರು, ನಾವಿಕರು, ಸೈನಿಕರು ಸೋವಿಯೆಟ್ ಯೂನಿಯನ್‌ದಲ್ಲಿದ್ದರು. ತಮ್ಮ

ಸೋದರರ ರಕುತ ಕಾವೇರಿಯಂತೆ ಹರಿಯುತ್ತಿದ್ದಾಗ ಈ ಶೂರ ಸ್ತ್ರೀಯರು ಕೈಕಟ್ಟಿ ಕುಳಿತಿಲ್ಲ. ತಮ್ಮ ರಾಷ್ಟ್ರದ ಸ್ವಾತಂತ್ರ್ಯರಕ್ಷಣೆಗಾಗಿ, ಅಸಂಖ್ಯ ಮಹಿಳೆಯರು ಬಲಿದಾನಮಾಡಿದ್ದಾರೆ. ಅಜರಾಮರವಾದ ಕೀರ್ತಿಗಳಿಸಿದ್ದಾರೆ. ಸೋವಿಯೆಟ್ ಸ್ತ್ರೀಯರ ದೇಶಭಕ್ತಿಯ ಕಥೆಗಳು ನಮ್ಮ ಸ್ತ್ರೀಯರ ಹೃದಯಗಳನ್ನು ಅರಳಿಸಲಾರವೇ? ಪನ್ನೆ, ಪದ್ಮಿನಿ, ಪ್ರಮೀಳೆ, ಚಾಂದಬೀಬಿ, ಝಾನ್ಸಿ ರಾಣಿ, ಕಿತ್ತೂರ ಚನ್ನಮ್ಮರಂತೆ ದೇಶದ ಸ್ವಾತಂತ್ರ್ಯಕ್ಕಾಗಿ ಒಡಿದಾಡಲಾರರೇ?

—

## ನವಜನಾಂಗ

ಪಂಚವಾರ್ಷಿಕ ಯೋಜನೆಯಲ್ಲಿ ಜನಾಂಗದ ಪುನರುಜ್ಜೀವನಾಂಶವು ಮಹತ್ವವಾದುದು. ಹೊಸ ತತ್ವ, ಆದರ್ಶ, ವಾತಾವರಣಗಳಿಗೆ ಜನ ಹೊಂದಿಕೊಂಡು ಹೋಗುವಂತೆ ಮಾಡುವುದೇ ಅದರ ಉದ್ದೇಶ. ಜನರ ಗುಣಶೀಲಗಳನ್ನು ಮಾರ್ಪಡಿಸುವ ಯತ್ನವದು. ನೂರಾರು ವರುಷಗಳಿಂದ ಜನ ಬಂಡವಲು ಪದ್ಧತಿಯ ನೆರಳಲ್ಲಿ ಬೆಳೆದು ಬಂದವರು. ವ್ಯಕ್ತಿ ಒಡೆತನದ ಆಶೆ ಅವರ ರಕ್ತಗತವಾಗಿ ಹೋಗಿದೆ. ಸ್ವಾರ್ಥ, ಲೋಭ, ದುರಾಶೆಗಳೂ ತಲೆತುಂಬ ಸೇರಿರುವವು. ಈಗ ಕಣಿ, ಕಾರಖಾನೆ, ಹೊಲ ನೆಲ ಮೊದಲಾದ ಉತ್ಪಾದನೆಯ ಸಾಧನೆಗಳ ರಾಷ್ಟ್ರೀಕರಣ ಮಾಡಿದ್ದರೂ ಸಂಪತ್ತಿನ ವಿತರಣ ಮಾಡಿದ್ದರೂ ಜನ ಅದರ ಕಾರಣಗಳನ್ನೂ ಮಹತ್ವವನ್ನೂ ಅರಿಯುವುದು ಅವಶ್ಯ. ಅವರು ಸರ್ವಜನ ಸುಖಕ್ಕಾಗಿ ದುಡಿಯುವುದೂ ಅಗತ್ಯ. ಇದಲ್ಲದೆ ಸೋವಿಯೆಟ್ ಯೂನಿಯನ್ ನೂರಾರು ಜಾತಿ, ಜನ ಭಾಷೆ, ವರ್ಣ, ಧರ್ಮಗಳಿಂದ ತುಂಬಿತುಳುಕುವ ದೇಶ. ಈ ಜನರಲ್ಲಿ ಪರಸ್ಪರ ಸ್ನೇಹಸೌಹಾರ್ದ, ಸರಿಸಮಾನತಾಭಾವ, ಭ್ರಾತೃತ್ವ, ಪರಮತಸಹಿಷ್ಣುತೆ ಮೊದಲಾದವುಗಳುಂಟಾಗುವಂತೆ ಮಾಡದೇ ಹೋದರೆ ಬಾಲ್ಶೆವಿಕ್ ರಾಜ್ಯಾಡಳಿತೆಯು ಯಶಸ್ವಿಯಾಗದು. ಅಂತಹ ಸಾಮ್ಯವಾದೀ ಸಮಾಜದಲ್ಲೂ ಅರ್ಥವಿಲ್ಲ. ಸ್ಟಾಲಿನ್-ರಶಿಯಾ ಇದನ್ನರಿತು ಜನರ ತರಬೇತಿಗಾಗಿ ಯತ್ನಿ

ಸಿತು. ನವಜನಾಂಗಕ್ಕಂತೂ ಬಾಲ್ಯದಿಂದಲೇ ತರಬೇತಿ ದೊರೆತಿದೆ. ರಾಷ್ಟ್ರದ ಆಡಳಿತೆಯ ಹೊಣೆ ವಹಿಸಲು ಸಾಧ್ಯವಾಗುವಂತೆ ಬಾಲಕರಿಗೆ ಸೋವಿಯೆಟ್ ಯೂನಿಯನ್ ಕೊಡುತ್ತಿರುವ ಶಿಕ್ಷಣ ನೋಡಿ ಲೋಕವೆಲ್ಲ ಬೆರಗಾಗಿ ಹೋಗಿದೆ.

ಮಹಾಕ್ರಾಂತಿಯ ಮೊದಲು ಮಕ್ಕಳ ಕೂಗನ್ನು ಕೇಳುವವರಿದ್ದಿಲ್ಲ. ಹಿಂದುಸ್ಥಾನದಂತೆ ಮಕ್ಕಳ ಜನನಸಂಖ್ಯೆ ಮತ್ತು ಮರಣಸಂಖ್ಯೆ ವಿಶೇಷವಾಗಿತ್ತು. ಜನರಿಗೆ ಬಡತನ. ಅವುಗಳ ಲಾಲನೆ ಪಾಲನೆ ಮಾಡಲು ಅನುಕೂಲತೆಗಳಿಲ್ಲ. ಮಕ್ಕಳಿಗೆ ವಿದ್ಯಾಬುದ್ಧಿಯನ್ನು ಕೊಡಲೂ ಆಗುತ್ತಿರಲಿಲ್ಲ. ಬಾಲ್ಯದಲ್ಲೇ ಅಳಿಯದೆ ಉಳಿದ ಮಕ್ಕಳು ನಿತ್ರಾಣವಾಗಿ ಬೆಳೆದುವು. ಜೀವನದ ಸಂಗ್ರಾಮವನ್ನೆದುರಿಸುವ ದೇಹದಾರ್ಢ್ಯವೂ ಇಲ್ಲ. ಮಾನಸಿಕ ಬಲವೂ ಇಲ್ಲ. ಮಕ್ಕಳ ಸ್ಥಿತಿ ಈ ರೀತಿಯಿರುವ ಒಂದು ರಾಜ್ಯ ತಲೆಯೆತ್ತುವುದಾದರೂ ಹೇಗೆ? ಆ ಜನಾಂಗದಲ್ಲಿ ಪುರುಷತ್ವವಿರುವುದಾದರೂ ಎಂತು? ಸ್ಟಾಲಿನ್-ರಶಿಯ ಈ ರಹಸ್ಯವನ್ನು ಕಂಡು ಮಕ್ಕಳ ಆರೈಕೆಗಾಗಿ ಅಪಾರ ಹಣ ಸುರಿಸಿದೆ. ಸ್ತ್ರೀಯರು ಗರ್ಭಿಣಿಯರಾದೊಡನೆಯೇ ಅವರ ರಕ್ಷಣೆಯ ಕಡೆ ವಿಶೇಷ ಲಕ್ಷ್ಯಕೊಟ್ಟಿರುವರು. ಶ್ರೇಷ್ಠ ಆಹಾರ, ವಿಶ್ರಾಂತಿ, ಪ್ರಸೂತಿಗೃಹಗಳ ಏರ್ಪಾಡು ಇವುಗಳೆಲ್ಲ ನವಜನಾಂಗದ ರಕ್ಷಣೆಯ ವ್ಯವಸ್ಥೆ.

**ಶಿಶುಸಂಗೋಪನಗೃಹ**

ಕೂಲಿಕಾರರ ಮಕ್ಕಳ ಪಾಲನೆಗಾಗಿ ಬಾಲಸಂಗೋಪನ ಗೃಹಗಳನ್ನು ತೆರೆದಿದ್ದಾರೆ. ಇದಕ್ಕೆ ಕ್ರೆಚಿ ಅಥವಾ ನರ್ಸರಿಶಾಲೆಗಳೆಂದೆನ್ನುವರು. ಪ್ರತಿಯೊಂದು ಕಾರಖಾನೆ, ಕೃಷಿಕ್ಷೇತ್ರ, ಶಾಲೆ ಕಾಲೇಜು, ಸ್ತ್ರೀಯರ ಕ್ಲಬ್, ವಿಶ್ರಾಂತಿಗೃಹಗಳಿಗೆ ಜೊತೆಯಾಗಿ ಇವು ಕಟ್ಟಲ್ಪಟ್ಟಿವೆ. ಇತ್ತೀಚೆಗೆ ರೇಲ್ವೆ ಸ್ಟೇಶನ್‌ಗಳಲ್ಲೂ ಅವು ತಲೆಯೆತ್ತಿವೆ. ರೇಲ್ವೆ ಆಫೀಸಿನಲ್ಲಿ ದುಡಿಯುವ ಸ್ತ್ರೀಯರು ಹಗಲು ಹೊತ್ತಿನಲ್ಲಿ ಶಿಶುಗಳನ್ನು ಇಲ್ಲಿಯೇ ಬಿಡುವರು. ಇನ್ನೊಂದು ಗಾಡಿಗಾಗಿ ಕಾಯುವ ಸ್ತ್ರೀಯರೂ ಶಿಶುಗಳನ್ನು ಆ ಗೃಹಗಳಲ್ಲಿ ಬಿಡುತ್ತಾರೆ. ಮೂರು ತಿಂಗಳ ಮಗುವಿನಿಂದ ಮೂರು ವರುಷದ ವರೆಗಿನ ಮಕ್ಕಳ ಪಾಲನೆಯ ವ್ಯವಸ್ಥೆ ಇಲ್ಲಿದೆ. ವಯಸ್ಸಿಗನು

ಗುಣವಾಗಿ ಅದರಲ್ಲೂ ಪ್ರತ್ಯಪ್ರತ್ಯೇಕ ಭಾಗಗಳನ್ನು ಮಾಡಿರುವರು. ಕ್ರೆಚಿಗಳು ನಯನಮನೋಹರವಾಗಿವೆ. ಸ್ನಾನದ ಮನೆ, ಊಟದ ಮನೆ, ಆಟಪಾಟಗಳ ಮನೆಗಳೆಂಬ ವರ್ಗೀಕರಣವೂ ಉಂಟು. ಮಕ್ಕಳಿಗೆಲ್ಲ ಶುಭ್ರವಾದ ಅರಿವೆ ತೊಡಿಸುವರು. ಯಾರಾದರೂ ಈ ಗೃಹಗಳನ್ನು ನೋಡಲು ಬಂದರೆ ಬಿಳಿ ಅರಿವೆ ಹಾಕಿಕೊಳ್ಳದೆ ಮಕ್ಕಳನ್ನು ಕಾಣಲು ಬಿಡುವುದಿಲ್ಲ. ಶುಚಿತ್ವಕ್ಕೆ ಅಷ್ಟು ಮಹತ್ವ. ಈ ಮುಂದಿನಾ ಮುದ್ದೆಗಳನ್ನು ಸಾಕಿ ಸಲಹಲು ತರಬೇತಿ ಹೊಂದಿದ ದಾದಿಯರಿರುವರು. ದಕ್ಷಿಣೆಗೆ ತಕ್ಕ ಪ್ರದಕ್ಷಿಣೆ ಹಾಕುವ ದಾದಿಯರು ಇವರಲ್ಲ. ಆದರ್ಶ ಜೀವಿಗಳು. ದೇಶಕ್ಕಾಗಿ ತಮ್ಮ ಜೀವನ ಮುಡಿಪಾಗಿಟ್ಟವರು. ದಾದಿಯರೂ ದುಶ್ಚಟಗಳರದವರು. ವತ್ಸವಾತ್ಸಲ್ಯವೂ ತುಂಬಿ ತುಳುಕುತ್ತಿದೆ. ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆಯೇ ಈ ಪ್ರೇಮಪುತ್ಥಳಿಗಳನ್ನು ಸಲಹುತ್ತಾರೆ. ಎಲ್ಲ ಮಕ್ಕಳೂ ಒಂದೇ ರೀತಿಯಾಗಿರುವುದಿಲ್ಲ. ರಸ ರುಚಿ ಬುದ್ಧಿಗಳೆಲ್ಲ ಬೇರೆಯಾಗಿರುತ್ತವೆ. ಅವು ಕುರಿ ಹಿಂಡಲ್ಲ. ಆದುದರಿಂದ ಪ್ರತಿಯೊಂದು ಮಗುವಿನ ಕಡೆಗೂ ದಾದಿಯ ಲಕ್ಷ್ಯವಿರುತ್ತದೆ. ದಿನಂಪ್ರತಿ ಅದರ ಮಲಮೂತ್ರ, ನಿದ್ದೆ, ಸೊಲ್ಲು ಗುಲ್ಲು, ಮನಃಪ್ರವೃತ್ತಿ ಎಲ್ಲವನ್ನೂ ಬರೆದಿಡುವಳು ದಾದಿ. ಆಟಕ್ಕಾಗಿ ವಿಮಾನ, ಟ್ಯಾಂಕು, ಹಡಗು ಮೊದಲಾದ ಗೊಂಬೆಗಳನ್ನಿಟ್ಟಿದ್ದಾರೆ. ಪ್ರತಿಯೊಂದು ಮಗುವಿನ ಒಲವು ಯಾವುದರ ಕಡೆಗಿದೆಯೆಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸುವರು. ಮುಂದೆ ಅದರ ವಿಕಾಸಕ್ಕೆ ಅವಕಾಶವಿದೆ. ಈ ಕ್ರೆಚಿಗಳಲ್ಲಿ ಜಾತಿ, ಜನಾಂಗ, ಲಿಂಗಭೇದವಿಲ್ಲ. ಕೂಲಿಕಾರರ ಮಕ್ಕಳು, ರೈತರ ಮಕ್ಕಳು, ಅಧಿಕಾರಿಗಳ ಮಕ್ಕಳು, ಕ್ರಿಶ್ಚಿಯನರ ಮಕ್ಕಳು, ಮುಸಲ್ಮಾನರ ಮಕ್ಕಳು ಜೊತೆಜೊತೆಯಾಗಿ ಅಣ್ಣ ತಮ್ಮಂದಿರಂತೆ ಅಕ್ಕತಂಗಿಯರಂತೆ ಬಣ್ಣಬಣ್ಣದ ಪಾತರಗಿತ್ತಿಗಳ ಹಾಗೆ ನಕ್ಕುನಲಿದು ಹಾರಾಡುತ್ತಿವೆ

**ಕಿಂಡರ್ ಗಾರ್ಟನ್ ಶಾಲೆ**

ಮೂರು ವರುಷಗಳು ದಾಟಿದ ಕೂಡಲೇ ಸೋವಿಯೆಟ್ ಮಕ್ಕಳು ಕಿಂಡರ್‌ಗಾರ್ಟನ್ ಶಾಲೆಗಳಿಗೆ ತೆರಳುವರು ೭ ವರುಷದ ವರೆಗಿನ ಮಕ್ಕಳಿಗೆ ಇಲ್ಲಿ ಪ್ರವೇಶವಿದೆ. ಕ್ರೆಚಿ ಅಥವಾ ನರ್ಸರಿಶಾಲೆಗಳಿದ್ದಲ್ಲೆಲ್ಲ ಈ

ಕಿಂಡರ್‌ಗಾರ್ಟನ್ ಶಾಲೆಗಳಿರುವವು. ೧೯೩೬ರಲ್ಲಿ ಕಿಂಡರ್‌ಗಾರ್ಟನ್ ಶಾಲೆಗಳಿಗೆ ತೆರಳುವ ಮಕ್ಕಳ ಸಂಖ್ಯೆ ೧೧ ಲಕ್ಷ ೫೭ ಸಾವಿರವಿದ್ದಿತು. ಹೆಚ್ಚು ಕಡಿಮೆ ಈ ಶಾಲೆಗಳು ಸ್ವಲ್ಪ ವಯಸ್ಸಿಗೆ ಬಂದ ಮಕ್ಕಳ ಕ್ರೀಡೆಯೆಂದೇ ಹೇಳಬಹುದು. ಇವೂ ಸಮಜನಾಂಗವನ್ನು ತಯಾರಿಸುವ ಗರಡಿಮನೆಗಳೇ. ಶಾಲೆಗಳು ಭವ್ಯವಾಗಿವೆ. ವಿಶಾಲವಾದ ಭವನಗಳಿವೆ. ಮಕ್ಕಳ ಮನಸ್ಸನ್ನು ಸೆಳೆಯುವಂತೆ ಶೃಂಗರಿಸಲ್ಪಟ್ಟಿವೆ. ವಿವಿಧ ಜಾತಿಯ ಹೂಗಿಡ, ಮರಗಳನ್ನು ಭವನದಲ್ಲಿ ಚಿಕ್ಕದೊಡ್ಡ ಟಬ್‌ಗಳಲ್ಲಿಟ್ಟಿರುವರು. ಮಕ್ಕಳು ಶಾಲೆಗೆ ಸೇರಿದೊಡನೆಯೇ ವೈದ್ಯಕೀಯ ಪರೀಕ್ಷೆ ನಡೆಸುತ್ತಾರೆ. ಅದರ ಬೆಳವಣಿಗೆಗೆ ತಕ್ಕ ಊಟ-ಉಪಚಾರವನ್ನು ಡಾಕ್ಟರರು ಸೂಚಿಸುವರು. ಪ್ರತಿಯೊಂದು ಮಗುವಿಗೂ ಇಲ್ಲಿ ಸ್ವಾವಲಂಬನ ಕಲಿಸುತ್ತಾರೆ. ಮಗು ಯಾವ ಕೆಲಸವನ್ನು ಮಾಡಲು ಸ್ವಶಕ್ತವಾಗಿದೆಯೋ ಅದೆಲ್ಲವನ್ನೂ ಮಾಡಲು ಮಗುವಿಗೇ ಬಿಡುತ್ತಾರೆ. ದಾದಿಯರು ಕೇವಲ ಮಾರ್ಗದರ್ಶಕರಾಗಿರುವರು, ಅಷ್ಟೆ. ಶಾರೀರಿಕ ಮತ್ತು ಮಾನಸಿಕ ಬೆಳವಣಿಗೆಗೆ ಕಿಂಡರ್‌ಗಾರ್ಟನ್ ಶಾಲೆಗಳು ತವರೂರು. ಪಾಠಗಳಲ್ಲಿ ಸಂಗೀತ, ನೃತ್ಯ, ಚಿತ್ರ, ಶಿಲ್ಪ ಮೊದಲಾದ ಆಹ್ಲಾದಕರವಾಗಿರುವ ಲಲಿತಕಲೆಗಳಿಗೇ ಪ್ರಾಧಾನ್ಯ. ಚಿಕ್ಕ ಮಕ್ಕಳನ್ನು ಸಂತೋಷದಲ್ಲಿಡುವುದೇ ಪಾಠಪಟ್ಟಿ. ಮಗುವಿಗೆ ಯಾವ ವಿಷಯವು ಪ್ರಿಯವಾಗಿದೆಯೋ ಅದಕ್ಕೆ ಪ್ರೋತ್ಸಾಹ ದೊರೆಯುತ್ತಿದೆ. ಮಕ್ಕಳ ಮನಃಪ್ರವೃತ್ತಿಯನ್ನು ಇಲ್ಲಿಯೂ ಒರೆದಿಡುವರು ಮತ್ತು ರೂಪಿಸುವರು. ಮಕ್ಕಳ ಶಿಕ್ಷಣದ ಬಗ್ಗೆ ಅನುಭವ ಪಡೆಯಲು ತಾಯಿತಂದೆ ಕೂಡಾ ಈ ಕಿಂಡರ್‌ಗಾರ್ಟನ್ ಶಾಲೆಗಳಿಗೆ ಬಂದು ಹೋಗುತ್ತಾರೆ

## ಶಿಶುಗಳ ಸ್ವರ್ಗ

ರಶಿಯವು ಮಕ್ಕಳ ಸ್ವರ್ಗವೆಂದು ಅನೇಕ ಪಾಶ್ಚಾತ್ಯ ಲೇಖಕರು ಬರೆದಿರುವರು. ಮಕ್ಕಳೇ ಕಟ್ಟಿ ನಡೆಸುವ ರೇಲ್ವೆಗಳಿವೆ. ಒಂದು ಲಕ್ಷ ಮಕ್ಕಳು ಅದರಲ್ಲಿರುವರು. ಇಂಜಿನಿಯರರು, ಡ್ರೈವರರು, ಗಾರ್ಡರು, ಟಿಕೀಟು ಕೊಡುವವರು ಎಲ್ಲ ಬಾಲಕರೇ. ಅದರಂತೆ ಮಕ್ಕಳಿಗಾಗಿ ಹಡಗಗಳನ್ನು ರಚಿಸಿರುವರು. ಮಕ್ಕಳ ಅಂಗಡಿ, ಪುಸ್ತಕಭಾಂಡಾರ, ಪ್ರಕಾಶಕ ಸಂಸ್ಥೆಗಳೂ ಇರುವವು. ಬಾಲಕರೇ ೫೩ ಪತ್ರಿಕೆಗಳನ್ನು ಪ್ರಕಟಿಸುತ್ತಿದ್ದಾರೆ.

ಮಕ್ಕಳಿಗಾಗಿ ಪ್ರತ್ಯೇಕ ನಾಟಕಗೃಹ. ಈ ನಾಟಕಗೃಹಗಳಲ್ಲಿ ನಟವರ್ಗ ದಿಂದ ಹಿಡಿದು ಆಡಳಿತೆಯ ವರೆಗೆ ಎಲ್ಲ ಕಾರ್ಯ ನಿರ್ವಹಿಸುವವರು ಬಾಲ ಕರು. ಸಿನಿಮಾಗಳ ವಿಷಯದಲ್ಲಿ ಬಾಲಕರಿಗಾಗಿ ವಿಶಿಷ್ಟ ಚಾಕ್ಷಟಗಳನ್ನು ಪ್ರದರ್ಶಿಸುವರು. ವಯಸ್ಕರ ಚಾಕ್ಷಟಗಳನ್ನು ಅವರಿಗೆ ತೋರಿಸುವುದಿಲ್ಲ. ಇಂತಹ ಮಕ್ಕಳ ಥಿಯೇಟರ್‌ಗಳು ೧೫೦ ಇರುವವು. ಮಾಸ್ಕೋ ನಗರ ದಲ್ಲಿ ಬಾಲಕರಿಗಾಗಿ ೨೮ ಉದ್ಯಾನ ವನಗಳನ್ನು ನಿರ್ಮಿಸಿರುವರು. ವರುಷಂ ಪ್ರತಿ ಹತ್ತಿಪ್ಪತ್ತು ಲಕ್ಷ ಬಾಲಕರನ್ನು ದೇಶದ ಮೂಲೆಮೂಲೆಗೆ ಕರೆದೊಯ್ದು ವೈಶಾಲ್ಯ, ಸೃಷ್ಟಿಸಂಪತ್ತು, ಜನಜೀವನ ಮೊದಲಾದವುಗಳ ಜ್ಞಾನಮಾಡಿ ಕೊಡುವರು.

## ವಿದ್ಯಾದಾನ

ಕಿಂಡರ್‌ಗಾರ್ಟನ್ ಶಾಲೆಯಿಂದ ಮಕ್ಕಳನ್ನು ಮುಂದಿನ ವಿದ್ಯಾ ಭ್ಯಾಸಕ್ಕಾಗಿ ಪ್ರಾಥಮಿಕ ಶಾಲೆಗಳಿಗೆ ಕಳಿಸುವರು. ೮ರಿಂದ ೧೨ರ ವರೆಗೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ನಡೆಯುತ್ತಿದೆ. ೧೯೪೦ರಲ್ಲಿ ಈ ಶಾಲೆಗಳಲ್ಲಿ ಒಟ್ಟು ಇಪ್ಪತ್ತಿಕೋಟಿ ಮಕ್ಕಳು ಹಾಜರಿದ್ದರು. ಪ್ರಾಥಮಿಕ ಶಿಕ್ಷಣವು ಖಡ್ಡಾಯವಾಗಿದೆ. ಧರ್ಮಾರ್ಥ ವಿದ್ಯಾರ್ಥಿಗಳ ವೈದ್ಯಕೀಯ ಪರೀಕ್ಷೆಗೂ ಚಿಕಿತ್ಸೆಗೂ ಕಾಸುಕೊಡಬೇಕಾಗಿಲ್ಲ, ಜನಾಂಗದ ಆರೋಗ್ಯವು ರಾಷ್ಟ್ರದ ಭಾಗ್ಯವೆಂದು ಸರಕಾರವು ಅರಿತಿದೆ. ಮುಂದೆ ಹೈಸ್ಕೂಲು ಶಿಕ್ಷಣ ೧೫ ವರುಷದ ವರೆಗೆ. ಮಾತೃಭಾಷೆಯೇ ಶಿಕ್ಷಣದ ಮಾಧ್ಯಮಿಕ. ವಿದ್ಯಾರ್ಥಿಯು ರಾಷ್ಟ್ರಭಾಷೆ ಮತ್ತು ಯಾವುದಾದರೊಂದು ವಿದೇಶಿಭಾಷೆ ಯನ್ನು ಕಲಿಯಲೇ ಬೇಕೆಂಬ ನಿಯಮವಿದೆ. ಹಾಯಸ್ಕೂಲುಗಳಲ್ಲೂ ಪ್ರಾಣಿಶಾಸ್ತ್ರ, ಪ್ರಕೃತಿಶಾಸ್ತ್ರ, ರಸಾಯನಶಾಸ್ತ್ರ, ಭೂಗೋಳ, ಇತಿಹಾಸ, ಸಾಹಿತ್ಯ, ಭೂಗರ್ಭಜ್ಞಾನ ಮೊದಲಾದ ಎಲ್ಲ ವಿಷಯಗಳು ಇರುವವು. ವ್ಯವಹಾರಿಕ ಶಿಕ್ಷಣಕ್ಕೂ ವೃತ್ತಿಶಿಕ್ಷಣಕ್ಕೂ ಮಹತ್ವ ಕೊಟ್ಟಿರುವರು. ಹಾಯಸ್ಕೂಲು ಕಟ್ಟಡದ ಯಾಂತ್ರಿಕ ಕೊಠಡಿಗಳಲ್ಲಿ ದಿನಂಪ್ರತಿ ವಿದ್ಯಾರ್ಥಿ ಗಳು ಒಂದು ತಾಸು ದುಡಿಯಬೇಕಾಗಿರುವುದು. ವಾರಕ್ಕೆ ನಾಲ್ಕಾರು ತಾಸು ಹೊರಗಿನ ಯಾವುದಾದರೊಂದು ಕಾರ್ಖಾನೆಯಲ್ಲಿ ಕೆಲಸಮಾಡ ಬೇಕು.

## ವೃತ್ತಿ ಶಿಕ್ಷಣ

ಹಾಯುಸ್ಕೂಲು ಬಿಟ್ಟ ಮೇಲೆ ಉಚ್ಚ ಶಿಕ್ಷಣ ಅಥವಾ ವೃತ್ತಿ ಶಿಕ್ಷಣ ಇವುಗಳೆರಡರಲ್ಲಿ ಒಂದನ್ನು ವಿದ್ಯಾರ್ಥಿಯು ಆರಿಸಿಕೊಳ್ಳಬೇಕಾಗಿರುವುದು. ಅವರಿಗೆ ಇಷ್ಟ ಬಂದ ಹಾದಿ ಹಿಡಿಯಬಹುದು. ಉದ್ಯೋಗಗಳನ್ನು ಕಲಿಯಲು ಬಯಸಿದರೆ ಅವನನ್ನು ಕೈಗಾರಿಕೆಯ ಶಾಲೆಗೆ ಕಳಿಸುವರು. ಈ ಶಾಲೆಗಳಲ್ಲಿ ೧೯೪೦ರಲ್ಲಿ ೬೦ ಲಕ್ಷ ವಿದ್ಯಾರ್ಥಿಗಳಿದ್ದರು. ಇಲ್ಲಿ ಎರಡು ವರುಷಗಳ ಶಿಕ್ಷಣಪಡೆದು ಮುಂದೆ ಒಂದು ವರುಷ ಯಾವುದಾದರೊಂದು ಕಾರ್ಖಾನೆಯಲ್ಲಿ ಉಮೇದವಾರಿಗಾಗಿ ದುಡಿಯಬೇಕು. ಈ ಅವಧಿಯಲ್ಲಿ ಅವನ ಊಟ, ಕೊಠಡಿ, ಭತ್ತೆ ಎಲ್ಲವನ್ನು ಸರಕಾರವು ಒದಗಿಸುತ್ತದೆ. ಅಲ್ಲಿಂದ ಮತ್ತೆ ೫ ವರುಷಗಳ ಹೆಚ್ಚಿನ ಶಿಕ್ಷಣವಿದೆ. ಈ ಕೈಗಾರಿಕೆ ಕಾಲೇಜಿನಲ್ಲಿ ಪಾರಂಗತನಾಗಿ ಬಂದಾಗ ಅವನು ಶ್ರೇಷ್ಠತಜ್ಞನಾಗುವನು. ಈ ವೃತ್ತಿಶಿಕ್ಷಣದಲ್ಲಿ ನೂರಾರು ಭಾಗಗಳಿವೆ. ಇದರಂತೆ ಉಚ್ಚ ಶಿಕ್ಷಣದ ಏರ್ಪಾಡು. ಉಚ್ಚ ಶಿಕ್ಷಣಕ್ಕಾಗಿ ಸೋವಿಯೆಟ್ ಯೂನಿಯನ್‌ದಲ್ಲಿ ೭೧೬ ವಿಶ್ವವಿದ್ಯಾಲಯಗಳಿವೆ. (೧೯೪೦ರಲ್ಲಿ)ವಿದ್ಯಾರ್ಥಿಗಳ ಸಂಖ್ಯೆ ೭ ಲಕ್ಷವಿದ್ದಿತು. ೧೯೬೧ರಲ್ಲಿ ೧೬ಸಾವಿರ ಡಾಕ್ಟರರು ಮೆಡಿಕಲ್ ಕಾಲೇಜಗಳಲ್ಲಿ ಸರ್ಟಿಫಿಕೇಟ್ ಪಡೆದರು. ಉಪಾಧ್ಯಾಯರನ್ನು ತರಬೇತಿಗೊಳಿಸುವ ಕಾಲೇಜುಗಳೇ ೪೦೦ ಇವೆ. ಇವುಗಳಲ್ಲಿ ೩ ಲಕ್ಷ ಉಪಾಧ್ಯಾಯ ವಿದ್ಯಾರ್ಥಿಗಳಿದ್ದರು. ವೈಜ್ಞಾನಿಕ ಸಂಶೋಧನೆಗಳಿಗಾಗಿ ೮೦೬ ಸಂಸ್ಥೆಗಳಿದ್ದುವು (೧೯೩೮). ಇದರಂತೆ ನಿರಕ್ಷರಕುಕ್ಷಿಗಳಾದ ಹಿರಿಯರಿಗೂ ವಿದ್ಯಾದಾನ ಮಾಡಿದ್ದಾರೆ. ಕಣೆ, ಕಾರ್ಖಾನೆ, ಸಾಮೂಹಿಕ ಕೃಷಿಕ್ಷೇತ್ರ ಮೊದಲಾದ ಕಡೆಗಳಲ್ಲೆಲ್ಲೂ ಅಭ್ಯಾಸಕೂಟಗಳನ್ನೇರ್ಪಡಿಸಿ ಓದುಬರಹ ಕಲಿಸಿದರು. ಇಡೀ ಜನಾಂಗವೇ ಸುಶಿಕ್ಷಿತಗೊಳ್ಳಬೇಕೆಂದು ಬಾಲ್ಶೆವಿಕರ ಇಚ್ಛೆ. ಮೂಢ ಭಕ್ತಿ, ಸುಳ್ಳು ಸುದ್ದಿಗಳಿಗೆಲ್ಲ ಅವಿದ್ಯೆಯೇ ಕಾರಣ. ವಿದ್ಯಾಬುದ್ಧಿಯಿಲ್ಲದೆ ರಾಜ್ಯವ್ಯವಹಾರವೂ ನಡೆಯದು. ಅದಕ್ಕಾಗಿ ಇಷ್ಟೆಲ್ಲ ಯತ್ನ ಇದರಲ್ಲಿ ಸ್ಟಾಲಿನ್ನನಿಗೆ ಅಪೂರ್ವವಾದ ಯಶಸ್ಸು ದೊರೆತಿರುವುದು. ೧೯೧೪ರಲ್ಲಿ ನೂರರಲ್ಲಿ ೭೩ ಜನ ನಿರಕ್ಷರಕುಕ್ಷಿಗಳಿದ್ದರು. ೧೯೩೬ರಲ್ಲಿ ನೂರಕ್ಕೆ ೮೧·೩ ಜನ ವಿದ್ಯಾವಂತರಾದರು. ದೇವರು ಕಣ್ಣು ಕೊಟ್ಟಿದ್ದರೂ ಕುರುಡರಂತಿದ್ದ ಈ ಜನಕ್ಕೆ ದಿವ್ಯ ದೃಷ್ಟಿ

ಕೊಡಲು ಸೋವಿಯೆಟ್ ಯೂನಿಯನ್‌ದ ಪತ್ರಿಕೆಗಳು, ವಾಕ್ಪಟಗಳು, ನಾಟಕಗೃಹಗಳು, ಅಪಾರ ಸೇವೆ ಸಲ್ಲಿಸಿವೆ.

## ಪತ್ರಿಕೆಗಳ ಸೇವೆ

ಸೋವಿಯೆಟ್‌ಯೂನಿಯನ್‌ದಲ್ಲಿ ಒಟ್ಟು ೩೭೦೦ ವೃತ್ತಪತ್ರಿಕೆಗಳಿವೆ. ೧೯೪೦ರಲ್ಲಿ ಒಟ್ಟು ೩ ಕೋಟಿ ೮೦ ಲಕ್ಷ ಪ್ರತಿ ಪತ್ರಿಕೆಗಳು ಅಚ್ಚಾದುವು. ಇದಲ್ಲದೆ ಕಣಿ, ಕಾರಖಾನೆ, ಶಾಲೆ, ಕಾಲೇಜುಗಳಲ್ಲಿ ಅಚ್ಚಾಗುತ್ತಿರುವ ಪತ್ರಿಕೆಗಳು ಬೇರೆಯೇ. ಕೆಂಪು ಸೇನೆ, ನಾವಿಕರಿಗೂ ಪ್ರತ್ಯೇಕ ವೃತ್ತಪತ್ರಗಳಿರುವವು. ಲೆನಿನ್‌ಗ್ರಾಡದ ರೆಡ್‌ಬ್ಯಾನರ್ ಕಾರ್ಖಾನೆಯು ಕೂಲಿಕಾರರಿಗಾಗಿ ಒಂದು ಪತ್ರಿಕೆಯನ್ನು ಕೂಲಿಕಾರರೇ ನಡೆಸುತ್ತಿರುವರು. ಆಡಳಿತ ಮಂಡಳಿ, ಸಂಪಾದಕ, ಚಿತ್ರಕಾರ, ಕತೆಗಾರ ಮೊದಲಾದವರನ್ನು ನೇಮಿಸಿಕೊಂಡಿದೆ. ದೇಶದಲ್ಲಿ ೭೦ ಸಾವಿರ ಗ್ರಂಥಭಾಂಡಾರಗಳಿರುವವು. ೧೯೪೦ರಲ್ಲಿ ೭೦ ಕೋಟಿ ಗ್ರಂಥಗಳು ಅಚ್ಚಾದುವು. ಥಿಯೇಟರಗಳ ಸಂಖ್ಯೆ ೮೨೫. ಕ್ಲಬ್‌ಗಳು ೯೫, ೬೨೬. ದೇಶದ ಸಾಂಸ್ಕೃತಿಕ ಅಭಿವೃದ್ಧಿಗಾಗಿ ಇವು ವಿಶ್ವಸರಿಗಳಂತೆ ದುಡಿಯುತ್ತಿರುವವು.

## ಶಿಕ್ಷಣ ಪದ್ಧತಿ

ನವಜನಾಂಗದ ಅಭ್ಯುದಯಕ್ಕೆ ಸೋವಿಯೆಟ್ ಶಿಕ್ಷಣ ಪದ್ಧತಿಯೇ ಕಾರಣವೆಂದು ಅನೇಕ ಪಂಡಿತರು ಹೇಳಿರುವರು. ಮೊದಲು ಬಾಲ್ಶೆವಿಕರು ಪಾಶ್ಚಾತ್ಯಯೋಜನೆಗಳೊಂದೊಂದನ್ನೇ ಜಾರಿಗೆ ತಂದು ನೋಡಿದರು. ಆದರೆ ಅವು ತೃಪ್ತಿಕರವಾಗಿ ಕಾಣಲಿಲ್ಲ. ಕೊನೆಗೆ ತಾವೇ ಒಂದು ಯೋಜನೆಯನ್ನು ತಯಾರಿಸಿದರು. ಇದರಲ್ಲಿ ಮಕ್ಕಳ ಬಾಲ್ಯಕಾಲದ ತರಬೇತಿಗೇ ಹೆಚ್ಚಿನ ಪ್ರಾಶಸ್ತ್ಯಕೊಡಲಾಗಿದೆ. ಮುಂದಿನ ಶಿಕ್ಷಣಕ್ರಮದಲ್ಲೂ ಬಹಳ ವೈಶಿಷ್ಟ್ಯವುಂಟು. ಶಿಕ್ಷಣ ಸಂಸ್ಥೆಗಳನ್ನು ಶಿಕ್ಷಕ-ವಿದ್ಯಾರ್ಥಿ ಮಂಡಲಗಳೇ ನಡೆಸುವವು. ಇದರಿಂದ ಅವರಲ್ಲಿ ಸಹಕಾರವಿದೆ. ವಿದ್ಯಾಭಿವೃದ್ಧಿ ಸಂಸ್ಥೆಯ ಹಿತ ಇವೇ ಅವರ ಏಕೋದ್ದೇಶ. ಸಂಸ್ಥೆಯು ತಮ್ಮದೆಂಬ ಆತ್ಮೀಯತೆಯೂ ಉಂಟಾಗಿರುವುದು. ವಿದ್ಯಾರ್ಥಿಗಳಿಗೂ ಶಿಕ್ಷಕರಿಗೂ ತಾಯಿಮಕ್ಕಳ ಸಂಬಂಧವಿದ್ದಂತಿದೆ. ಉಪಾಧ್ಯಾಯರಿಗೆ ವಿದ್ಯಾರ್ಥಿಗಳು

ಅಷ್ಟು ಗೌರವ ಕೊಡುವರು. ವಿದ್ಯಾರ್ಥಿಗಳ ಮೇಲೆ ಶಿಕ್ಷಕರ ಮಮತೆಯೂ ಹಿತಚಿಂತೆಯೂ ಅಷ್ಟಿದೆ. ಪ್ರತಿಯೊಂದು ಕ್ಲಾಸಿಗೊಬ್ಬ ಲೀಡರ್. ಮತದಾನ ಪದ್ಧತಿಯಿಂದ ಆ ಕ್ಲಾಸಿನ ವಿದ್ಯಾರ್ಥಿಗಳೇ ಅವನನ್ನು ಆರಿಸುವರು. ಹಾಜರಿ, ಶಿಸ್ತು, ಮೊದಲಾದವುಗಳೆಲ್ಲವನ್ನೂ ನೋಡಿಕೊಳ್ಳುವುದು ಅವನ ಮೇಲಿರುವ ಭಾರ. ಅಡಿಗೆಮನೆ, ಶುಚಿತ್ವ ಮೊದಲಾದವುಗಳನ್ನು ನೋಡಿಕೊಳ್ಳಲು ಬೇರೆ ಕಮಿಟಿಗಳನ್ನು ಆರಿಸುವರು. ಸಹಶಿಕ್ಷಣವೂ ಜಾರಿಯಲ್ಲಿರುವುದು. ಬಾಲ್ಯದಿಂದಲೂ ಹೆಣ್ಣುಗಂಡು ಒಟ್ಟೊಟ್ಟಿಗೆ ಬೆಳೆದು ಒದುಕಿ ಬಾಳಿರುವುದರಿಂದ ಅವರಲ್ಲಿ ದೇಹಭಾವವುಂಟಾಗಲಿಲ್ಲ. ಕ್ಲಾಸಿಗೆ ಹುಡುಗಿಯರು ಬಂದೊಡನೆಯೇ ಗೊಳ್ಳೆಂದು ನಗಲಾರರು. ಅವರನ್ನು ನೋಡುವುದರಲ್ಲೇ ಕಾಲ ಕಳೆಯಲಾರರು. ವಿದ್ಯಾರ್ಥಿ ವಿದ್ಯಾರ್ಥಿನಿಯರಲ್ಲೂ ಪರಸ್ಪರ ಪ್ರೀತ್ಯಾದರವಿದೆ. ಒಬ್ಬರಿಗೊಬ್ಬರು ಮೋಸಮಾಡಲಾರರು.

## ರಾಷ್ಟ್ರಸೇವೆ

ಸಮಾಜದ ಸೇವೆ, ರಾಷ್ಟ್ರದ ಸೇವೆ ಇವೇ ಶಿಕ್ಷಣದ ಮೂಲೋದ್ದೇಶ. ದುಡಿಯಿರಿ. ದೇಶದ ರಾಜ್ಯಾಡಳಿತೆಯಲ್ಲಿ ಪಾಲುಗಾರರಾಗಿರಿ. ದೇಶಸೇವೆಗೆ ಶಕ್ತರಾಗಿರಿ. ನಿಮ್ಮ ಅಳಿಲುಸೇವೆ ಸಲ್ಲಿಸಿರಿ—ಎಂದೆನ್ನುತ್ತಿದೆ ಸರಕಾರ. ಇದೇ ಅವರ ಮೂಲಮಂತ್ರ. ವಿದ್ಯೆ, ನೌಕರಿಗಾಗಿ ಅಲ್ಲ. ಧನೋತ್ಪಾದನೆಗಾಗಿಯೂ ಅಲ್ಲ ಆದುದರಿಂದ ಎಲ್ಲರಿಗೂ ಪುಕ್ಕಟೆ ವಿದ್ಯಾದಾನ; ಉಚ್ಚ ಶಿಕ್ಷಣದಲ್ಲಿ ವಿದ್ಯಾರ್ಥಿಗಳು ಫೀ ಕೊಡಬೇಕಾಗಿದ್ದರೆ ಸರಕಾರವು ವಿದ್ಯಾರ್ಥಿಗಳಿಗೆ ಭತ್ತೆ ಕೊಡುವುದು. ಆದುದರಿಂದ ಬಡತನವು ವಿದ್ಯಾರ್ಜನೆಗೆ ತೊಡಕಾಗಿಲ್ಲ. ತಂದೆ-ತಾಯಿಗಳ ಪೋಷಣೆಯನ್ನು ಸರಕಾರವು ಮಾಡುತ್ತಿರುವುದರಿಂದ ಆ ಭಾರವೂ ವಿದ್ಯಾರ್ಥಿಗಳ ಮೇಲಿರುವುದಿಲ್ಲ. ಶಾಲೆ, ಕಾಲೇಜುಗಳಿಂದ ಹೊರಗೆ ಬಂದೊಡನೆಯೇ 'ನೌಕರಿಗೇನು ಗತಿ! ಹೊಟ್ಟೆಗೇನು ಗತಿ?' ಎಂದು ಯಾರೂ ಚಿಂತಿಸಲಾರರು. ಸರಕಾರವು ಮೊದಲೇ ವೃತ್ತಿಶಿಕ್ಷಣ ಮೊದಲಾದವುಗಳನ್ನು ಕೊಟ್ಟು ಅವರನ್ನು ತರಬೇತಿಗೊಳಿಸಿರುವುದರಿಂದ ಅಭ್ಯಾಸ ಮುಗಿದೊಡನೆಯೇ ಕೆಲಸ ಕೊಡಿಸುತ್ತದೆ. ನಿರುದ್ಯೋಗವೆಂಬುದೇ ಇಲ್ಲ ಸೋವಿಯೆಟ್ ಯೂನಿಯನ್‌ದಲ್ಲಿ.

ವಿದ್ಯಾರ್ಥಿಗಳು ರಾಜಕೀಯ ರಂಗದಲ್ಲಿ ಕಾಲಿಡಬಾರದೆಂಬ ನಿರ್ಬಂಧ ವಿಲ್ಲ. ಮುಂದೆ ದೇಶದ ಆಡಳಿತೆಯನ್ನು ನಡೆಸುವವರು ಅವರೇ. ಹೀಗಿರು ವಾಗ ವಿದ್ಯಾರ್ಥಿಗಳಿಗೆ ರಾಜಕೀಯ ಶಿಕ್ಷಣದ ಆವಶ್ಯಕತೆಯಿಲ್ಲವೇ? ನಿಜ ವಾಗಿ ನೋಡಿದರೆ ಇದು ಮೂಲಮಂತ್ರವಾಗಿರಬೇಕಾಗಿದೆ. ಸೋವಿಯೆಟ್ ಯೂನಿಯನ್‌ದಲ್ಲಿ ಇದಕ್ಕೆ ಮಹತ್ವ ಕೊಟ್ಟಿದ್ದಾರೆ. ೧೮ ವರುಷಕ್ಕೆ ಕಾಲಿಟ್ಟ ಪ್ರತಿಯೊಬ್ಬ ಗಂಡು ಹೆಣ್ಣಿಗೆ ಮತದಾನ ಹಕ್ಕನ್ನು ಕೊಟ್ಟಿರುವರು. ವಿದ್ಯಾರ್ಥಿಗಳೂ ಚುನಾವಣೆಗೆ ನಿಲ್ಲಬಹುದು. ಸೋವಿಯೆಟ್ ವಿದ್ಯಾರ್ಥಿ ಗಳು ಇದರ ಲಾಭ ಪಡೆದುಕೊಂಡಿದ್ದಾರೆ. ಸುಪ್ರೀಂ ಪಾರ್ಲಿಮೆಂಟದ ಸದಸ್ಯರಲ್ಲಿ ಒಂದೈದರಷ್ಟು ಮಂದಿ ೧೮ರಿಂದ ೩೦ವರುಷಗಳೊಳಗಿನ ವಿದ್ಯಾರ್ಥಿ ಗಳಿರುವರು.

ಸೋವಿಯೆಟ್ ಯೂನಿಯನ್‌ದಲ್ಲಿ ಹೊಸ ಜನಾಂಗ ರೂಪುಗೊಳ್ಳು ತ್ತಿದೆ. 'ನಮಗಿಂತ ಇವರ ಜೀವನ ಸುಖಮಯವಾಗಬಹುದು. ನಾವು ಪಟ್ಟ ದುಃಖ ದುಮ್ಮಾನಗಳನ್ನು ಅವರು ಪಡಬೇಕಾಗಿಲ್ಲ' ಎಂದು ಲೆನಿನ್ ನುಡಿದ. ನಿಜ. ಜಾತಿ, ಮತ ದ್ವೇಷವಿಲ್ಲದೆ ಹೊಸ ಜನ ಸಿದ್ಧವಾಗುತಿದ್ದಾರೆ. ಒಬ್ಬನ ಬಾಯಿ ಬಡಿದು ಇನ್ನೊಬ್ಬ ತಿನ್ನಲಾರ. ಭಿನ್ನ ಭಿನ್ನ ಜನ ಒಂದೇ ತಾಯಿಯ ಮಕ್ಕಳಂತೆ ಪರಸ್ಪರ ಭ್ರಾತೃಭಾವದಿಂದ ಬದುಕುತಿದ್ದಾರೆ. ಈ ದೇಶವನ್ನು ಕಟ್ಟಿದವರು ತಾವೆಂಬ ಅಭಿಮಾನವಿದೆ. ಅದನ್ನು ರಕ್ಷಿಸಿಕೊಳ್ಳ ಬೇಕೆಂಬ ಸ್ವದೇಶಾಭಿಮಾನವಿದೆ. ಅದಕ್ಕಾಗಿ ದುಡಿಯಲೂ ಮಡಿಯಲೂ ಅವರು ಸಿದ್ಧರು. ಇಂತಹವರಿಂದ ದೇಶದ, ಲೋಕದ ಉದ್ಧಾರವಾಗದೇ ಇದ್ದರೆ ಇನ್ನಾರಿಂದಾಗಬೇಕು?

—

## ವಜ್ರಾದಪಿ ಕಠೋರಾಣಿ

'ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ' ಯೆಂದು ದೊಡ್ಡ ಮನುಷ್ಯರ ಗುಣಲಕ್ಷಣವನ್ನು ತೂಗುವವರುಂಟು. ಸ್ಟಾಲಿನ್ನನೂ ಅದಕ್ಕೆ ಅಪವಾದವಾಗಿಲ್ಲ. ಜನರ ದಾರಿದ್ರ್ಯ, ದುಃಖ ನೋಡಿ ಅವನ ಮನಸ್ಸು ಕರಗಿದರೆ, ದೇಶದ್ರೋಹಿಗಳನ್ನು ಹುಟ್ಟಡಗಿಸುವ ಕಾಲಕ್ಕೆ ಅದು

ವಜ್ರಾಯುಧವೇ ಆಗುತ್ತದೆ. ಆದರೆ ಅವನ ಈ ನಡತೆಯನ್ನು ಕ್ರೂರತನ ವೆಂದೆನ್ನುವವರುಂಟು. ರಾಜಕೀಯ ವಿರೋಧಿಗಳನ್ನು ಕೊಲೆಮಾಡಿದುದು ಅದಕ್ಕೊಂದು ಮುಖ್ಯ ಉದಾಹರಣೆಯಾಗಿಯೂ ಕೊಡುತ್ತಿದ್ದಾರೆ. ಸ್ಟಾಲಿನ್ನನ ಧವಳಕೀರ್ತಿಗೆ ಮಸಿ ಹಚ್ಚಲೂ ಇದರ ದುರುಪಯೋಗಮಾಡಿಕೊಳ್ಳಲಾಗಿದೆ. ಸೋವಿಯೆಟ್ ಯೂನಿಯನ್‌ದ ಮೇಲೆ, ಅದರ ನಾಯಕರ ಮೇಲೆ ಜಗತ್ತಿನಲ್ಲಿ ತಿರಸ್ಕಾರ ಹುಟ್ಟಲಿಯೆಂಬುದೇ ಈ ಅಪಪ್ರಚಾರದ ಮೂಲ ಉದ್ದೇಶ ಜನಪ್ರೀತಿಗೆ ಪಾತ್ರರಾದ ಮುಖಂಡರ ವಿರುದ್ಧ, ದೇಶದ ವಿರುದ್ಧ, ವಿದೇಶಿಯರೊಡನೆ ಒಳಸಂಚು ನಡೆಸಿದ ದೇಶದ್ರೋಹಿಗಳಿಗೆ ಶಿಕ್ಷೆಯಿಲ್ಲವೇನು? ಇದನ್ನು ತಿಳಿದರೆ ಸ್ಟಾಲಿನ್ ತನ್ನ ವಿರೋಧಿಗಳ ಆಟ ನಿಲ್ಲಿಸಿದುದು ಏನೂ ಆಶ್ಚರ್ಯವಾಗಿ ಕಾಣುವುದಿಲ್ಲ.

### ಕಿರೊವ್‌ನ ಕೊಲೆ

ಸ್ಟಾಲಿನ್ನನ ವಿರುದ್ಧ ಸಂಘಟಿತ ಒಳಸಂಚು ಬಯಲಿಗೆ ಬಿದ್ದುದು ೧೯೩೪ರಲ್ಲಿ. ಅವನ ಮಿತ್ರ ಕಿರೊವ್‌ನನ್ನು ದುರಾತ್ಮರು ಕೊಲೆಮಾಡಿದರು. ಕಿರೋವ್ ಬಾಲ್ಶೆವಿಕ್ ಪರಿಷ್ಠಸಮಿತಿಯ ಸದಸ್ಯ. ಎಳೆ ವಯಸ್ಸು. ಆದರೆ ದೊಡ್ಡಮೇಧಾವಿ. ಅವನ ವ್ಯಕ್ತಿತ್ವಕ್ಕೆ ರಶಿಯವೂ ಮುಗ್ಧವಾಗಿ ಹೋಗಿತ್ತು. ಮೊದಲು ಉತ್ತರ ಆರ್ಕಟಿಕ್ ಭಾಗದ ಆಡಳಿತೆಯ ಹೊಣೆ ಹೊತ್ತಿದ್ದ. ಬಾಲ್ಟಿಕ್-ಬಿಳಿ ಸಮುದ್ರಗಳನ್ನು ಜೋಡಿಸುವ ಸ್ಟಾಲಿನ್ ಕಾಲುವೆ-ಕಡಿಸಿದವನು ಅವನೇ. ಸ್ಟಾಲಿನ್ನನ ಮೇಲೂ ಅವನದು ವರ್ಚಸ್ಸು ಬಹಳ. ರಾಜಕೀಯ ವಿರೋಧಿಗಳನ್ನು ಗುಡಿಸಿಬಿಡಲು ಸ್ಟಾಲಿನ್ ಕೈಯೆತ್ತಿದಾಗ ಕೈಬಿಗಿಹಿಡಿಯುವಂತೆ ಮಾಡುತಿದ್ದನು. 'ರೂಯಿಟಿನ್' ತೋಫಿನ ಬಾಯಿಗೆ ತುತ್ತಾಗದಂತೆ ಬದುಕಿಸಿದ. ಸ್ಟಾಲಿನ್ ಅವನ ಮಾತನ್ನು ಮೀರಿಹೋಗುತಿದ್ದಿಲ್ಲ. ಇಂತಹ ಗೆಳೆಯನನ್ನು ಕಳೆದುಕೊಂಡೊಡನೆಯೇ ಸ್ಟಾಲಿನ್ ಸಹಿಸದಾದ.

ಕಿರೊವ್ ಕೊಲೆಯ ಬಗ್ಗೆ ಹೆಚ್ಚಿನ ಶೋಧಮಾಡಲು ಗೂಢಚಾರ ದಳದ ಜಾಕೊಬ್ ಅಗ್ರಾನೋವ್ ಲೆನಿನ್‌ಗ್ರಾಡಕ್ಕೆ ಬಂದನು. ಕಿರೊವ್ ಪ್ರಾಣಕ್ಕೆರವಾದುದೂ ಅಲ್ಲೇ. ಅಗ್ರಾನೊವ್ ಬಂದವನು ಬಹಳ ಆಳದ ವರೆಗೆ ಕೈಚಾಚಿ ನೋಡಿದ ಕತ್ತಲೆಯಲ್ಲಿ ಏಳ್ಳು ಬಿದ್ದರೂ ಕಾಣಿಸುವ

ಪಿಕ್ಕಿನ ಕಣ್ಣು ಅವನದು. ಹಾಲು ಕೇಳಲು ಬಂದವನು ಎಮ್ಮೆಯ ಕ್ರಯ ಕೇಳಿದಹಾಗೆ ಕಿರೊವ್‌ನ ಕೊಲೆಗಾರರ ಪತ್ತೆ ಮಾಡಲು ಬಂದವನು ಸ್ಟಾಲಿನ್ನನ ವಿರುದ್ಧ ಒಳಸಂಚು ಪತ್ತೆಗೆ ಹೊರಟ. ಸ್ಟಾಲಿನ್ನನನ್ನೂ ಕೊಲೆ ಮಾಡಲು ಪಿತೂರಿ ನಡೆಸುವ ಒಂದು ಸಮಿತಿಯು ಇದೆಯೆಂದು ಅವನಿಗೆ ತಿಳಿದು ಬಂದಿತು. ಕಾಮೆನೆೊವ್, ಜಿನೊವಿವ್, ಬುಖಾರಿನ್ ಮೊದಲಾದ ಧುರೀಣರ ಕೈ ಇದರಲ್ಲಿದೆಯೆಂದೂ ಕಂಡುಹಿಡಿದ. ಟ್ರಾಟ್‌ಸ್ಕಿ ದೂರದಲ್ಲಿ ಕುಳಿತು ಸೂತ್ರಚಾಲನೆ ಮಾಡುತ್ತಿರುವನೆಂದೂ ಅಗ್ರಾನೊವ್ ವರದಿ ಮಾಡಿಕೊಂಡ.

## ಟ್ರಾಟ್‌ಸ್ಕಿ ಒಳಸಂಚು

ಸ್ಟಾಲಿನ್‌ನನ್ನು ತಳ್ಳಿಹಾಕಿ ಪುನಃ ಸೋವಿಯಟ್ ಯೂನಿಯನ್‌ದಲ್ಲಿ ಅಧಿಕಾರ ಪ್ರಾಬಲ್ಯಕ್ಕೆ ಬರಲು ಟ್ರಾಟ್‌ಸ್ಕಿ ಒಳಸಂಚು ನಡೆಸುತ್ತಿದ್ದನೆಂಬುದೇನೋ ನಿರ್ವಿವಾದ ವಿಷಯ. ಪುನಃ ರಶಿಯಕ್ಕೆ ತೆರಳುವ ಆಶೆಯಿದ್ದಿತು ಅವನಿಗೆ. ಸಾಯುವ ವರೆಗೂ ಆ ಆಶೆ ಇಂಗಿ ಹೋಗಿರಲಿಲ್ಲ. ಸ್ಟಾಲಿನ್ನನ ಅವತಾರ ಮುಗಿದರೆ ದಾರಿ ಸುಗಮವಾಗಬಹುದೆಂದು ಅವನ ಸಂಚಗೆ. ಅದಕ್ಕಾಗಿ ಸ್ಟಾಲಿನ್ನನ ಕೊಲೆ ಮಾಡಲು ಚಾಣಕ್ಯ ತಂತ್ರ ಹೂಡಿದ್ದ. ಇದನ್ನು ಹೇಗೆ ನಡೆಸುತಿದ್ದನು? ಅವನಿಗೆ ಧನ ಜನ ಬೆಂಬಲವೆಲ್ಲಿಂದ? ಇವೆಲ್ಲ ಪ್ರಶ್ನೆಗಳನ್ನು ಬಿಡಿಸುವುದು ಕಠಿಣ. ರಶಿಯದಲ್ಲಿ ಅವನ ಅನೇಕ ಕೈಗಳಿದ್ದುವಂತೆ. ಆ ಮಾತು ನಿಜವಿರಲೂ ಬಹುದು. ಏಕೆಂದರೆ ಅವನಿಗೂ ದೇಶದಲ್ಲಿ ಸಾಕಷ್ಟು ಜನ ಬೆಂಬಲವಿದ್ದಿತು. ಇನ್ನು ದುಡ್ಡಿನ ಪ್ರಶ್ನೆ. ಸೋವಿಯಟ್ ಯೂನಿಯನ್‌ದ ಮೇಲೆ ದ್ವೇಷವಿದ್ದ ಬಂಡವಲು ರಾಷ್ಟ್ರಗಳು ಅಪ್ರತ್ಯಕ್ಷ ರೀತಿಯಲ್ಲಿ ಟ್ರಾಟ್‌ಸ್ಕಿಗೆ ಧನಸಹಾಯ ಮಾಡುತಿದ್ದವಂತೆ. ಇವುಗಳಲ್ಲಿ ನಾಝಿಗಳ ಹೆಸರು ಮುಖ್ಯವಾಗಿದೆ. ಇಷ್ಟೇ ಅಲ್ಲ—ಫ್ಯಾಸಿಸ್ಟ ಸೇನೆಯ ಸಹಾಯದಿಂದ ಸ್ಟಾಲಿನ್ನನ ವಿರುದ್ಧ ದಂಡೆತ್ತಿ ಹೋಗುವ ವಿಚಾರವೂ ಟ್ರಾಟ್‌ಸ್ಕಿಗಿತ್ತೆಂದು ಹೇಳಲಾಗುತ್ತಿದೆ. ಹಿಟ್ಲರ್ ಅಧಿಕಾರಕ್ಕೆ ಬಂದಂದಿನಿಂದಲೂ ಸೋವಿಯೆಟ್ ಯೂನಿಯನ್‌ದ ವಿರುದ್ಧ ಕೊಡಲಿ ಮಸೆಯುತಿದ್ದನು. ೧೯೩೫ರಿಂದ ಟ್ರಾಟ್‌ಸ್ಕಿಯ ಅನುಚರರೊಂದಿಗೆ ಸಂಧಾನ ಮಾಡಿಕೊಳ್ಳಲೂ ಯತ್ನಿಸುತ್ತಿದ್ದನಂತೆ. ರಶಿಯದ ಸೇನೆ, ವಿಮಾನ ದಳ, ಕಾರ್ಖಾನೆಗಳ ಉತ್ಪಾದನ

ಶಕ್ತಿ, ಎಲ್ಲವೂ ಜರ್ಮನರಿಗೆ ತಿಳಿದಿದ್ದಿತು. ಯಾರೋ ಉಚ್ಚ ಅಧಿಕಾರಿಗಳು ಈ ಯೋಜನೆಗಳನ್ನು ಜರ್ಮನರಿಗೆ ತಿಳಿಸಿರಬೇಕೆಂದು ಸೋವಿಯೆಟ್ ಮುಖಂಡರಿಗೆ ಸಂಶಯವೂ ಬಂದಿತ್ತು. ರಶಿಯದಲ್ಲಿ ಆಸ್ತಿ ವಿನಾಶಕ ಚಟುವಟಿಕೆಯನ್ನು ಕೈಕೊಂಡ ಜನರಿಗೆ ನಾಝಿಗಳು ಧನ ಸಹಾಯವನ್ನು ಮಾಡುತ್ತಿದ್ದರು. ಅಗ್ರಾನೊವ್ ಇವೆಲ್ಲವನ್ನೂ ಶೋಧಿಸಿದನು.

## ಶಿಕ್ಷೆ

ಕಾಮೆನೊವ್, ಜಿನೊವಿಫ್ ಮೊದಲಾದವರು ಕಿರೊವ್‌ನ ಕೊಲೆಯ ಅಪಾದನೆಯ ಮೇಲೆ ಬಂಧಿಸಲ್ಪಟ್ಟರು. ಅವರ ಬೆನ್ನ ಮೇಲೆ ದೇಶದ್ರೋಹಿಗಳೆಂಬ ಮುದ್ರೆಯೂ ಬಿದ್ದಿತು. ೧೯೩೫ನೇ ಜನವರಿಯಲ್ಲಿ ಅವರ ವಿಚಾರಣೆ ನಡೆಯಿತು. ಕಿರೊವ್‌ನ ಕೊಲೆಯಲ್ಲಿ ತಮ್ಮ ಕೈಯಿದೆಯೆಂದೂ ಟ್ರಾಟ್‌ಸ್ಕಿಯೊಡನೆ ಸಂಬಂಧವಿಟ್ಟುಕೊಂಡಿದ್ದೆವೆಂದೂ ಇವರು ಒಪ್ಪಿಕೊಂಡರಂತೆ. ನ್ಯಾಯಾಧೀಶರು ಅವರಿಬ್ಬರಿಗೂ ತಲಾ ಹತ್ತು ವರುಷಗಳ ಕಠಿಣ ಶಿಕ್ಷೆಯನ್ನು ವಿಧಿಸಿದರು. ಹೋದಲ್ಲಿ ಬಿಡದು ಹೊಲೆಯರ ದೈವವೆಂಬಂತೆ ಸೆರೆಮನೆಗೆ ತೆರಳಿದರೂ ಟ್ರಾಟ್‌ಸ್ಕಿ ಒಳಸಂಚಿನ ಭೂತದ ಪೀಡೆ ತಪ್ಪಲಿಲ್ಲ. ಅದರ ಹಸಿದ ಹೊಟ್ಟೆ ತಣಿಯಲಿಲ್ಲವೇನೋ? ನರಬಲಿಯೇ ಬೇಕೆಂದು ಅಪೇಕ್ಷಿಸಿದಂತೆ ಕಾಣುತ್ತಿದೆ. ೧೯೩೬ನೇ ಆಗಸ್ಟದಲ್ಲಿ ಕಾಮೆನೊವ್, ಜಿನೊವಿಫ್, ಸ್ಮಿರ್ನೊವ್ ಮೊದಲಾದ ೧೬ ಜನ ಗುಂಡಿಗಾಹುತಿಯಾದರು.

## ಬಲಪಕ್ಷದ ಬಲಿ

ಒಂದು ಪಥವನ್ನು ಆರಿಸಿಕೊಂಡ ಮೇಲೆ ಅದೇ ದಾರಿ ಹಿಡಿದು ಹೋಗುವುದು ಮಾನವನ ಸ್ವಭಾವ. ಅದು ಸನ್ಮಾರ್ಗವಿರಲಿ, ದುರ್ಮಾರ್ಗವಿರಲಿ ಎರಡೂ ಒಂದೆ. ಉಗ್ರಪಕ್ಷದ ಸದಸ್ಯರ ತಲೆ ಉರುಳಿದೊಡನೆಯೇ ಬಲಪಕ್ಷದ ಕಡೆ ಸ್ಟಾಲಿನ್ನನ ಕಣ್ಣು ಹೊರಳಿತು. ರಿಕೊವ್, ಬುಖಾರಿನ್, ಪ್ಯಾಟ್‌ಕೋವ್, ರಾಡೆಕ್, ಸೊಕಾಲಿನಿಕೊವ್ ಇವರು ಈ ಬಲಪಕ್ಷದ ಆಧಾರಸ್ತಂಭಗಳು. ಟ್ರಾಟಸ್ಕಿ ಒಳಸಂಚಿನ ಸುಳಿಯಲ್ಲಿ ಇವರೂ ಸಿಲುಕಿಬಿದ್ದಿದ್ದರು. ಸ್ಟಾಲಿನ್ನನಿಗಿಂತ ಟ್ರಾಟಸ್ಕಿಯು ಸೊಗಸಾಗಿ ರಾಜ್ಯಭಾರ ಮಾಡುತ್ತಿದ್ದನೆಂದು ಬುಖಾರಿನ್ ಒಮ್ಮೆ ಟೀಕಿಸಿದ್ದನಂತೆ. ಕುಲಕರ ಕುಲನಾಶವನ್ನು ಅವನು ಮಹೋಗ್ರವಾಗಿ ಖಂಡಿಸಿದ್ದ. ಈ ಟೀಕೆ ಟಿಪ್ಪಣೆ

ಗಳಿಂದ ಸ್ಟಾಲಿನ್ ರೇಗಿದ್ದನೇ ಇಲ್ಲವೇ ಎಂಬುದು ತಿಳಿದಿಲ್ಲ. ಅದೇನಿದ್ದರೂ ೧೯೩೪ರಲ್ಲಿ ಟ್ರಾಟ್ಸ್ಕಿ ಪಿತೂರಿಯಲ್ಲಿ ಭಾಗವಹಿಸಿದ್ದನೆಂದು ವಿಚಾರಣೆಯ ಕಾಲಕ್ಕೆ ಪುರಾವೆಗಳು ಬಯಲಾದುವು. ಕಮ್ಯೂನಿಸ್ಟ್ ಪಕ್ಷದ ಅಧಿವೇಶನ ಕೂಡಿದಾಗಲೇ ಎಲ್ಲರನ್ನು ಬಂಧಿಸಬೇಕೆಂಬುದು ಅವನ ಯೋಜನೆಯಾಗಿದ್ದಿತಂತೆ. ಸ್ಟಾಲಿನ್ನನ ಪಂಚವಾರ್ಷಿಕ ಯೋಜನೆಯನ್ನು ನಿರರ್ಥಕಗೊಳಿಸಲು ಈ ಪಕ್ಷದವರು ದುಡಿದರೆಂದೂ ನ್ಯಾಯಸ್ಥಾನದಲ್ಲಿ ಹೇಳಲಾಯಿತು. ೧೯೧೮ರಲ್ಲಿ ಲೆನಿನ್ನನ ಮೇಲೆ ಗುಂಡೆಸೆದ ಕಪ್ಲಾನಳನ್ನು ಪ್ರೇರೇಪಿಸಿದವನು ತಾನೆಂದೂ ಬುಖಾರಿನ್ ನುಡಿದನಂತೆ. ಹಿಂಸೆಗೆ ಗುರಿಯಾಗಬಹುದೆಂಬ ಭಯದಿಂದ ಬುಖಾರಿನ್ ಇದನ್ನು ಒಪ್ಪಿಕೊಂಡನೋ ಅಥವಾ ಅದರಲ್ಲಿ ನಿಜಾಂಶವಿದ್ದಿತೋ ಏನೆಂಬುದನ್ನು ಹೇಳಲಸಾಧ್ಯ. ೧೯೧೮ರಲ್ಲಿ ಬುಖಾರಿನ್ ಲೆನಿನ್ನನ ಧೋರಣವನ್ನು ವಿರೋಧಿಸಿದನೆಂಬುದೇನೊ ನಿಜ. ಜರ್ಮನರೊಡನೆ ಮಾಡಿಕೊಂಡಿದ್ದ ಬ್ರೆಸ್ಟ್ ಲಿಟೋವಸ್ಕ ಒಪ್ಪಂದವು ಅವನಿಗೆ ಸಮ್ಮತವಿರಲಿಲ್ಲ. ಅವನು ಆದರ್ಶಜೀವಿ, ಪಂಡಿತ. ಲೆನಿನ್, ಸ್ಟಾಲಿನ್ನರಿಗಿಂತಲೂ ಚೆನ್ನಾಗಿ ಮಾರ್ಕ್ಸ್ ತತ್ವವನ್ನು ಗ್ರಹಿಸಿದವನು. ಈ ಕಾರಣದಿಂದ ಪಟ್ಟಕ್ಕೆ ಬರುವ ಮಹತ್ವಾಕಾಂಕ್ಷೆಯಿದ್ದಿರಲೂ ಬಹುದು. ಆದರೆ ದುರದೃಷ್ಟಶಾಲಿ ಪ್ರಾಣ ಕಳೆದುಕೊಂಡ. ಆ ಕೂಟದಲ್ಲಿದ್ದ ರಾಡೆಕ್ ಮತ್ತು ಸೊಕಾಲ್ನಿಕೊವ್‌ರವರು ಮಾತ್ರ ಕಠಿಣ ಶಿಕ್ಷೆಗೆ ಗುರಿಯಾದರು.

## ಸೇನಾಧಿಕಾರಿಗಳ ವಿಚಾರಣೆ

ಮೇ ೧೯೩೭ ರಲ್ಲಿ ಮಾಸ್ಕೋದಲ್ಲಿ ಮತ್ತೊಂದು ಮಹತ್ವದ ವಿಚಾರಣೆ ನಡೆಯಿತು. ಈ ಬಾರಿ ನಾಲ್ಕಾರು ಸೇನಾಧಿಕಾರಿಗಳು ಆರೋಪಿಗಳು. ಮಾರ್ಶಲ್ ತುಕಾವೆಸ್ಕಿ ಮೊದಲನೆಯ ಆರೋಪಿ. ತುಕಾವೆಸ್ಕಿ ಕಳೆದ ಮಹಾಯುದ್ಧದಲ್ಲಿ ಝಾರ್ ಸೇನೆಯಲ್ಲಿ ಚಿಕ್ಕ ಅಧಿಕಾರಿಯಾಗಿದ್ದನು. ಯುದ್ಧದಲ್ಲಿ ಜರ್ಮನರಿಂದ ಸೆರೆ ಹಿಡಿಯಲ್ಪಟ್ಟು ತಪ್ಪಿಸಿಕೊಂಡ ಸಾಹಸಿ. ರಶಿಯದ ಗಡಿ ಸೇರಿದೊಡನೆಯೇ ಕ್ರಾಂತಿಕಾರರೊಡನೆ ಸೇರಿಕೊಂಡನು. ಟ್ರಾಟ್ಸ್ಕಿಯ ಕೃಪಾದೃಷ್ಟಿ ಬಿದ್ದುದರಿಂದ ಬಹು ಬೇಗನೆ ಮೇಲಕ್ಕೇರಿದನು. ಟ್ರಾಟ್ಸ್ಕಿ ಪರದೇಶವಾಸಿಯಾದ ಮೇಲೆ ತುಕಾವೆಸ್ಕಿ ಅವನೊಡನೆ ಸಂಬಂಧ ಇಟ್ಟುಕೊಂಡಿದ್ದನಂತೆ. ಎಲ್ಲ ವ್ಯವಹಾರ ಬಹಳ ಗುಪ್ತವಾಗಿ ನಡೆಯು

ತ್ತಿತ್ತು. ಆದರೆ ತುಕಾವೆಸ್ಕಿಗೆ ಮದ್ಯದ ಹುಚ್ಚು ಬಹಳ. ಅದು ತಲೆಗೇರಿ ದ್ದಾಗ ಏನೇನೋ ಒದರುತ್ತಿದ್ದನು. ಸ್ಟಾಲಿನ್ನನನ್ನು ತಳ್ಳಿಹಾಕಿ ರಾಜ್ಯ ಸೂತ್ರ ಹಿಡಿಸೆಂದು ಹೇಳುತ್ತಿದ್ದನಂತೆ. ಈ ಮಾತು ಟ್ರಾಟಸ್ಕಿಯ ವರೆಗೂ ಮುಟ್ಟಿ ಬೇಗ ಮಾಡಿದಷ್ಟು ಉಪಕಾರ ಮಹಾರಾಯ" ಎಂಬ ಉದ್ಗಾರ ತೆಗೆದನಂತೆ. ರಶಿಯನ್ ಗೂಢಚಾರರಿಗೆ ಇದರ ಸುಳಿವು ಹತ್ತಿತು. ಜರ್ಮನ್ ಸೇನಾಧಿಕಾರಿಗಳೊಳಗೆ ತುಕಾವೆಸ್ಕಿ ಒಳಸಂಚು ನಡೆಸುತ್ತಿದ್ದನೆಂದೂ ವಿಚಾರಣೆಯ ಕಾಲದಲ್ಲಿ ಸಾಕ್ಷಿ ಕೊಡಲಾಯಿತು. ಈ ನಾಲ್ಕಾರು ಸೇನಾಧಿಕಾರಿಗಳೂ ತಮ್ಮ ಪಾಪಕ್ಕೆ ಪ್ರಾಯಶ್ಚಿತ್ತವನ್ನನುಭವಿಸಿದರು. ಇತ್ತೀಚೆಗೆ ಮಾರ್ಶಲ್ ಬ್ಲೂಚರನ ಹೆಸರೂ ಕೇಳಿಬರುವದಿಲ್ಲ. ಬ್ಲೂಚರ್ ಪೂರ್ವ ರಶಿಯದ (ಸೈಬೇರಿಯದ) ಸೇನಾಧಿಕಾರಿಯಾಗಿದ್ದ. ಜನ್ಮತಃ ಜರ್ಮನ್. ಸೋವಿಯೆಟ್ ಯೂನಿಯನದಲ್ಲಿ ಬಂದು ವಾಸಿಸಿದವನು. ಈ ಎಲ್ಲ ಸೇನಾಧಿಕಾರಿಗಳನ್ನು ಕಳೆದುಕೊಂಡ ಸೋವಿಯೆಟ್ ಸೇನೆಯ ಶಕ್ತಿ ಕುಗ್ಗಿತೆಂದು ಅನೇಕರು ಬಗೆದಿರುವರು. ಆದರೆ ನಿಜವಾಗಿ ನೋಡಿದರೆ ದ್ರೋಹಿಗಳನ್ನು ಹೊರಗಟ್ಟಿದುದರಿಂದ ರಶಿಯದ ಸೇನೆಯ ಬಲ ಹೆಚ್ಚಿತೆಂದು ಹೇಳಬಹುದಾಗಿಯಿಲ್ಲ.

**ಯಾಗೋಡಾನ ಕಥೆ**

ಮಾಸ್ಕೊ ಹತ್ಯಾಕಾಂಡದಲ್ಲಿ ಯಾಗೋಡನ ಕಥೆಗೆ ಒಂದು ಶ್ರೇಷ್ಠ ಸ್ಥಾನವುಂಟು. ಯಾಗೋಡಾ ರಶಿಯದ ಓಗ್‌ಪು ಗೂಢಚಾರ ದಳದ ಮುಖ್ಯಾಧಿಕಾರಿ. ಸ್ಟಾಲಿನ್ನನಿಗೆ ಪ್ರಿಯನಾದ ಮನುಷ್ಯ. ಮಿತ್ರ ಸ್ಟಾಲಿನ್ನನ ಆಜ್ಞೆಯನ್ನು ಶಿರಸಾ ಪಾಲಿಸುತ್ತಿದ್ದನು. ಹೀಗಿರುವಾಗ ಅವನ ಬಂಧನ ಮತ್ತು ಅಂತ್ಯವು ಸೋಜಿಗವೂ ಮತ್ತು ಅದ್ಭುತವೂ ಆಗಿದೆ. ತನ್ನ ಕೈಕೆಳಗಿದ್ದ ಯೆಜೋವ್‌ನನ್ನು ರಸಾಯನಗಳ ಪ್ರಯೋಗದಿಂದ ಕೊಲೆ ಮಾಡಲು ಯಾಗೋಡನು ಯುತ್ನಿಸಿದನು. ವಿಷ ಬೆರೆತ ರಸಾಯನವನ್ನು ಯೆಜೋವ್‌ನ ಕೋಣೆಯಲ್ಲಿ ಚಿಮುಕಿಸಲು ಇವನು ಆಜ್ಞಾಪಿಸಿದನೆಂದು ಬುಲಾನೊವ್ ಸಾಕ್ಷಿ ಕೊಟ್ಟ. ಯಾಗೊಡಾನು ಮೊದಲು ಔಷಧದ ಅಂಗಡಿಗಳ ವ್ಯಾಪಾರಿಯಾಗಿದ್ದವ. ರಸಾಯನಗಳ ಬಗ್ಗೆ ಅವನಿಗೆ ವಿಶೇಷ ಪರಿಜ್ಞಾನವಿದ್ದಿತು. ಮನೆ ಝಡತಿ ನಡೆಸಿದ್ದಾಗ ಅನೇಕ ರಸಾಯನಗಳೂ ವಿಷವಸ್ತು

ಗಳೂ ದೊರೆತವು. ಇವುಗಳಲ್ಲಿ ಹೆಚ್ಚಿನವು ವಿದೇಶಗಳಲ್ಲಿ ತಯಾರಿಸಲ್ಪಟ್ಟವು. ವಿದೇಶಿಯರೊಡನೆ ಯಾಗೋಡನ ಒಳಸಂಚಿದೆಯೆಂದು ಆಗ ರಹಸ್ಯ ಹೊರ ಬಿತ್ತು. ಆಮೇಲೆ ಅವನ ಒಂದೊಂದೇ ಪಾಪಕೃತ್ಯಗಳು ಬೆಳಕಿಗೆ ಬಂದುವು. ಗೂಢಚಾರ ದಳದ ಅಧಿಪತಿಯಾಗುವ ಕಾಂಕ್ಷೆಯಿಂದ ಮೇಲಧಿಕಾರಿ ಮೆನ ಝಿನಸ್ಕಿಗೆ ವಿಷಪ್ರಯೋಗಿಸಿದ್ದನಂತೆ. ಸ್ಟಾಲಿನ್ನನನ್ನು ಇದೇ ರೀತಿ ಕೊಲ್ಲಲು ಯುಕ್ತಿ ಸುತ್ತಿದ್ದನಂತೆ. ಅವನ ಅನ್ನಪಾನಗಳಲ್ಲಿ ಆಗಾಗ ಅಲ್ಪಾಂಶದಲ್ಲಿ ಯಾವುದೋ ಒಂದು ವಿಷ ಬೆರೆಸುತ್ತಿದ್ದನಂತೆ. ಸ್ಟಾಲಿನ್ನನಿಗೆಂದು ಹಾಕಿದ್ದ ಮಿಷ್ಟಾನ್ನವನ್ನು ಭುಂಜಿಸಿ ಅವನ ಎರಡನೇ ಹೆಂಡತಿ ನಾದಿಯಾ ಮರಣ ಗೊಂಡಳೆಂದು ಪ್ರತೀತಿಯಿದೆ. ನಾದಿಯಾ ಅನ್ನಪಾನಗಳ ಸವಿ ನೋಡಿಯೇ ಗಂಡನಿಗೆ ಉಣಬಡಿಸುತ್ತಿದ್ದಳು. ಈ ರೀತಿ ಮಾಡಿದಾಗಲೇ ಮಿಷ್ಟಾನ್ನ ಉಂಡು ಹಾಸಿಗೆ ಹಿಡಿದಳು. ಇದರಂತೆ ಇನ್ನೂ ಅನೇಕ ರಾಜಕೀಯ ವಿರೋಧಿಗಳನ್ನು ಕೊಲೆ ಮಾಡಿದ ಅವನ ದುಷ್ಕೃತಿಗಳು ವಿಚಾರಣೆಯ ಕಾಲಕ್ಕೆ ತಿಳಿದುವು. ಇಂತಹ ದ್ರೋಹಿಗೆ ಯಾವ ದೇಶದಲ್ಲೂ ಮರಣ ಶಿಕ್ಷೆ ದೊರೆಯದೆ ಇರಲಾರದು.

### ಓಗ್‌ಪು

ದೇಶದ್ರೋಹಿಗಳ ಬೇಟೆಯಲ್ಲಿ ಸ್ಟಾಲಿನ್ನನಿಗೆ ಅಪಾರ ಉಪಕಾರವು ಆದುದು ರಶಿಯದ ಓಗ್‌ಪು ಜನರಿಂದ. ಓಗ್‌ಪು ರಶಿಯದ ಗೂಢಚಾರ ದಳ. ಜರ್ಮನಿಯಲ್ಲಿ ಗೆಸ್ಟಾಪೋ ಇದ್ದ ಹಾಗೆ. ಇದಕ್ಕೆ ಜಿ. ಪಿ. ಯು. ಎಂಬ ಇನ್ನೊಂದು ಹೆಸರೂ ಉಂಟು. ಓಗಪು ಅಥವಾ ಜಿ. ಪಿ ಯು ಇವು ಸಂಕೇತಾಕ್ಷರಗಳು. ರಶಿಯದ ಗುಪ್ತ ರಾಜಕೀಯ ಪೋಲೀಸರೆಂದು ಅದರ ಅರ್ಥ. ಮಹಾಕ್ರಾಂತಿಯು ಯಶಸ್ವಿಯಾದೊಡನೆಯೇ ೧೯೧೭ ರಲ್ಲಿ ಈ ಗೂಢಚಾರ ದಳವನ್ನು ಸಂಘಟಿಸಿದ್ದರು ಪ್ರತಿಕ್ರಾಂತಿಯ ಜನರನ್ನು ಕಂಡುಹಿಡಿಯುವದೇ ಆದರ ಗೊತ್ತು ಗುರಿಯಾಗಿತ್ತು. ಆಗ ಅದಕ್ಕೆ ಚೆಕಾ ಎಂಬ ಹೆಸರನ್ನಿಟ್ಟಿದ್ದರು. ಸ್ಟಾಲಿನ್ ಅಧಿಕಾರಕ್ಕೆ ಬಂದ ಮೇಲೆ ಹೆಸರಿನಲ್ಲಿ ಬದಲಾವಣೆಯಾಯಿತು. ಓಗ್‌ಪು ವಿರಾಟಸ್ವರೂಪಿಯಾದ ಸಂಸ್ಥೆ. ನಗಳಿನಂತೆ ಅದಕ್ಕೆ ನೂರಾರು ಕೈಕಾಲು, ಕಿವಿ ಕಣ್ಣುಗಳು. ರಶಿಯದಲ್ಲಿ ಮಾತ್ರವಲ್ಲವಿದೇಶಗಳಲ್ಲಿಯೂ ಅದು ವ್ಯಾಪಿಸಿರುವುದು. ಇದರ ಅಧೀನದಲ್ಲಿ ಪ್ರತ್ಯೇಕ ಪೋಲೀಸ,

ಟ್ಯಾಂಕು ಮತ್ತು ವಿಮಾನ ದಳಗಳೇ ಇವೆ. ಆಂತರಿಕ ಹಾಗು ಬಾಹ್ಯ ಗಂಡಾಂತರಗಳನ್ನು ಕಂಡು ಹಿಡಿದು ಅದನ್ನು ನಿವಾರಿಸಿ ದೇಶ ರಕ್ಷಣೆ ಮಾಡುವುದು ಅದರ ಪರಮ ಕರ್ತವ್ಯ. ರಾಜಕೀಯ ವಿರೋಧಿಗಳನ್ನು ನಿರ್ಮೂಲಗೊಳಿಸಲು ಸ್ಟಾಲಿನ್ ಅದನ್ನು ಉಪಯೋಗಿಸಿಕೊಂಡಿರುವನೆಂದು ಹೇಳಲಾಗಿದೆ.

ಕಾಮೆನೋವ್, ಜಿನೊವಿಲ್' ಬುಖಾರಿನ್ ಮೊದಲಾದವರಿಗೆ ಬಂದೊದಗಿದ ಗತಿ ನಿಜವಾಗಿಯೂ ವಿಲಕ್ಷಣವಾದುದು. ಇವರೆಲ್ಲ ಹೆಸರಾದ ಕ್ರಾಂತಿಕಾರರು. ರಶಿಯದ ಹಿರಿ ಮುತ್ಸದ್ದಿಗಳು. ಲೆನಿನ್ನನ ಛತ್ರ ಚಾಮರ-ದಡಿ ಬೆಳೆದವರು. ಯಾರು ರಾಷ್ಟ್ರದ ಅಸ್ತಿತ್ವಕ್ಕೆ ಕಾರಣರಾದರೋ ಅವರೇ ಕೊನೆಗೆ ತಲೆ ಕಳೆದುಕೊಂಡರು. ಅದೂ ಯಾರಿಂದ? ಪರಕೀಯರಿಂದಲೇ? ಪರಮಂಡಲದ ನಾಯಕರಿಂದಲೇ? ಅಲ್ಲ. ತಮ್ಮ ಒಡನಾಡಿ, ಬಂಧು, ಮಿತ್ರನಿಂದ. ತಮ್ಮ ಅಣ್ಣಂದಿರನ್ನು ಕಡಿದು ಕೊಂದ ಹಾಗೆಯೇ ಸರಿ. ಇದರಿಂದ ಬಾಹ್ಯ ಜಗತ್ತು ಮೋರೆ ಗಂಟಿಕ್ಕಿಕೊಂಡಿದೆ. ಸ್ಟಾಲಿನ್ನನ ಹೆಸರಿಗೆ ಕಳಂಕ ಹಚ್ಚಲು ಯತ್ನಿಸಿದೆ. ಆದರೆ ನಿಜವಾಗಿ ನೋಡಿದರೆ ಆ ನಾಯಕರೇ ತಮ್ಮ ಕಾಲುಗಳ ಮೇಲೆ ಕಲ್ಲೆಸೆದುಕೊಂಡರೆಂದು ಹೇಳಬಹುದು. ಅವರ ಗುಣ ಸ್ವಭಾವಗಳಲ್ಲಿದ್ದ ಆಭಾಸವೇ ಕ್ರಮೇಣ ಅವರನ್ನು ಸಾವಿನ ದವಡೆಗೆ ಎಳೆಯಿತು. ಕ್ರಾಂತಿಯ ಕಾಲದಲ್ಲಿ ಕಾಮೆನೊವ್', ಜಿನೊವಿಲ್ ಟ್ರಾಟಸ್ಕಿ, ಬುಖಾರಿನ್ ಮೊದಲಾದವರು ಮಹಾಜನರ ಆಶೆ ಆಕಾಂಕ್ಷೆಯ ದ್ಯೋತಕವಾಗಿದ್ದರು. ಆದರೆ ಶಾಂತಿಯ ಕಾಲದಲ್ಲಿ ಅವರಿಗೂ ಜನತೆಗೂ ಇದ್ದ ನಿಕಟ ಸಂಬಂಧದ ಎಳೆ ಹರಿಯಿತು. ನವ ಜನಾಂಗದ ರಸ ರುಚಿ ಭಿನ್ನ. ಆಶೆ ಆಕಾಂಕ್ಷೆಗಳೂ ಹೊಸವು. ಹಳೇ ಪುರಾಣ ಕಟ್ಟು ಕಥೆಗಳು ಅವರಿಗೆ ರುಚಿಸವು. ವಿಜ್ಞಾನ ವ್ಯವಹಾರದ ಒರೆಗಲ್ಲಿಗೆ ಹಚ್ಚಿ ನೋಡುವವರೇ ಬಹಳ ಮಂದಿ. ಹಳೇ ಮುಖಂಡತ್ವವು ಹೊಸ ಕಾಲಮಾನ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡು ಹೋಗದೆ ಇದ್ದರೆ ದಡಕ್ಕೊಗೆದ ಮೀನಿನಂತೆ ಅದರ ಪಾಡಾಗುವುದು ಸಹಜವೇ. ಟ್ರಾಟಸ್ಕಿ, ಕಾಮೆನೊವ್', ಜಿನೊವಿಲ್' ಮೊದಲಾದವರ ಕರುಣ ಕಥೆಯಾದರೂ ಅಷ್ಟೆ. ದುರದೃಷ್ಟದಿಂದ ಈ ದುಃಖಾಂತ ನಾಟಕಕ್ಕೆ ಇನ್ನೂ ಒಂದೆರಡು ಅಂಕಗಳಿವೆ. ಕಾಲು

ಜಾರಿದ ಈ ನಾಯಕರು ರಾಜಕೀಯ ವಿರೋಧಿಯನ್ನು ಕೊನೆಗಾಣಿಸಲು ವಿದೇಶಿ ಜನರ ಕೈಗೊಂಬೆಗಳಾದರು. ದೇಶಕ್ಕೆ ತಿಳಿದೋ ತಿಳಿಯದೆಯೋ ದ್ರೋಹ ಬಗೆದರು. ಈ ಒಳಸಂಚು ಅವರು ತಾವಾಗಿ ಬರೆದ ಮೃತ್ಯು-ಪತ್ರವೇ ಸೈ. ಹಳಸಿದ ಈ ಹಳೇ ಮುಖಂಡತ್ವದಿಂದ ದೇಶಕ್ಕೆ ಉಪಕಾರ ವಾಗುವ ಬದಲು ಅಡ್ಡಿ, ಆತಂಕ, ಅಪಕಾರವಾಗಿ ಪರಿಣಮಿಸಿದಾಗ ಅವರ ಅವಸಾನವಾಯಿತು.



## ಸ್ಟಾಲಿನ್ನನ ರಾಜನೀತಿ

ಚದುರಂಗವು ರಶಿಯನರಿಗೆ ಬಹಳ ಪ್ರಿಯವಾದ ಆಟ. ಇದನ್ನು ಸ್ಟಾಲಿನ್ನನೂ ಬಲ್ಲ. ಬಾಲ್ಯದಲ್ಲಿ ಅಭ್ಯಸಿಸಿದನೇ ಅಥವಾ ಸೆರೆಮನೆಯಲ್ಲಿಯೇ ಎಂಬುದನ್ನು ಹೇಳುವುದು ಕಷ್ಟ. ಅಂತೂ ಸಾಕಷ್ಟು ಪ್ರಾವೀಣ್ಯತೆಯುಂಟು. ಸೋವಿಯೆಟ್ ಯೂನಿಯನ್ನದ ಸರ್ವಾಧಿಕಾರಿಯಾದ ಮೇಲೂ ಅವನು ಈ ಸೊಗಸಾದ ಆಟವನ್ನು ಮರೆತು ಬಿಡಲಿಲ್ಲ. ಆದರೆ ಅಂದಿನಿಂದ ಅವನ ರಂಗ-ಸ್ಥಳವು ಮಾತ್ರ ಬದಲಾಯಿತು. ಈಗ ಸ್ಟಾಲಿನ್ನನು ಆಡಬೇಕಾಗಿರುವುದು ರಾಜಕೀಯರಂಗದಲ್ಲಿ—ರಾಜಕಾರಣಿಯಾಗಿ. ಇಷ್ಟರವರೆಗೆ ಮರದಿಂದ ಕೊರೆದ ಆನೆ, ಕುದುರೆ, ರಥಗಳು ಅವನನ್ನು ಇದಿರಿಸಿದ್ದವು. ಈಗ ಹಾಗಲ್ಲ. ಜೀವಂತ ದಳಗಳೇ ಅವನ ಮುಂದೆ ನಿಂತಿವೆ. ನವನವ ಅತಿರಥರು, ಮಹಾ ರಥರು, ರಣೋತ್ಸಾಹದಿಂದ ಕುಣಿಯುತ್ತಿದ್ದಾರೆ. ‘ ವಿದ್ಯಾಬುದ್ಧಿಯಿಲ್ಲದ ಪೊಳ್ಳು ಜೀವ. ಈ ಬರಟು ಮನುಷ್ಯನಿಗೆ ರಾಜಕಾರಣದ ಗಂಧಗಾಳಿ ಯೇನು ಗೊತ್ತು ! ’ ಎಂದು ಲೋಕವೆಲ್ಲ ಅವನಿಗಷ್ಟು ಮಹತ್ವವನ್ನು ಕೊಡಲಿಲ್ಲ. ಆದರೆ ಕಳೆದ ೨೫ ವರುಷಗಳಲ್ಲಿ ಸ್ಟಾಲಿನ್ ಎಲ್ಲರ ಕಣ್ಣಿಗೂ ಮಣ್ಣೆರಚಿರುವನು. ರಾಜಕಾರಣದಲ್ಲಿ ಅವನ ಕೈ ಎಲ್ಲರನ್ನು ಮೀರಿಸಿದೆ. ಈ ಮೊದಲು ಅಸ್ಪೃಶ್ಯನೆಂದು ಬಹಿಷ್ಕರಿಸಿದವರು ಈಗ ತಬ್ಬಿಕೊಳ್ಳಲು ಹಾತೊರೆಯುತ್ತಿರುವರು. ತಿರಸ್ಕರಿಸಿದವರು ಮುಕ್ತಕಂಠದಿಂದ ಹೊಗಳು

ತ್ತಿದ್ದಾರೆ. ಕೆಣಕಿದವರು ಕಣ್ಣೀರು ಸುರಿಸುತ್ತಿರುವರು. ರಾಜನೀತಿಯಲ್ಲಿ ಅವನು ಚಾಣಕ್ಯ.

**ರಪಲ್ಲೋ ಸಂಧಾನ**

ರಶಿಯದಲ್ಲಿ ಬಾಲ್ಶೆವಿಕರ ಕೈ ಮೇಲಾದೊಡನೆ ಬಂಡವಲು ಜಗತ್ತಿಗೆ ವಜ್ರಾಘಾತವಾಯಿತು ಬಂಡವಲು-ಸಮೃದ್ಧಿಗಳು ದ್ವೇಷಾಸೂಯೆಯಿಂದ ಕುದಿದರು. ೧೪ ರಾಷ್ಟ್ರಗಳು ದಂಡೆತ್ತಿ ಬಂದುದು ಅದಕ್ಕೆ ಸಾಕ್ಷಿಯಾಗಿದೆ. ಆದರೆ ರಶಿಯದ ಏಟಿಗೆ ಹಿಮ್ಮೆಟ್ಟಿ ಹೋದರು. ಇಷ್ಟರಿಂದ ಅವರಲ್ಲಿದ್ದ ದ್ವೇಷ ಮಾತ್ರ ಇಳಿಯಲಿಲ್ಲ. ಸೇಡು ತೀರಿಸಿಕೊಳ್ಳುವ ಬುದ್ಧಿಯಿಂದಲೋ ಏನೋ ಸೋವಿಯೆಟ್ ಯೂನಿಯನಕ್ಕೆ ಒಂದು ರೀತಿಯ ಬಹಿಷ್ಕಾರ ಹಾಕಿದರು. ವರ್ಸಾಯಿ ಒಪ್ಪಂದ, ಜನಾಂಗ ಸಂಘ ಯಾವುದಕ್ಕೂ ರಶಿಯವನ್ನು ಕರೆಯಲಿಲ್ಲ ರಶಿಯಕ್ಕೆ ಕಾಸಿನ ವಸ್ತುಗಳನ್ನು ಮಾರಾಟ ಮಾಡಲೂ ನಿರಾಕರಿಸಿದರು. ಹೆಚ್ಚು ಕಡಿಮೆ ಬಂಡವಲು-ಜಗತ್ತು ರಶಿಯದ ಮೇಲೆ ಆರ್ಥಿಕ ದಿಗ್ಬಂಧನ ಹಾಕಿತೆಂದು ಹೇಳಿದರೆ ನ್ಯಾಯವಾದ ಮಾತೇ ಸರಿ. ಈ ವ್ಯೂಹವನ್ನು ಮುರಿದೆಸೆಯುವದು ಬಾಲ್ಶೆವಿಕರ ಪ್ರಥಮ ಕರ್ತವ್ಯ. ಅದಕ್ಕಾಗಿ ಅವರು ಜಾಗತಿಕ ಕ್ರಾಂತಿಗಾಗಿ ಹಡಪಡಿಸಿದರು. ಫಿನ್‌ಲಂಡ, ಚೀಣ, ಟರ್ಕಿ, ಜರ್ಮನಿ ಮೊದಲಾದ ನೆರೆಹೊರೆಯ ದೇಶಗಳಲ್ಲಿ ಕ್ರಾಂತಿಗಾಗಿ ಯತ್ನಿಸುತ್ತಿದ್ದ ಕಮ್ಯುನಿಸ್ಟರಿಗೆ ಪ್ರೋತ್ಸಾಹವನ್ನಿತ್ತರು. ಅದೂ ಸಫಲವಾಗಲಿಲ್ಲ. ಸೋವಿಯಟ್ ಯೂನಿಯನ್ ವಿದೇಶ ನೀತಿಯನ್ನು ಬದಲಿಸಿ ನೆರೆಯವರೊಡನೆ ಸ್ನೇಹ ಯಾಚಿಸಿತು. ಜರ್ಮನಿಯೊಡನೆ ಮಾಡಿಕೊಂಡ ರಪಲ್ಲೋ ಸಂಧಾನವು (೧೯೨೨) ಅದಕ್ಕೊಂದು ಉದಾಹರಣೆಯಾಗಿದೆ. ಈ ಒಪ್ಪಂದದನ್ವಯ ಜರ್ಮನಿಯಿಂದ ರಶಿಯವು ಯಥೇಚ್ಛ ಸರಕುಗಳನ್ನು ಪಡೆಯಿತು. ಜರ್ಮನ್ ತಜ್ಞರೂ ರಶಿಯಕ್ಕೆ ಬಂದು ನೆರವಾದರು. ರಪಲ್ಲೋ ಒಡಂಬಡಿಕೆಯಿಂದ ಬಂಡವಲು-ಜಗತ್ತು ರಶಿಯದ ವಿರುದ್ಧ ಕಟ್ಟಿದ ವ್ಯೂಹವು ಮುರಿದು ಬಿತ್ತು.

**ಲೋಕಾರ್ನೊ ಒಪ್ಪಂದ**

ರಶಿಯಾ ಜರ್ಮನಿಗಳ ಈ ಸ್ನೇಹದಿಂದ ಬ್ರಿಟನ್, ಫ್ರಾನ್ಸ ಮೊದಲಾದ ದೇಶಗಳು ಗಾಬರಿಗೊಂಡವು. ಜರ್ಮನಿ ಗುರುವಿಲ್ಲದ ಮಠ. ಅನಾಯಕತ್ವ

ಪರಿಸ್ಥಿತಿಯಲ್ಲಿದೆ. ಯುದ್ಧದ ಗಾಯವಿನ್ನೂ ಮಾದಿಲ್ಲ. ವರ್ಸಾಯಿ ಶೃಂಖಲೆ, ಆರ್ಥಿಕ ಮುಗ್ಗಟ್ಟು, ದೇಶದ ವಿಭಜನೆಗಳಿಂದ ಜನ ಅಸಮಾಧಾನಗೊಂಡಿದ್ದರು. ದೇಶದಲ್ಲಿ ಕಮ್ಯುನಿಸ್ಟರ ಪ್ರಭಾವ ಹೆಚ್ಚುತ್ತಿದೆ. ರಶಿಯದ ಪ್ರೋತ್ಸಾಹದಿಂದ ಜರ್ಮನಿಯಲ್ಲಿ ಮಹಾಕ್ರಾಂತಿಯಾದರೆ? ಅಖಿಲ ಯುರೋಪೇ ಸಾಮ್ಯವಾದದ ಶಿಬಿರ ಸೇರಿದಂತಾಗುವದು. ರಶಿಯಾ-ಜರ್ಮನಿ ಸ್ನೇಹದಿಂದ ಇನ್ನೊಂದು ಬಗೆಯ ಗಂಡಾಂತರವೂ ಇರುವದು. ಜರ್ಮನಿಗೆ ರಶಿಯದ ಸಹಾಯ ಸಂಪತ್ತುಗಳು ದೊರೆತರೆ ಅದು ಚೇತರಿಸಿಕೊಂಡು ಮುಯ್ಯಿ ತೀರಿಸಿಕೊಳ್ಳಲೂ ಬಹುದು. ಈ ಭಯ ಬ್ರಿಟನ್ ಫ್ರಾನ್ಸಗಳಿಗೆ. ಆದುದರಿಂದ ರಶಿಯದ ತೋಳುಗಳಿಂದ ಜರ್ಮನಿಯನ್ನು ಸೆಳೆದುಕೊಂಡರು. ಲೋಕಾರ್ನೊ ಒಪ್ಪಂದದ (೧೯೨೫) ಅರ್ಥ ಇಷ್ಟೆ. ಜರ್ಮನಿಗೆ ಜನಾಂಗ ಸಂಘಕ್ಕೆ ಪ್ರವೇಶ ಕೊಟ್ಟರು. ಆರ್ಥಿಕ ಸಹಾಯ ನೀಡಿದರು. ಜರ್ಮನಿಯಲ್ಲಿದ್ದ ಬಂಡವಲಗಾರರಿಗೂ ಇದೇ ಬೇಕಾಗಿತ್ತು. ಬ್ರಿಟನ್ ಫ್ರಾನ್ಸಗಳ ಬೆಂಬಲದಿಂದ ಜರ್ಮನ್ ಬಂಡವಲಗಾರರ ಬಲ, ಬಾಲ ಬೆಳೆಯಿತು. ಸಾಮ್ಯವಾದೀ ಚಟುವಟಿಕೆಗಳನ್ನು ಅಪ್ಪಳಿಸಲು ಅವರು ಸಮರ್ಥರಾದರು. ಜರ್ಮನಿಯ ಬಂಡವಲು ಶಕ್ತಿ ನಾಝಿಸಂ ಎಂಬ ಹೊಸ ರೌದ್ರಾವತಾರವನ್ನೇ ಧರಿಸಿತು. ಇಟಲಿಯಲ್ಲಿ ಫ್ಯಾಸಿಝಂ ಒಕ್ಕಲಾಯಿತು. ತತ್ಪರಿಣಾಮವಾಗಿ ಇಡೀ ಯುರೋಪು ಪುನಃ ಕುದಿವ ಎಣ್ಣೆಯ ಕೊಪ್ಪರಿಗೆಯಾಗಿ ಪರಿಣಮಿಸಿತೆಂದರೆ ಅತ್ಯುಕ್ತಿಯಲ್ಲ.

## ನಾಝಿಝಂ ಮತ್ತು ಫ್ಯಾಸಿಝಂ

ನಾಝಿಝಂ ಮತ್ತು ಫ್ಯಾಸಿಝಂಗಳ ಜನ್ಮಕಥೆ ಹೀಗಿದೆ: ಜರ್ಮನಿಯಲ್ಲಿ ಕಮ್ಯುನಿಸ್ಟರು, ಸೋಶಾಲಿಸ್ಟರು ಇದ್ದಂತೆ ನ್ಯಾಶನಲ್ ಸೋಶಾಲಿಸ್ಟರೂ ಉದಯವಾದರು. ಸೋಶಾಲಿಸ್ಟರನ್ನು ಅಲ್ಲಿ ಸೋಜಿಗಳೆಂದು ಕರೆಯುತ್ತಿದ್ದರು. ಕೃಷ್ಣರಾಯ ಎಂದು ಮಗುವಿಗೆ ಹೆಸರಿದ್ದರೆ ಕಿಟ್ಟು ಎಂದು ಕರೆಯುವುದಿಲ್ಲವೇ ಹಾಗೆ! ಅದರಂತೆ ನ್ಯಾಶನಲ್-ಸೋಶಾಲಿಸ್ಟ ಶಬ್ದದ ಸಂಕೇತಾಕ್ಷರಗಳು ನಾಜಿ-ಸೋಜಿ ಎಂದಾದುವು. ಕೊನೆಗೆ ಈ ಪಕ್ಷದವರು ಸೋಜಿ ಎಂಬ ಪದವನ್ನು ಕತ್ತರಿಸಿ ಒರೆ ನಾಜಿ ಶಬ್ದವನ್ನು ಒಳಕೆಗೆ ತಂದರು. ಇದರಂತೆ ಫ್ಯಾಸಿಝಂ ಶಬ್ದದ ಉತ್ಪತ್ತಿ. ಲ್ಯಾಟಿನ್

ನುಡಿಯಲ್ಲಿ 'ಫ್ಯಾಸಿಸೊ' ಎಂದರೆ ಗುಂಪು ಅಥವಾ ತಂಡ ಎಂದರ್ಥ. ಅದರಿಂದ ಫ್ಯಾಸಿಝುಂ ಜನಿಸಿದೆ. ಈ ಎರಡು ಪಕ್ಷಗಳ ಆಳಿಕೆಗಳೇ ನಾಜಿ ಮತ್ತು ಫ್ಯಾಸಿಸ್ಟ್ ರಾಜ್ಯಭಾರವಾಗಿರುವುದು. ಹಿಟ್ಲರ್ ನಾಜಿಪಕ್ಷದ ಆಚಾರ್ಯ. ಮುಸ್ಸೊಲಿನಿ ಫ್ಯಾಸಿಸ್ಟ್ ಪಕ್ಷದ ನಾಯಕ. ಅವರ ತತ್ವ ಪದ್ಧತಿಗಳು ನಾಜಿಝುಂ ಮತ್ತು ಫ್ಯಾಸಿಝುಂ ಹೆಚ್ಚುಕಡಿಮೆ ಇವೆರಡೂ ಒಂದೇ ತಾಯಿಮಕ್ಕಳು. ಬಣ್ಣದಲ್ಲಿ ಸ್ವಲ್ಪ ವ್ಯತ್ಯಾಸ ಅಷ್ಟೆ. ಬ್ರಿಟನ್, ಅಮೇರಿಕೆಗಳಂತೆ ಪಾರ್ಲಿಮೆಂಟರಿ ರಾಜ್ಯಪದ್ಧತಿಯನ್ನು ಇವರು ಮನ್ನಿಸುವುದಿಲ್ಲ. ಸರ್ವಾಧಿಕಾರತ್ವಕ್ಕೆ ಪುರಸ್ಕಾರ. ರಾಷ್ಟ್ರಕ್ಕೆ ಸರ್ವಸತ್ತೆ. ಸರಕಾರವೇ ಸರ್ವಾಂತರ್ಯಾಮಿ. ದೇಶದ ರಾಜಕೀಯ, ಆರ್ಥಿಕ, ಸಾಮಾಜಿಕ ಜನಜೀವನದ ರೀತಿ-ನೀತಿಗಳನ್ನು ರೂಪಿಸುವ ಹಕ್ಕು, ಅಧಿಕಾರ ಸರಕಾರಕ್ಕಿದೆ. ರಾಷ್ಟ್ರಕ್ಕಿದೆ ಸರ್ವಾಧಿಕಾರಿಗಳದು ವೇದವಾಕ್ಯ ಅದಕ್ಕೆ ಎಲ್ಲರೂ ತಲೆಬಾಗಬೇಕು. ಮಂತ್ರಿಗಳನ್ನು ಅಧಿಕಾರಿಗಳನ್ನು ನೇಮಿಸುವವರು ಅವರೇ. ಅವರು ಮಾಡಿದ್ದೇ ಮಾಟ. ಆಡಿದ್ದೇ ಆಟ. ಪಾರ್ಲಿಮೆಂಟ್ ಯಾವುದೂ ಇಲ್ಲ. ನಾಜಿಝುಂ ಮತ್ತು ಫ್ಯಾಸಿಝುಂ ದೇಶದ ಉತ್ಪಾದನೆಯ ಸಾಧನಗಳ ರಾಷ್ಟ್ರೀಕರಣ ತತ್ವಕ್ಕೆ ಕಡು ಹಗೆ. ವ್ಯಕ್ತಿ ಒಡೆತನಕ್ಕೆ ಅದರ ಪ್ರೋತ್ಸಾಹ. ಸ್ವಯಂನಿರ್ಣಯ ತತ್ವ, ಎಲ್ಲ ಜನಾಂಗಗಳ ಸ್ವಾತಂತ್ರ್ಯ ಇವುಗಳಿಗೆಲ್ಲ ತಿಲತರ್ಪಣ. ಉಗ್ರ ರಾಷ್ಟ್ರೀಯತ್ವ, ಸಾಮ್ರಾಜ್ಯವಾದ ಇವೇ ಅದರ ಪವಿಸೊಲ್ಲು; ಪಲ್ಲವಿ. ಪಂಡಿತ ನೆಹ್ರುಗಳೆಂದಂತೆ ನಾಣ್ಯದ ಒಂದು ಬದಿ ಸಾಮ್ರಾಜ್ಯವಾದವಾದರೆ ಇನ್ನೊಂದು ಮುಖ ನಾಜಿಝುಂ. ಇದನ್ನರಿತರೆ ನಾಜಿಝುಂ ಮತ್ತು ಫ್ಯಾಸಿಝುಂ ಬಂಡವಲು ಪದ್ಧತಿಯ ಅವಳಿ-ಜವಳಿ ಮಕ್ಕಳು. ಸರ್ವಸಾಧಾರಣವಾಗಿ ಇವೆರಡನ್ನೂ ಫ್ಯಾಸಿಝುಂ ಎಂದು ಕರೆಯುವುದು ಲೋಕರೂಢಿ.

### ಫ್ಯಾಸಿಝುಂದ ನಗ್ನಸ್ವರೂಪ

ಫ್ಯಾಸಿಝುಂ ಸಾಮ್ರಾಜ್ಯವಾದದ ಉಗ್ರಸ್ವರೂಪ. ಇದು ಗೊತ್ತಾಗಲು ಬಹಳ ಸಮಯ ಹಿಡಿಯಲಿಲ್ಲ. ಸರ್ವಾಧಿಕಾರಿಗಳು ಫ್ಯಾಸಿಝುಂದ ನಗ್ನಸ್ವರೂಪ ಪ್ರದರ್ಶಿಸಿದರು. ಜರ್ಮನ್ ಜನರ ಏಕೀಕರಣ, ಬೃಹತ್ ಜರ್ಮನಿಯ ಸ್ಥಾಪನೆ, ವಸಾಹತು, ವಸತಿಸ್ಥಳವೆಂದು ಹಿಟ್ಲರ್ ಬೊಬ್ಬೆಯೆಬ್ಬಿಸಿದನು.

ಮುಸ್ಸೊಲಿನಿ ರೋಮನ್ ಸಾಮ್ರಾಜ್ಯದ ಕನಸು ಕಂಡು, 'ಟ್ಯೂನಿಸ್, ಕೊರ್ಸಿಕಾ, ಜಿಬೂಟಿ' ಎಂದು ಆರ್ಭಟಿಸಿದನು. ಪೂರ್ವ ಏಶಿಯದಲ್ಲಿರುವ ಜಪಾನವು ಕೂಡ ಸಾಮ್ರಾಜ್ಯದಾಹದಿಂದ ಬಳಲುತಿದ್ದ ರಾಷ್ಟ್ರ. ಕೊರಿಯಾ, ಮಂಚುಕೋಗಳನ್ನು ನುಂಗಿ ನೀರು ಕುಡಿದಿದ್ದರೂ ಅದರ ಬಾಯಾರಿಕೆ ಕಡಿಮೆಯಾಗಿರಲಿಲ್ಲ. ಪೂರ್ವ ಏಶಿಯದಲ್ಲಿದ್ದ ಪಾಶ್ಚಾತ್ಯರನ್ನು ಒದ್ದು, ಓಡಿಸಿ, ತನ್ನ ಸಾಮ್ರಾಜ್ಯ ಕಟ್ಟಬೇಕೆಂದು ಅದರ ಹಿರಿಯಾಸೆ. ಈ ಫ್ಯಾಸಿಸ್ಟ ತ್ರಿರಾಷ್ಟ್ರಗಳ ಆಕ್ರಮಣಶೀಲ ನೀತಿಯಿಂದ ಜಗತ್ತು ಆಲ್ಲೋಲಕಲ್ಲೋಲವಾಯಿತು. ಜರ್ಮನಿಯ ಶಸ್ತ್ರಸಂಗ್ರಹ ನೋಡಿ ಫ್ರಾನ್ಸ ಬೆದರಿತು. ಸೋಲಿನ ಸೇಡನ್ನು ತೀರಿಸಿಕೊಳ್ಳಬಹುದೆಂಬ ಭಯ ಅದಕ್ಕೆ. ನೀರೊಳ್ಳನ ಅವತಾರದಿಂದ ಭೂಮಧ್ಯಸಮುದ್ರದ ಒಡೆತನವು ಕೈತಪ್ಪಿ ಹೋಗಬಹುದೆಂದು ಬ್ರಿಟನ್‌ದ ಕಳವಳ. ಯುರೋಪದ ಚಿಕ್ಕ ಚಿಕ್ಕ ರಾಷ್ಟ್ರಗಳೂ ನಡುಗಿದುವು. ಫ್ಯಾಸಿಸ್ಟ ಬಕಾಸುರರ ಬಾಯಿಗೆ ತಾವು ಸವಿತುತ್ತಾಗಬಹುದೆಂಬ ಅಂಜಿಕೆ ಅವುಗಳಿಗೆ. ದೊಡ್ಡವರ ಕಾಳಗದಲ್ಲಿ ತಾವು ಕಾಲಡಿ ಬಿದ್ದು ಹೋಗಬಹುದೆಂಬ ಸಂಶಯವೂ ಇದೆ. ಯುರೋಪದಲ್ಲಿ, ಏಶಿಯದಲ್ಲಿ ಅನಿಶ್ಚಿತ ಪರಿಸ್ಥಿತಿ ಉದ್ಭವಿಸಿತು. ಯುದ್ಧದ ಕಾರ್ಮೋಡಗಳು ಜಮೆಯಾದುವು. ಯುದ್ಧದ ಗಾಳಿ ಬೀಸಿತು. ಈ ಗಂಡಾಂತರವನ್ನು ನಿವಾರಿಸಲು ಬ್ರಿಟನ್, ಫ್ರಾನ್ಸ ಮೊದಲಾದ ದೇಶಗಳ ಪ್ರತಿನಿಧಿಗಳೆಲ್ಲ ಜನಾಂಗ ಸಂಘದ ಸಭೆಯಲ್ಲಿ ಚಿಂತಾಮಗ್ನರಾದರು.

**ರಶಿಯಕ್ಕೆ ಗಂಡಾಂತರ**

ಫ್ಯಾಸಿಝಂದಿಂದ ಸೋವಿಯೆಟ್ ಯೂನಿಯನ್ನಿಗೆ ವಿಶೇಷ ಪ್ರಾಣಭಯ. ರಶಿಯದ ಫಲವತ್ತಾದ ಉಕ್ರೇನಿಯಾ ಪ್ರಾಂತದ ಮೇಲೆ ಹಿಟ್ಲರನ ಕಾಕದೃಷ್ಟಿ ಬಿದ್ದಿದೆ. ಯುರೋಪಿನಲ್ಲಿ ಜರ್ಮನಿಯ ಒಡೆತನವನ್ನು ಸ್ಥಾಪಿಸಬೇಕಾದರೆ ಈ ಪ್ರಾಂತವನ್ನು ಆಕ್ರಮಿಸದೆ ಗತ್ಯಂತರವಿಲ್ಲ. ಹಿಟ್ಲರನು ಬರೆದ 'ನನ್ನ ಹೋರಾಟ' (ಮೈನ್ ಕ್ಯಾಂಫ್) ಗ್ರಂಥದಲ್ಲಿ ಅದನ್ನು ಸ್ಪಷ್ಟವಾಗಿ ಉಲ್ಲೇಖಿಸಿದ್ದಾನೆ. ಕೈಸರ್-ಜರ್ಮನಿಯು ಬ್ರಿಟನ್ ಫ್ರಾನ್ಸಗಳನ್ನು ಕೆಣಕಿ ಕೆಟ್ಟಿತು. ಜರ್ಮನಿಯು ಪೂರ್ವಕ್ಕೆ ಕಾಲು ಚಾಚಬೇಕು. ಜರ್ಮನರಿಗೆ ಬೇಕಾದ ವಸತಿ ಸ್ಥಳ ಅಲ್ಲಿದೆ ಎಂದವನು ಬರೆದಿರುವನು.

ಇದನ್ನು ಮುಚ್ಚಿಕೊಳ್ಳಲು ತಾತ್ವಿಕ ಘರ್ಷಣೆಯ ಕುಂಟು ನೆವ ತೆಗೆದು ಕಾಲು ಕೆದರಿದ. ಫ್ಯಾಸಿಝಂ ಮತ್ತು ಬಾಲ್ಶೆವಿಝಂಗಳ ನಡುವೆ ದೊಡ್ಡ ನದಿ ಹರಿಯುತ್ತಿದೆ. ಇವುಗಳ ಮಧ್ಯೆ ಸೇತುವೆ ಕಟ್ಟಲಾದೀತೇ ? ಎಂದು ಗುಡುಗಿದ. ಬಾಲ್ಶೆವಿಝಂನ್ನು ನಿರ್ಮೂಲಗೊಳಿಸಲು ಹುಟ್ಟಿಬಂದ ದೂತ ತಾನೆಂದು ಅವನ ಆಂಬೋಣ. ಅದರ ವಿರುದ್ಧ ಯುರೋಪನ್ನು ಎತ್ತಿ ಕಟ್ಟಲು ಅವನ ಸಾಹಸ. ಅದಕ್ಕಾಗಿ ಯುರೋಪಿನ ರಾಷ್ಟ್ರಗಳನ್ನು ತನ್ನ ಕಡೆ ಒಲಿಸಿ ಕೊಳ್ಳಲೂ ಹಿಟ್ಲರ್ ಯತ್ನಿಸಿದನು. ಬಾಲ್ಶೆವಿಝಂ ಯುರೋಪಿನ ಅಸ್ತಿತ್ವಕ್ಕೆ ಗಂಡಾಂತರವೆಂದ. ಯುರೋಪಿನ ರಾಷ್ಟ್ರಗಳ ಸ್ವಾತಂತ್ರ್ಯಕ್ಕೆ ಧಕ್ಕೆ ಇದೆಯೆಂದು ಬೆದರಿಸಿದ. ಪಾಶ್ಚಾತ್ಯ ನಾಗರಿಕತೆ, ಸಂಸ್ಕೃತಿಗಳಿಗೆ ಅಪಾಯವಿದೆಯೆಂದು ಬೊಟ್ಟುಮಾಡಿ ತೋರಿಸಿದನು. ಇಡೀ ಬಂಡವಲು ಜಗತ್ತನ್ನೇ ರಶಿಯದ ವಿರುದ್ಧ ನೂಕಿ ಧರ್ಮಯುದ್ಧ (crusade) ಕೈಕೊಳ್ಳಬೇಕೆಂದು ಅವನ ಹೊಂಚು; ಒಳಸಂಚು. ಎಷ್ಟೋ ರಾಷ್ಟ್ರಗಳು ಅವನ ಸವಿಮಾತಿಗೆ ಮರುಳಾದುವು. ಇಟಲಿ ಅವನ ಶಿಬಿರ ಸೇರಿತು. ಜಪಾನ್ ಬಾಂಧವ್ಯ ಬೆಳೆಸಿತು. ಫಿನ್‌ಲಂಡ್ ತಬ್ಬಿಕೊಂಡಿತು. ಪೋಲಂಡ್ ೧೯೨೧ರಲ್ಲೇ ದಂಡೆತ್ತಿ ಬಂದು ಉಕ್ರೇನಿಯದ ಸ್ವಲ್ಪ ಭಾಗವನ್ನು ಹರಿದು ತಿಂದ ದೇಶ. ಬ್ರಿಟನ್ ಮತ್ತು ಫ್ರಾನ್ಸ್‌ಗಳು ಫ್ಯಾಸಿಸ್ಟ ರಾಷ್ಟ್ರಗಳಲ್ಲದೇ ಇದ್ದರೂ ಬಂಡವಲು ದೇಶಗಳು. ಬಾಲ್ಶೆವಿಝಂನ್ನು ಅಪ್ಪಳಿಸಲು ಹಿಟ್ಲರ್ ಜರ್ಮನಿಯೊಡನೆ ಕೂಡಿಕೊಳ್ಳಬೇಕೆನ್ನುವ ಜನ ಅಲ್ಲಿದ್ದಾರೆ. ಈ ಎಲ್ಲ ಶಕ್ತಿಯು ಸಂಗಮವಾಗಿ ರಶಿಯದ ಮೇಲೆ ಹರಿದು ಬರುವ ದೊಡ್ಡ ಗಂಡಾಂತರವೆದ್ದಿತು. ಈ ಫ್ಯಾಸಿಝಂ ಮಾರಿಯನ್ನು ದೂರಪರಿಸುವ ಬಗೆ ಹೇಗೆ ? ಸ್ಟಾಲಿನ್ ಇಂತಹ ಪರಿಸ್ಥಿತಿಯಲ್ಲಿ ಜನಾಂಗ ಸಂಘಕ್ಕೆ ಕಾಲಿಟ್ಟ.

**ನಾಲ್ಕೂವರೆ ವರುಷಗಳು**

೧೯೩೪ರಿಂದ ೧೯೩೯ನೇ ಜೂನ್ ವರೆಗೆ ಎಂದರೆ ಹೆಚ್ಚುಕಡಿಮೆ ೪½ ವರುಷಗಳ ವರೆಗೆ ಸ್ಟಾಲಿನ್ ಜನಾಂಗ ಸಂಘದ ಸದಸ್ಯನಾಗಿದ್ದ. ಲಿಟ್ವಿ-ನೊವ್ ಅವನ ರಾಯಭಾರಿ. ಮಾಸ್ಕೋ-ಜಿನೆವಾ, ಜಿನೆವಾ-ಮಾಸ್ಕೋ ಸುತ್ತಾಡುವುದೇ ಅವನ ಕೆಲಸ. ಸಾಮೂಹಿಕ ಭದ್ರತೆ ಶಾಂತಿರಕ್ಷಣೆ, ಚಿಕ್ಕ ಚಿಕ್ಕ ರಾಷ್ಟ್ರಗಳ ಸ್ವಾತಂತ್ರ್ಯಗಳಿಗಾಗಿ ಲಿಟ್ವಿನೊವ್ ಸಲ್ಲಿಸಿದ ಸೇವೆ

ಅಪಾರವಾದುದು. ಮುಸ್ಸೋಲಿನಿ ಅಬಿಸೀನಿಯದ ಮೇಲೆ ದಂಡೆತ್ತಿ ಹೋದಾಗ ಇಟಲಿಯ ಮೇಲೆ ಆರ್ಥಿಕ ದಿಗ್ಬಂಧನ ಜಾರಿಮಾಡುವ ಸೂಚನೆಗೆ ಬೆಂಬಲವಿತ್ತ ರಾಷ್ಟ್ರ ರಶಿಯವೊಂದೇ. ಫ್ಯಾಸಿಸ್ಟರು ಸ್ಪೈಯಿನ್‌ನಲ್ಲಿ ಪ್ರಜಾಪ್ರಭುತ್ವ ಸರಕಾರವನ್ನು ತಳ್ಳಿಹಾಕಿ ಫ್ಯಾಸಿಸ್ಟ ಸರಕಾರವನ್ನು ಪ್ರತಿಷ್ಠಿಸಲೆತ್ನಿಸಿದಾಗಲೂ ಸ್ಟಾಲಿನನೇ ಪ್ರಜಾಪ್ರಭುತ್ವ ಪಕ್ಷಕ್ಕೆ ನೆರವಾದನು. ಆಸ್ಟ್ರೀಯದ ಆಕ್ರಮಣದಿಂದ ರಶಿಯ ಕಣ್ಣರಳಿಸಿತು. ಹಿಟ್ಲರನ ಯುದ್ಧಯಂತ್ರ ಅಂದು ಪೂರ್ವಾಭಿಮುಖವಾಗಿ ಹೊರಟಿತು. ಅದು ಎಲ್ಲಿ ನಿಲ್ಲುವುದೋ ಏನೋ? ಅದನ್ನು ತಡೆಯಲು ಸಣ್ಣ ಮತ್ತು ದೊಡ್ಡ ರಾಷ್ಟ್ರಗಳ ಪರಿಷತ್ತು ಕೂಡಿಸಬೇಕೆಂದು ಸ್ಟಾಲಿನ್ ಜನಾಂಗ ಸಂಘದ ಸಭೆಯಲ್ಲಿ ಸೂಚಿಸಿದ. ಸುಡೆಟನ್ ಪ್ರಶ್ನೆಯು ಉದ್ಭವಿಸಿದಾಗಲೂ 'ಪ್ರಜಾಸತ್ತಾ' ರಾಷ್ಟ್ರಗಳೊಡನೆ ಸಹಕರಿಸಲು ಸೋವಿಯೆಟ್ ಯೂನಿಯನ್ ತನ್ನ ಸಿದ್ಧತೆಯನ್ನು ವ್ಯಕ್ತಪಡಿಸಿತು. ಸಾಮೂಹಿಕ ಭದ್ರತೆಯ ರಕ್ಷಣೆಯ ಮಾತು ನಡೆಯುತ್ತಿದ್ದಾಗಲೇ ಜೆಕೊಸ್ಲೊವೇಕಿಯವು ಹಿಟ್ಲರನ ಕಾಲಡಿ ಬಿದ್ದು ಹೋಯಿತು. ಆಗಲೂ ಸ್ಟಾಲಿನ್ ಹತಾಶನಾಗದೆ ರುಮೇನಿಯದಲ್ಲಿ ಆರು ರಾಷ್ಟ್ರಗಳ ಸಭೆ ಕೂಡಿಸುವ ಸೂಚನೆಯನ್ನಿತ್ತ. ಪೋಲಂಡದ ಸ್ವಾತಂತ್ರ್ಯಕ್ಕೆ ಭಂಗ ಬಂದಾಗಲೂ ಬ್ರಿಟನ್ ಫ್ರಾನ್ಸ್‌ಗಳೊಡನೆ ಪರಸ್ಪರ ಸಹಾಯಕ ಒಪ್ಪಂದ ಬಯಸಿದ. ಪೋಲಂಡಿಗೆ ಮಿಲಿಟರಿ ಸಹಾಯ ನೀಡುವುದಾಗಿಯೂ ಭರವಸೆ ಕೊಟ್ಟ. ಈ ಆರ್ಥಿ ವರುಷಗಳಲ್ಲಿಯೂ ಫ್ಯಾಸಿಝಂನ್ನು ತಡೆಯಲು ಸ್ಟಾಲಿನ್ ಮಾಡಿದ ಯತ್ನವು ಐತಿಹಾಸಿಕ ಮಹತ್ವವುಳ್ಳದ್ದು. ಜನಾಂಗಗಳ ಸ್ವಾತಂತ್ರ್ಯ, ಪ್ರಜಾಸತ್ತೆಯೆಂದು ಶಂಖನಾದ ಮಾಡುತ್ತಿದ್ದ ಬ್ರಿಟನ್, ಫ್ರಾನ್ಸ್ ಮೊದಲಾದ ಪ್ರಜಾಸತ್ತಾ ರಾಷ್ಟ್ರಗಳು ಸ್ಟಾಲಿನ್ನನ ಸ್ನೇಹಹಸ್ತವನ್ನು ಸ್ವೀಕರಿಸದೇ ಇದ್ದುದು ಈ ಶತಮಾನದ ದುರಂತವೇ ಸರಿ.

## ಜುಟ್ಟಿಗೆ ಜುಟ್ಟು

ಈ ರಾಷ್ಟ್ರಗಳಲ್ಲಿ ಆಂದು ಅಧಿಕಾರದಲ್ಲಿದ್ದ ಮುತ್ಸದ್ದಿಗಳಿಗೆ ಸೋವಿಯೆಟ್ ಯೂನಿಯನ್‌ದ ಮೇಲೆ ದ್ವೇಷಾಸೂಯೆಯಿದ್ದುದೇ ಅದಕ್ಕೆ ಕಾರಣ. ಚೆಂಬರ್ಲೇನ್, ಲಾವಲ್, ಡಲೇಡಿಯರ್ ಮೊದಲಾದವರಿಗೆ ಬಾಲ್ಶೆವಿಝಂ

ದೊಡ್ಡ ಹಗೆಯಾಗಿ ಕಂಡಿತು. ಅದರ ನಾಶ ಹೇಗಾದೀತೆಂದು ಅವರು ಚಿಂತಿಸುತ್ತಿದ್ದರು. ಫ್ಯಾಸಿಝಂ ಅವತಾರವೆತ್ತಿದಾಗ ಅವರಿಗಾದ ಆನಂದಕ್ಕೆ ಪಾರವೇ ಇಲ್ಲ. ಫ್ಯಾಸಿಝಂದ ಶಕ್ತಿ ಬೆಳೆಯುವಂತೆ ಅದಕ್ಕೆ ಪ್ರೋತ್ಸಾಹ ವನ್ನು ಕೊಟ್ಟರು. ಆಸ್ಟ್ರಿಯಾ, ಸ್ಪೈಯಿನ್, ಸುಡೆಟನ್ ಭಾಗಗಳನ್ನು ಬಲಿ ಕೊಟ್ಟುದುದು ಅದನ್ನೇ ಸೂಚಿಸುತ್ತಿದೆ. ಫ್ಯಾಸಿಝಂ ಯುದ್ಧ ರಥವನ್ನು ಪೂರ್ವಾಭಿಮುಖವಾಗಿ ತಿರುಗಿಸಿಬಿಡಲು ಚೆಂಬರ್ಲೇನರು ಸಾಹಸಪಟ್ಟರು. ಮ್ಯೂನಿಕ್ ಒಪ್ಪಂದಕ್ಕೆ ಸ್ಟಾಲಿನ್ನನನ್ನು ಕರೆಯದೆ ಚತುರ್ರಾಷ್ಟ್ರಗಳು ಒಪ್ಪಂದಮಾಡಿಕೊಂಡ ಅರ್ಥ ಅದೇ ಆಗಿದೆ. ಆದರೆ ದುರದೃಷ್ಟದಿಂದ ಹಿಟ್ಲರನನ್ನು ಸಂತೈಸಲಾಗಲಿಲ್ಲ. ಫ್ಯಾಸಿಝಂ ಇಬ್ಬದಿಯುಳ್ಳ ಖಡ್ಗವಾಗಿ ಪರಿಣಮಿಸಿತು. ಅದರಿಂದ ಬ್ರಿಟಿಶ್ ಮತ್ತು ಫ್ರೆಂಚ್ ಸಾಮ್ರಾಜ್ಯ ಹಕ್ಕು ಹಿತಗಳಿಗೇ ಧಕ್ಕೆ ಬಂತು. ಇದನ್ನು ಕಂಡು ಬೆಚ್ಚಿಬಿದ್ದ ಚೆಂಬರ್ಲೇನರು ಸ್ಟಾಲಿನ್‌ನನ್ನು ಕರೆದು ಅವನ ಜುಟ್ಟನ್ನು ಹಿಟ್ಲರನ ಜುಟ್ಟಿಗೆ ಗಂಟಿಕ್ಕಲು ನೋಡಿದರು. ಪೋಲಂಡಿನ ಪ್ರಶ್ನೆಯೆದ್ದಾಗ ಆ ದೇಶದ ಸ್ವಾತಂತ್ರ್ಯ ರಕ್ಷ ಣೆಯ ಭರವಸೆ ಕೊಡಬೇಕೆಂದು ಚೆಂಬರ್ಲೇನರು ಸ್ಟಾಲಿನ್ನನಿಗೆ ಒತ್ತಾಯ ಮಾಡಿದುದು ಅದಕ್ಕೇ. ಸ್ಟಾಲಿನ್ನನ ಕಣ್ಣಿಗೆ ಮಣ್ಣೆರಚಲು ಚೆಂಬರ್ಲೇನ ರಿಂದ ಆಗಲಿಲ್ಲ.

ಯುದ್ಧದ ಬಿರುಗಾಳಿ ಬೀಸಿತು. ಜರ್ಮನಿ ಮತ್ತು ಪ್ರಜಾಸತ್ತೀಯ ರಾಷ್ಟ್ರಗಳೊಳಗೆ ಬಡಿದಾಟ ಅನಿವಾರ್ಯ. ಪೋಲಂಡ್ ಪಂಚಪಾಡಾಗಿ ಹೋಗುವುದು ಖಂಡಿತ. ಅದಕ್ಕೆ ಸಹಾಯ ನೀಡಲು ಬ್ರಿಟನ್ ಫ್ರಾನ್ಸ್ ಗಳಿಗೆ ಭೌಗೋಲಿಕ ಅನಾನುಕೂಲತೆಯಿದೆ. ಆದುದರಿಂದ ಪೋಲಂಡನ್ನು ಸೋಲಿಸಲು ಫ್ಯಾಸಿಸ್ಟರಿಗೆ ಕಷ್ಟವಾಗದು. ಫ್ಯಾಸಿಸ್ಟ್ ಸೇನೆ ರಶಿಯದ ಗಡಿ ಸೇರುವುದು. ಆದರೆ ಆ ಯುದ್ಧ ರಥ ಅಲ್ಲೇ ನಿಲ್ಲುವುದೆಂದೇನು? ಉಕ್ರೇನಿಯವನ್ನು ಆಕ್ರಮಿಸಲು ಬಂದರೇನು ಗತಿ? ಫ್ಯಾಸಿಸ್ಟರ ಬಲ ಅದ್ಭುತ. ಆಸ್ಟ್ರಿಯಾ, ಜೆಕೊಸ್ಲೊವಾಕಿಯಾ ಮೊದಲಾದ ಕೊಬ್ಬಿದ ಕುರಿ ಮರಿಗಳನ್ನು ತಿಂದು ಅದರ ಶಕ್ತಿಯೂ ಬೆಳೆದಿದೆ. ಆ್ಯಂಟಿಕಮಿಂಟರ್ನ ಒಪ್ಪಂದದನ್ವಯ ಜಪಾನ್ ಕೂಡಾ ಬೆನ್ನಮೇಲೆ ತಿವಿಯುವ ಸಂಭವವಿದೆ. ಕಾಲಕ್ರಮೇಣ ಇನ್ನಿತರ ಬಂಡವಲು ರಾಷ್ಟ್ರಗಳ ಧೋರಣವೂ ಬದಲಾಗ

ಬಹುದು. ಸ್ಟಾಲಿನ್ ಗತ ಘಟನೆಗಳನ್ನು ಮರೆತಿಲ್ಲ. ಸ್ಪೇಯಿನ್, ಮ್ಯೂನಿಕ್ ಗಳ ಚಿತ್ರಗಳು ಅವನ ಕಣ್ಣ ಮುಂದೆ ಹಾಯ್ದು ಹೋದುವು. ಈಗ ಜೂಜಿನಲ್ಲಿ ಪಣಕಟ್ಟುವ ಸಂದರ್ಭ ಅವನದು. ಬಂಡವಲು ರಾಷ್ಟ್ರಗಳ ಬುಟ್ಟಿಗೇ ಗಂಟಿಕ್ಕುವ ಯೋಗ ಅವನದು. ಜರ್ಮನಿಯೊಡನೆ ಅನಾಕ್ರಮಣ ಒಪ್ಪಂದ ಮಾಡಿಕೊಂಡು ಫ್ಯಾಸಿಸ್ಟ್ ಯುದ್ಧಯಂತ್ರವನ್ನು ಪಶ್ಚಿಮ ಯುರೋಪಿನ ಕಡೆ ಸ್ಟಾಲಿನ್ ತಿರುಗಿಸಿಬಿಟ್ಟ.

—

## ಸಂಧಾನದಿಂದ ಸಂಗ್ರಾಮದ ವರೆಗೆ

ರಾಜಕಾರಣವೊಂದು ಒಗಟು. ಅದರ ನೆಲೆ ಬೆಲೆ ಎಲ್ಲರ ಕೈಗೂ ಸಿಲುಕದು. ಸತಿ ಬೆಯಾಂಗರು ಹೇಳಿದಂತೆ ಅದು ಪ್ರಣಯಕ್ಕೆ ಸಮಾನ. ರಾಜಕೀಯ ರಂಗದಲ್ಲಿ ಎಲ್ಲವೂ ಅನಿಶ್ಚಿತ. ರಶಿಯಾ-ಜರ್ಮನಿ ಅನಾಕ್ರಮಣ ಒಪ್ಪಂದವು ಅದಕ್ಕೆದೇದೀಪ್ಯಮಾನವಾದ ಒಂದು ಉದಾಹರಣೆ. ಸ್ಟಾಲಿನ್, ಫ್ಯಾಸಿಜಂದ ಶಿಬಿರ ಸೇರಿದನೆಂದು ಕೆಲವರು, ಫ್ಯಾಸಿಜಂದ ಬೆಳವಣಿಗೆಗೆ ಪ್ರೋತ್ಸಾಹವನ್ನಿತ್ತನೆಂದು ಇನ್ನಿತರರು ಹಳಿಯತೊಡಗಿದರು. ಆದರೆ ವಸ್ತುಸ್ಥಿತಿ ಬೇರೆಯೇ. ರಶಿಯಾ-ಜರ್ಮನಿ ಸಂಧಾನವು ಸ್ಟಾಲಿನ್‌ನು ಬರೆದ ಫ್ಯಾಸಿಜಂದ ಮೃತ್ಯುಪತ್ರ.

### ಮೊದಲನೆಯ ಏಟು

ಪೋಲಂಡಿನಲ್ಲಿ ಆ ರಹಸ್ಯ ಬಯಲಾಗುತ್ತಿದೆ. ಜರ್ಮನ್ ಸೈನಿಕರು, ಅಸಂಖ್ಯ ಕಾಲ್ದಳ, ವಿಮಾನ, ಟ್ಯಾಂಕುಪಡೆಗಳೊಂದಿಗೆ ನುಗ್ಗಿದರು. ಅಂಗೈ ಅಗಲದ ರಾಜ್ಯ ಪೋಲಂಡ್. ದೈತ್ಯಬಾಹುವಾದ ಜರ್ಮನಿಯನ್ನು ಪ್ರತಿ-ಭಟಿಸಿ ದಕ್ಕಿಸಿಕೊಳ್ಳುವುದುಂಟೇ ? ಆಗದ ಮಾತು. ಅಖಿಲ ಪೋಲಂಡ್ ಹಿಟ್ಲರನ ಕೈವಶವಾಗುವ ಕಾಲ ಬಂತು. ಸ್ಟಾಲಿನ್ ನಕ್ಷೆ ತೆಗೆದು ನೋಡಿದ. ಪೋಲಂಡಿನ ಪೂರ್ವಭಾಗವು ಅವನಿಗೆ ಸೇರಿದ ಭೂಮಿ. ಬಿಳಿ ರಶಿಯನರೂ ಉಕ್ರೇನಿಯನರೂ ಅವನ ಪ್ರಜೆಗಳು. ೧೯೨೧ರಲ್ಲಿ ಪಿಲ್‌ಸುಡ್‌ಸ್ಕಿ ಬಲಾತ್ಕಾರದಿಂದ ಆಕ್ರಮಿಸಿದ ಪ್ರದೇಶವದು. ಬಂಗಾರ

ದಂತಹ ಭೂಮಿ. ಅದನ್ನು ಬಿಟ್ಟುಕೊಡಲು ಸ್ಟಾಲಿನ್ನನಿಗೆ ಮನಸಿಲ್ಲ. ಆದುದರಿಂದ ಪೋಲಿಶ್ ಸರಕಾರವು ಪಲಾಯನವ್ರತ ಕೈಕೊಂಡೊಡನೆಯೇ ಅವನೂ ದಂಡೆತ್ತಿ ಹೋದನು. ಹನಿ ರಕ್ತ ಸುರಿಸದೆ ಅವನ ರಾಜ್ಯ ಅವನಿಗೆ ದೊರೆಯಿತು. ಫ್ಯಾಸಿಜಂ ಯುದ್ಧರಥ ಪೋಲಂಡಿನ ಮಧ್ಯಭಾಗದಲ್ಲಿ ತಡೆಯಲ್ಪಟ್ಟಿತು. ಇದು ಫ್ಯಾಸಿಜಂಕ್ಕೆ ಸ್ಟಾಲಿನ್ ಕೊಟ್ಟ ಮೊದಲನೆಯ ಏಟು.

**ಸ್ಟಾಲಿನ್‌ನ ದೂರದೃಷ್ಟಿ**

ಸ್ಟಾಲಿನ್ ಕೈಕೊಂಡ ಈ ಕೆಲಸದಿಂದ ಅವನಿಗೆ ಸುಖವೇನೂ ಸಿಗಲಿಲ್ಲ. ದೂರದಲ್ಲಿ ಹೋಗುತ್ತಿದ್ದ ಮಾರಿಯನ್ನು ಹತ್ತಿರ ಸೆಳೆದುಕೊಂಡ, ಅಷ್ಟೆ. ಹಿಟ್ಲರ್ ರಶಿಯದ ಗಡಿಯಲ್ಲಿ ಡೇರೆ ಹೊಡೆದ. ಇದರಿಂದ ಸ್ಟಾಲಿನ್‌ನಿಗೆ ತಲೆನೋವುಂಟಾಯಿತು. ವರ್ಸಾಯ್ ಒಪ್ಪಂದದ ಲೋಪ-ದೋಷಗಳೇನೇ ಇರಲಿ, ರಶಿಯಾ-ಜರ್ಮನಿಗಳ ಮಧ್ಯೆ ಜೆಕೊಸ್ಲೊವಾಕಿಯಾ, ಪೋಲಂಡ್ ಮೊದಲಾದ ರಾಷ್ಟ್ರಗಳು ತಲೆಯೆತ್ತಿದುದರಿಂದ (Buffer states) ರಶಿಯವು ಸ್ವಲ್ಪ ಭದ್ರವಾಗಿತ್ತು. ಜರ್ಮನಿಯ ವಿಸ್ತರಣೆಗೆ ಇವು ಅಡೆತಡೆಗಳಾಗಿದ್ದುವು. ಈಗ ಆ ಮಧ್ಯ ರಾಷ್ಟ್ರಗಳೇ ಮಾಯವಾಗಿವೆ. ಹಿಟ್ಲರನ ದಾರಿ ಸುಗಮವಾಗಿದೆ.

ಹಿಟ್ಲರ್ ಅನಾಕ್ರಮಣ ಒಪ್ಪಂದಮಾಡಿಕೊಂಡಿರುವನೇನೋ ನಿಜ. ಈ ಮೊದಲು ಅವನು ಎಷ್ಟು ರಾಷ್ಟ್ರಗಳೊಡನೆ ಅಂಥ ಒಪ್ಪಂದ ಮಾಡಿಕೊಂಡಿಲ್ಲ' ಸಂದರ್ಭ ಬಂದಾಗ ಅವನೇ ಅದನ್ನು ಹರಿದೊಗೆದಿರುವನು. ಈ ಒಪ್ಪಂದದ ಬೆಲೆಯೂ ಅಷ್ಟೆ. ಹಿಟ್ಲರ್ ಕೊಡುವ ಮಹತ್ವವೂ ಅಷ್ಟೆ. ಅದು ಅವನ ಅನುಕೂಲಸಿಂಧುಪತ್ರ. ಬ್ರಿಟನ್, ಫ್ರಾನ್ಸಗಳೊಡನೆ ಸಂಗ್ರಾಮ ನಿಶ್ಚಯವೆಂದು ಹಿಟ್ಲರನಿಗೆ ಮನದಟ್ಟಾಯಿತು. ಅದೇ ಕಾಲದಲ್ಲಿ ಸ್ಟಾಲಿನ್ನನೂ ರಣರಂಗಕ್ಕೆ ಇಳಿದರೆ ಕಠಿಣ. ಆ ವರೆಗೆ ಸ್ಟಾಲಿನ್ನನನ್ನು ಸಂತೈಸಿದಂತೆ ಮಾಡಿ, ದೂರವಿರಿಸುವ ಯತ್ನ ಹಿಟ್ಲರನದು. ಆದುದರಿಂದ ಅವನು ಈ ಒಪ್ಪಂದ ಮಾಡಿಕೊಂಡಿದ್ದಾನೆ

ಪ್ರಾಯಶಃ ಬ್ರಿಟನ್, ಫ್ರಾನ್ಸ್‌ಗಳ ಆಟ ಮುಗಿಸಿ, ರಶಿಯದ ಗೋಣು ಹಿಚುಕಬೇಕೆಂದು ಹಿಟ್ಲರನ ವಿಚಾರವಿದ್ದಿರಬೇಕು. ಕಳ್ಳನ ಗುಟ್ಟು ಕಳ್ಳನೇ ಬಲ್ಲ. ಹಿಟ್ಲರನ ಅಂತರ್ಯವೆಲ್ಲವನ್ನು ಸ್ಟಾಲಿನ್ ಬಲ್ಲ. ಬ್ರಿಟನ್-ಫ್ರಾನ್ಸ್

ಗಳೊಡನೆ ನಡೆದಿರುವ ಯುದ್ಧದಲ್ಲಿ ಹಿಟ್ಲರ್ ಗೆದ್ದರೂ ರಶಿಯಕ್ಕೆ ವಿಪತ್ತಿದೆ. ಗೆದ್ದರೆ, ಜರ್ಮನಿ ಅತಿ ಬಲಾಢ್ಯ ರಾಷ್ಟ್ರವಾಗುವದು. ಬಾಲ್ಶೆವಿಸಂ ನಿರ್ಮೂಲಕ್ಕಾಗಿ ಹಿಟ್ಲರ್ ತವಕಪಡದೇ ಇರಲಾರ. ಸೋತರೂ ಸಂಕಟ ವಿದೆ. ರಶಿಯದ ಹೊಲ ನೆಲ ಶಕ್ತಿಸಂಪತ್ತುಗಳ ಸದುಪಯೋಗ ಮಾಡಿಕೊಂಡು ಮತ್ತೆ ಬ್ರಿಟನ್-ಫ್ರಾನ್ಸ್‌ಗಳಿಗೆ ಪಟು ಕೊಡಬಹುದೆಂದು ಅವನು ತರ್ಕಿಸಿ ದಂಡೆತ್ತಿ ಬರಬಹುದು. ಕಳೆದ ಮಹಾಯುದ್ಧದಲ್ಲಿ ಜರ್ಮನಿ ಹಾಗೆಯೇ ಮಾಡಿತ್ತು. ಈ 'ಸಂಭವ'ಗಳನ್ನೆಲ್ಲ ನಿರೀಕ್ಷಿಸಿ ಸ್ಟಾಲಿನ್ ದೇಶದ ಭದ್ರತೆಗಾಗಿ ಚಿಂತಾತುರನಾದ.

## ಫಿನ್‌ಲಂಡ್‌ದಲ್ಲಿ

ಸ್ಟಾಲಿನ್ ಕೋಟೆ ಕೊತ್ತಲಗಳ ಮೇಲ್ತನಿಖೆ ನಡೆಸಿದ. ಆಗ ಫಿನ್‌ಲಂಡ ಮತ್ತು ಬಾಲ್ಟಿಕ್ ತ್ರೈರಾಷ್ಟ್ರಗಳ ಗಡಿಯಲ್ಲಿ ಕೆಲವು ಬಿರುಕುಗಳು ಅವನಿಗೆ ಕಾಣಿಸಿದವು. ಕ್ರಾಂತಿಯ ಪೂರ್ವದಲ್ಲಿ ಫಿನ್‌ಲಂಡ ಝಾರನ ಸಾಮ್ರಾಜ್ಯದೊಳಗಂತರ್ಗತವಾಗಿದ್ದಿತು. ಫಿನ್‌ರು ಸ್ವಾತಂತ್ರ್ಯ ಬಯಸಿದರು. ಲೆನಿನ್-ರಶಿಯವು ಅದನ್ನು ಮನ್ನಿಸಿತು. ಆದರೆ ಸ್ವಲ್ಪ ಕಾಲಾವಧಿಯೊಳಗೆ ಆ ರಾಷ್ಟ್ರದಲ್ಲಿ ಬಂಡವಲುಗಾರರ ಕೈಮೇಲಾಯಿತು. ಝಾರನ ಮನೆಯಲ್ಲಿ ಕರ್ನಲ್ ಆಗಿದ್ದ ಮನ್ನರಹ್ಯಾಂ ಫ್ಯಾಸಿಸ್ಟ ಸರಕಾರವನ್ನು ಸ್ಥಾಪಿಸಿದ. ಪಿಲ್‌ಸುಡಸ್ಕಿಯಂತೆ ಶಕ್ಯವಿದ್ದಷ್ಟು ರಶಿಯದ ಭೂಭಾಗವನ್ನು ಆಕ್ರಮಿಸಿ ಬೃಹತ್ ಫಿನ್‌ಲಂಡನ್ನು ರಚಿಸಲು ಅವನ ಆಶೆ. ಬಂಡವಲುಗಾರರು ರಶಿಯದ ಮೇಲೆ ದಂಡೆತ್ತಿ ಬಂದಾಗ ತಾನೂ ಅವರೊಡನೆ ಕೂಡಿಕೊಂಡ. ಆದರೆ ಅವರ ಯತ್ನಗಳೆಲ್ಲ ಅಂದು ಗುಡ್ಡಕ್ಕೆ ಕಲ್ಲು ಹೊತ್ತಂತಾದವು. ಆಗ ಭಂಗವಾದ ಆಶೆ ಹಿಟ್ಲರ್ ತಲೆ ಎತ್ತಿದೊಡನೆಯೇ ಮತ್ತೆ ಚಿಗುರಿತು. ಮನ್ನರ್‌ಹ್ಯಾಂ ಹಿಟ್ಲರನ ಕೈಗೊಂಬೆಯಾದ. 'ಮನ್ನರ್‌ಹ್ಯಾಂ ಕೋಟೆ' ಕಟ್ಟಿಸಿದವನೂ ಅವನೇ. ವಿಮಾನ ಹಾಗು ಜಲಾಂತರ್ಗಾಮಿ ಠಾಣೆಗಳನ್ನು ಫಿನ್‌ಲಂಡಿನಲ್ಲಿ ಜರ್ಮನರು ರಚಿಸಿದರು. ರಶಿಯದ ಮೇಲೆ ದಂಡೆತ್ತಿ ಹೋಗಲು ಈ ಠಾಣೆಗಳ ಉಪಯೋಗ ಮಾಡಿಕೊಳ್ಳಬೇಕೆಂದು ಹಿಟ್ಲರನ ಗುಪ್ತ ಉದ್ದೇಶ. ಏಕೆಂದರೆ ಫಿನ್‌ಲಂಡ ಬಹಳ ಆಯಕಟ್ಟಿನ ಸ್ಥಳ. ರಶಿಯದ ಎರಡನೇ ದೊಡ್ಡ ನಗರ ಲೆನಿನ್‌ಗ್ರಾಡಕ್ಕೆ ಫಿನ್‌ಗಡಿ

ಯಿಂದ ಒಂದು ಕಲ್ಲೆಸೆಯುವಷ್ಟು ದೂರ. ಲೆನಿನ್‌ಗ್ರಾಡವು ರಶಿಯದ ಹೆಬ್ಬಾಗಿಲು. ರಶಿಯದ ಜೀವ ಇಲ್ಲಿದೆ. ಅದನ್ನು ಹಿಡಿದರೆ ರಶಿಯದ ಜೀವ ಹಿಂಡಬಹುದೆಂದು ಹಿಟ್ಲರನ ವಿಚಾರ. ಇದು ಸ್ಟಾಲಿನ್ನನಿಗೆ ತಿಳಿಯದ ವಿಷಯವಲ್ಲ. ಆದರೆ ಕೈ ಎತ್ತಲು ಅಳುಕುತಿದ್ದ ಇಷ್ಟರವರೆಗೆ. ಹಿಟ್ಲರನ ಮೋರೆ ಪಶ್ಚಿಮ ಯುರೋಪಿನ ಕಡೆ ಹೊರಳಿರುವುದರಿಂದ ಈ ಗಡಿನಾಡನ್ನು ಭದ್ರಗೊಳಿಸಲು ಸ್ಟಾಲಿನ್ನನಿಗೆ ಒಳ್ಳೆ ಸಮಯ ದೊರೆಯಿತು.

ಸ್ಟಾಲಿನ್ ಫಿನ್ ಮುತ್ಸದ್ದಿಗಳನ್ನು ಕರೆಸಿ ಕೆಲವು ಬೇಡಿಕೆಗಳನ್ನು ಅವರ ಮುಂದಿಟ್ಟ. ಅದರಲ್ಲಿ ಮೂರು ಮುಖ್ಯವಾಗಿವೆ. ಲೆನಿನ್‌ಗ್ರಾಡದ ಬಳಿಯಲ್ಲಿರುವ ಫಿನ್‌ಗಡಿಪ್ರದೇಶವನ್ನು ಸ್ವಲ್ಪ ಒಳನಾಡಿಗೆ ಹಿಂದೆ ಸರಿಸುವ ಸೂಚನೆ ಮೊದಲನೆಯದು. ಅದರ ಬದಲು ವಿಳುಪಟ್ಟು ಸ್ಥಳವನ್ನು ಸ್ವಲ್ಪ ಉತ್ತರದಲ್ಲಿ ಕೊಡುವೆನೆಂದು ಭರವಸೆಕೊಟ್ಟ. ಫಿನ್‌ಕೊಲ್ಲಿಯನ್ನು ಮುಚ್ಚಿದರೆ ಅದರಲ್ಲಿರುವ ರಶಿಯನ್ ನೌಕಾಪಡೆ ದಿಗ್ಬಂಧಿಸಲ್ಪಟ್ಟಂತೆಯೇ ಸರಿ. ಆದುದರಿಂದ ಕೊಲ್ಲಿಯ ದ್ವಾರದಲ್ಲಿ ಜಿಬ್ರಾಲ್ಟರ್‌ನಂತಹ ಹಾಂಕೋ ಬಂದರವನ್ನು ವಾಯದೆ ಗೇಣಿಗೆ ಕೇಳಿದುದು ಎರಡನೆಯ ಸೂಚನೆ. ಮೂರನೆಯದಾಗಿ ಉತ್ತರ ರಶಿಯದಲ್ಲಿರುವ ಪೆಟ್‌ಸಾಮೋ ಬಂದರವನ್ನು ಒಪ್ಪಿಸುವುದು. ಫಿನ್ ಮುತ್ಸದ್ದಿಗಳು ಮದೋನ್ಮತ್ತತೆಯಿಂದ ಈ ನಯದ ಮಾತುಗಳಿಗೆ ಕಿವಿಗೊಡಲಿಲ್ಲ. ಬಡಿದಾಟವಾಗಿ ಕೊನೆಗೆ ಫಿನ್‌ಲಂಡ್ ಶರಣು ಬಂದಿತು. ಸ್ಟಾಲಿನ್ನನ ಬೇಡಿಕೆಗಳೆಲ್ಲ ಪೂರೈಸಲ್ಪಟ್ಟವು. ಹಿಟ್ಲರ್ ಕಟ್ಟಿದ ಮನ್ನರ್‌ಹಾಂ ಕೋಟೆ ಪುಡಿಯಾಯಿತು. ಇದು ಫ್ಯಾಸಿಝಂಕ್ಕೆ ದೊರೆತ ಇನ್ನೊಂದು ಪೆಟ್ಟು.

## ಬಾಲ್ಟಿಕ್ ತ್ರೈರಾಷ್ಟ್ರಗಳು

ಇನ್ನೊಂದು ಬಿರುಕು ಕಂಡುದುದು ಸ್ಟಾಲಿನಾ ಬಾಲ್ಟಿಕ್ ತ್ರೈರಾಷ್ಟ್ರಗಳ ಗಡಿಯಲ್ಲಿ. ಲಿಥುವೇನಿಯಾ, ಲಾಟ್ವಿಯಾ ಮತ್ತು ಇಸ್ಟೋನಿಯಾ ಈ ಮೂರು ರಾಷ್ಟ್ರಗಳು ವಿಪ್ಲವದ ಮೊದಲು ಝಾರ ರಾಜ್ಯದಲ್ಲೇ ಸೇರಿ ಹೋಗಿದ್ದವು. ಇವು ವರ್ಸಾಯಿ ಒಪ್ಪಂದದಲ್ಲಿ ಅಸ್ತಿತ್ವಕ್ಕೆ ಬಂದುವು. ಹೆಸರಿಗೇನೋ 'ರಾಷ್ಟ್ರಗಳು.' ಆದರೆ ಬಹಳ ಚಿಕ್ಕವು. ಮೂರು ರಾಷ್ಟ್ರಗಳ ಜನಸಂಖ್ಯೆ ಕೂಡಿಸಿದರೆ ಕನ್ನಡನಾಡಿನಷ್ಟಾಗುವುದಿಲ್ಲ. ಇವುಗಳಲ್ಲಿ ಜರ್ಮನರ

ಪ್ರಭಾವವು ವಿಶೇಷ. ನೂರಾರು ವರುಷಗಳ ಹಿಂದೆ ಜರ್ಮನ್ ಜಮೀನ್ದಾರರು ಅಲ್ಲಿಗೆ ಬಂದು ಹೊಲ ನೆಲ ಮಾಡಿ ಮನೆಮಾರು ಕಟ್ಟಿ ನೆಲೆಸಿದರು. ಕಾಲಕ್ರಮೇಣ ಅವು ಜಮೀನ್ದಾರರ ವಸಾಹತುಗಳೇ ಆದುವು. ದೇಶದಲ್ಲಿ ಅವರದೇ ವರ್ಚಸ್ಸು. ಹಿಟ್ಲರ್ ಅಧಿಕಾರಕ್ಕೆ ಬಂದ ಮೇಲೆ ಸ್ವಾಭಾವಿಕವಾಗಿ ಇವು ಜರ್ಮನಿಯ ತಾಳಕ್ಕೆ ತಕ್ಕಂತೆ ಕುಣಿದುವು. ರಶಿಯದ ಮೇಲೇರಿ ಹೋಗಲು ಇವೂ ಅನುಕೂಲ ನೆಲೆಗಳು ಹಿಟ್ಲರನಿಗೆ. ಈ ದಾರಿ ಹಿಡಿದರೆ ಸ್ಮೊಲೆನ್‌ಸ್ಕ್‌ಗೆ ಸಮೀಪ. ಓಗವು ಜರ್ಮನರ ಒಳಸಂಚನ್ನೆಲ್ಲ ಸ್ಟಾಲಿನ್‌ನಿಗೆ ತಿಳಿಸಿದೆ. ಈ ವಿಷಬೀಜಗಳನ್ನು ಗುಡಿಸಿಬಿಡಲು ಸ್ಟಾಲಿನ್‌ನಿಗೆ ಇಂದು ಸಮಯ ಲಭಿಸಿದೆ. ಇಲ್ಲಿಯೂ ಸ್ಟಾಲಿನ್ ಮಿಲಿಟರಿ ಠಾಣೆಗಳನ್ನು ಬೇಡಿದನು. 'ಒಲ್ಲೆ' ಎನ್ನುವ ಧೈರ್ಯ ಅವುಗಳಿಗಿಲ್ಲ. ಬಂದರ ವಿಮಾನ ನಿಲ್ದಾಣಗಳಲ್ಲಿ ರಶಿಯನರ ಸೇನೆ, ವಿಮಾನಗಳು ನಿಂತುವು. ಜರ್ಮನರು ಗಂಟುಮೂಟೆ ಕಟ್ಟಿಕೊಂಡು ಸ್ವದೇಶಯಾತ್ರೆ ನಡೆಸಿದರು. ಅವರ ಅಧಿಕಾರ ಪ್ರಾಬಲ್ಯ ತಪ್ಪಿದುದರಿಂದ ಬಾಲ್ಟಿಕ್ ತ್ರೈರಾಷ್ಟ್ರಗಳು ರಶಿಯದ ಕಡೆ ಒಲಿದುವು. ಸೋವಿಯೆಟ್ ಸಂಯುಕ್ತ ರಾಜ್ಯಘಟನೆಯಲ್ಲಿ ಅವು ಸ್ವತಂತ್ರ ಘಟಕಗಳಾಗಿ ಸೇರಿಕೊಂಡುವು. ಫ್ಯಾಸಿಝಂದ ನೆತ್ತಿಗೆ ಇದೂ ಒಂದು ಪೆಟ್ಟಾಯಿತು.

## ಬೆಸ್ಸಾರಬಿಯಾ

ಇನ್ನೊಂದು ತುಣುಕು ಭೂಮಿ ಸ್ಟಾಲಿನ್‌ನ ಕೈಸೇರಬೇಕಾಗಿದೆ. ಅದು ಬೆಸ್ಸಾರಬಿಯಾ ಪ್ರಾಂತ ರುಮೇನಿಯವು ವಶಪಡಿಸಿಕೊಂಡಿರುವ ಭಾಗ. ರಶಿಯವು ಅನಾಯಕತ್ವಸ್ಥಿತಿಯಲ್ಲಿದ್ದಾಗ ಈ ಚಿಕ್ಕ ರುಮೇನಿಯವು ಅದರ ಮೇಲೆ ಒಡೆತನ ಸ್ಥಾಪಿಸಿತ್ತು. ಇಷ್ಟರ ವರೆಗೆ ಆ ಪ್ರಾಂತದ ಪ್ರಜೆಗಳಿಗೆ ರುಮೇನಿಯದ ನೀರು ಕುಡಿವ ಅದೃಷ್ಟವಿತ್ತೋ ಏನೋ! ಆದರೆ ರಕ್ತ ಸಂಬಂಧ, ಅದಕ್ಕಿಂತ ಹೆಚ್ಚಿನ ಋಣಾನುಬಂಧ. ಆ ಪ್ರಾಂತ ಬಿಟ್ಟುಕೊಡಲು ಸ್ಟಾಲಿನ್, ರುಮೇನಿಯಕ್ಕೆ ಆಜ್ಞಾಪಿಸಿದ. ರುಮೇನಿಯವು ಬರ್ಲಿನ್ ನಗರದ ಕಡೆ ಹೊರಳಿತು. ಹಿಟ್ಲರ್ ಪಶ್ಚಿಮ ರಣರಂಗದಲ್ಲಿದ್ದ ಆಗ. ರುಮೇನಿಯವು ಮರುಮಾತಿಲ್ಲದೆ ಆ ಪ್ರಾಂತ ಒಪ್ಪಿಸಿತು. ಬೆಸ್ಸಾರ

ಬಿಯಾ ಪ್ರಾಂತದ ವಿಷಯದಲ್ಲಿ ಸ್ಟಾಲಿನ್ ವಹಿಸಿದ ಧೋರಣದಿಂದ ಜರ್ಮ ನರು ಅಸಮಾಧಾನಗೊಂಡರು.

## ಪರಿಸ್ಥಿತಿಯಲ್ಲಿ ಬದಲಾವಣೆ

ಕಾಲಚಕ್ರ ಉರುಳಿತು. ಯುದ್ಧವಾರಂಭವಾಗಿ ಒಂದು ವರುಷ ದೊಳಗೆ ಅನೇಕ ಸ್ಥಿತ್ಯಂತರಗಳಾದುವು. ದೊಡ್ಡವರ ಯುದ್ಧದಲ್ಲಿ ಅನೇಕ ಚಿಕ್ಕ ಚಿಕ್ಕ ರಾಷ್ಟ್ರಗಳು ಕಾಲಡಿ ಬಿದ್ದು ಹೋದುವು. ಡೆನ್ಮಾರ್ಕ ಸ್ವಾತಂತ್ರ್ಯ ಕಳೆದುಕೊಂಡಿತು. ನಾರ್ವೆಯನ್ನು ನಾಜಿಗಳು ಗೆದ್ದು ಕೊಂಡರು. ಹಾಲಂಡಿಗೆ ಸೋಲೊದಗಿತು. ಶಸ್ತ್ರ ಕೆಳಗಿಟ್ಟಿತು ಬೆಲ್ಜಿಯಂ. ಫ್ರಾನ್ ಕೂಡಾ ಮಣಿಯಿತು. ಇನ್ನುಳಿದುದು ಒಂದೇ ರಾಷ್ಟ್ರ-ಬ್ರಿಟನ್. ಆ ಬ್ರಿಟನನ್ನು ಸೋಲಿಸಿದರೆ ಅಖಿಲ ಯುರೋಪದಲ್ಲಿ ಜರ್ಮನಿಯು ಏಕೈಕ ರಾಷ್ಟ್ರವಾಗುವುದು. ಸಾಗರದ ರಾಣಿಯ ಗಂಡನಾದರೆ ಸಪ್ತಸಾಗರಗಳ ಗಂಡನಾದ ಹಾಗೆ. ಜಗತ್ತಿನ ಏಕಚಕ್ರಾಧಿಪತ್ಯ ಜರ್ಮನಿಗೆ ಲಭಿಸಿದಂತೆಯೇ! ಈ ಕನಸು ಕಂಡ ಹಿಟ್ಲರ್ ನೆಪೋಲಿಯನ್ನನಂತೆ ಫ್ರೆಂಚ್ ಕರಾವಳಿಯಲ್ಲಿ ನಿಂತು ದೂರದರ್ಶಕ ಯಂತ್ರದಿಂದ ನೋಡುತ್ತಾನೆ—ಬ್ರಿಟನ್ನನ್ನು. ಬ್ರಿಟಿಶ ರಿನ್ನೂ ಯುದ್ಧಸನ್ನದ್ಧರಾಗಿಲ್ಲ. ವೈಮಾನಿಕ ಬಲವಿಲ್ಲ. ದಂಡೆತ್ತಿ ಹೋದರೆ ಗೆಲುವು ಖಂಡಿತ. ಆದರೆ ಹೋಗುವ ಬಗೆ ಹೇಗೆ? ವಿಶಾಲವಾದ ಆಳವಾದ ಸಮುದ್ರವಿದೆಯಲ್ಲ! ಸಮುದ್ರದ ತೆರೆಗಳು ಪರ್ವತಗಳಂತೆ ಏಳುತ್ತ ಬೀಳುತ್ತ ಬೋರ್ಗರೆಯುತ್ತಿವೆ. ಅದರ ಏರಾಟ ನೋಡಿದಾಗ ಎಲ್ಲಿ ರಾಜ್ಯ ಸಾಮ್ರಾ ಜ್ಯವನ್ನು ನುಂಗಿ ಬಿಡುವದೋ ಏನೋ ಎಂದೆನ್ನಿಸುತ್ತಿದೆ. ತೆರೆ ಫ್ರೆಂಚ ಕರಾವಳಿಗೆ ಬಂದು ಅಪ್ಪಳಿಸಿತು. ಹಿಟ್ಲರನ ಕಾಲಡಿಯಿದ್ದ ಮರಳು ಕರಗಿ ಅವನ ಕಾಲು ಕುಸಿಯಿತು. ಧೃತಿಗೆಟ್ಟ ಹಿಟ್ಲರ್. ಕಣ್ಣು ಕತ್ತಲೆ ಬಂತು. ಮೋರೆ ತಿರುವಿದ ಪೂರ್ವಕ್ಕೆ. ಆಗ ಅವನಿಗೆ ಕಾಣಿಸಿದುದಾದರೂ ಏನು? ಸೋವಿಯೆಟ್ ಯೂನಿಯನ್! ಅದರ ರಾವಣಾಕೃತಿ! ಅಜೇಯ ಧ್ವಜ! ಆ ಸುತ್ತಿಗೆ! ಆ ಕುಡಗೋಲು! ಭುಗ್ಗೆಂದು ಹಿಟ್ಲರನ ಹೃದಯದಲ್ಲಿ ಶತ ಮಾನಗಳ ದ್ವೇಷಾಗ್ನಿ ಪ್ರಜ್ವಲಿಸಿತು. ಅವನ ರಥ ಪೂರ್ವಾಭಿಮುಖವಾಗಿ ಸಾಗಿಬಂದಿತು.

## ಬಾಲ್ಕನ್ ರಾಷ್ಟ್ರಗಳು

ಆಗ ಬಾಲ್ಕನ್ ರಾಷ್ಟ್ರಗಳಲ್ಲೂ ಯುದ್ಧದ ಹೊಗೆ ಮುಸುಗಿತ್ತು. ಮುಸೊಲಿನಿ ಗ್ರೀಕರನ್ನು ಕೆಣಕಿದ್ದ. ಗ್ರೀಸ್ ಬರಿ ಚಿಕ್ಕ ದೇಶವಾದರೂ ಸ್ವಾತಂತ್ರ್ಯ ಕಾಪಾಡಿಕೊಳ್ಳಲು ಪ್ರತಿಭಟಿಸಿತು. ಬ್ರಿಟಿಶರೊಡನೆ ಗ್ರೀಕರಿಗೆ ಬಾಂಧವ್ಯ. ಆದುದರಿಂದ ಬ್ರಿಟಿಶರು ಸೇನೆ ಹಾಗು ಸಲಕರಣೆಗಳ ಸಹಾಯವನ್ನಿತ್ತರು. ಮುಸೊಲಿನಿಯ ಆಶೆ ಈಡೇರಲಿಲ್ಲ. ಅವನನ್ನು ಬದುಕಿಸುವುದು ಹಿಟ್ಲರನ ಪಾಲಿಗೆ ಬಿದ್ದ ಮಿತ್ರ ಕಾರ್ಯ.

ಹಿಟ್ಲರನಿಗೆ ಇನ್ನೊಂದು ಭೀತಿ. ಗ್ರೀಸಿನಲ್ಲಿ ಬ್ರಿಟಿಶರು ತಳವೂರಿದ್ದಾರೆ. ಅವರು ಬಲ ಸಂವರ್ಧಿಸಿಕೊಂಡರೆ ಗಂಡಾಂತರ ತಪ್ಪಿದ್ದಲ್ಲ. ಬಾಲ್ಕನ್ ರಾಷ್ಟ್ರಗಳ ಒಲವು ಯಾರ ಕಡೆಗಿದೆಯೆಂಬುದು ಅನಿಶ್ಚಿತ. ಅವು ಮಿತ್ರರ ಶಿಬಿರ ಸೇರುವ ಸಂಭವವೂ ಇದೆ. ಹಾಗಾದರೆ ಕೇಡುಂಟು. ಕಳೆದ ಮಹಾಯುದ್ಧ ಕಾಲದಲ್ಲಿ ರುಮೇನಿಯವು ಹಿಡಿದುಕೊಂಡು ಮಿತ್ರರೊಡನೆ ಸೇರಿದುದರಿಂದಲೇ ಕೈಸರನ ಯುದ್ಧ ಯಂತ್ರದ ಕೀಲು ಜಾರಿತು. ಇಷ್ಟೇ ಅಲ್ಲ. ಗ್ರೀಸಿನ ವಿಮಾನ ನಿಲ್ದಾಣಗಳಿಂದ ರುಮೇನಿಯದ ಎಣ್ಣೆ ಕಣಿಗಳಲ್ಲಿ ಬಾಂಬಿಕ್ಕಬಹುದಾಗಿದೆ. ರುಮೇನಿಯದ ಎಣ್ಣೆ ಹಿಟ್ಲರನಿಗೆ ಅತ್ಯಾವಶ್ಯಕ. ಆದುದರಿಂದ ಸಕಾಲದಲ್ಲಿ ಮಿತ್ರರನ್ನು ಬಾಲ್ಕನ್ ರಾಷ್ಟ್ರಗಳಿಂದ ಉಚ್ಚಾಟನೆ ಮಾಡಲು ಹಿಟ್ಲರ್ ಸಿದ್ಧಗೊಳಿಸಿದ ಜರ್ಮನ್ ದಂಡುಗಳು ಅರ್ಧ ಚಂದ್ರಾಕೃತಿಯಲ್ಲಿ ಚಲಿಸಿದವು. ಮೊದಲು ರುಮೇನಿಯದಲ್ಲಿ ಡೇರೆ ಹೊಡೆದವು. ಆ ಮೇಲೆ ಬಲ್ಗೇರಿಯಕ್ಕೆ ಕಾಲು ಚಾಚಿ ಗ್ರೀಸಿನ ಗಡಿ ಸೇರಿದವು. ಬಾಲ್ಕನ ರಾಷ್ಟ್ರಗಳೆಲ್ಲವೂ ಫ್ಯಾಸಿಸ್ಟ ಬಲೆಯೊಳಗೆ ಬಿದ್ದುವು. ಈ ಭಾಗದಲ್ಲೂ ರಶಿಯದ ಹಕ್ಕು ಹಿತಗಳಿಗೆ ಧಕ್ಕೆಯಾದುದರಿಂದ ಫ್ಯಾಸಿಜಂ ಮತ್ತು ಕಮ್ಯೂನಿಜಂಗಳೊಳಗೆ ಘರ್ಷಣೆಯಾಯಿತು.

## ರಶಿಯದ ಹಕ್ಕು ಹಿತಗಳೇನು ?

ಬಾಲ್ಕನದಲ್ಲಿ ರಶಿಯದ ಹಕ್ಕು ಹಿತಗಳೇನೆಂಬುದನ್ನು ಸ್ವಲ್ಪಮಟ್ಟಿಗೆ ಪರಿಶೀಲಿಸೋಣ. ಎಂದರೆ ಕಲಹದ ಕಾರಣವು ಗೊತ್ತಾಗುವುದು. ಒಂದೇ ಮಾತಿನಲ್ಲಿ ಹೇಳುವುದಿದ್ದರೆ ರಶಿಯದ ಪ್ರಭಾವವು ವಿಶೇಷವಿದ್ದ ಪ್ರದೇಶ ವಿದು. ಬಲ್ಗೇರಿಯದ ಪ್ರಜೆಗಳಲ್ಲಿ ಬಹುಸಂಖ್ಯಾಕರು ರಶಿಯದಲ್ಲಿರುವ

ಸ್ಲಾವ ಜನಾಂಗಕ್ಕೆ ಸೇರಿದವರು. ರಾಷ್ಟ್ರಗಳು ಬೇರೆ ಬೇರೆಯಾದರೂ ಜನರ ಬಾಂಧವ್ಯದ ಎಳೆ ಹರಿದುಹೋಗಿಲ್ಲ. ಹೀಗಾಗಿ ಬಲ್ಗೇರಿಯನ್ನರಿಗೆ ರಶಿಯನ್ನರ ಮೇಲೆ ಒಂದು ರೀತಿಯ ಆತ್ಮೀಯತೆ; ಗೌರವ ಕೂಡಾ ಇದೆ. ಏಕೆಂದರೆ ತುರ್ಕಿ ಸುಲ್ತಾನರು ಬಲ್ಗೇರಿಯವನ್ನು ತಮ್ಮ ಪದಹತಿಯಲ್ಲಿಟ್ಟುಕೊಂಡಾಗ ರಶಿಯವು ಬಲ್ಗೇರಿಯನ್ನರ ಬಂಧವಿಮೋಚನೆ ಮಾಡಿ (೧೮೭೮) ಪುಣ್ಯ ಕಟ್ಟಿಕೊಂಡಿತು. ಅದನ್ನು ಮರೆಯುವ ಕೃತಘ್ನರಲ್ಲ ಬಲ್ಗೇರಿಯನ್ನರು. ಆದರೆ ಕಥೆ ಇಲ್ಲಿಗೇ ಮುಗಿಯುವದಿಲ್ಲ. ಅಲ್ಲಿಯೂ ರಾಜ್ಯಸೂತ್ರ ಹಿಡಿದವರು ಫ್ಯಾಸಿಸ್ಟ ಮರಿಗಳು. ಸೇನಾಧಿಕಾರಿಗಳಿಗೆ ಜರ್ಮನಿಯ ಮೇಲೆ ಪ್ರೇಮ. ಅವರ ಒತ್ತಾಯಕ್ಕೆ ಬೋರಿಸ್ ಅರಸ ತಲೆ ತಗ್ಗಿಸಿದ. ಬಲ್ಗೇರಿಯವು ಹಿಟ್ಲರನ 'ಹೊಸ ವ್ಯವಸ್ಥೆ'ಗೆ ಒಪ್ಪಿ, ಗ್ರೀಸಿಗೆ ತೆರಳಲು ಜರ್ಮನ ಸೈನಿಕರಿಗೆ ದಾರಿ ತೆರೆದುಕೊಟ್ಟಿತು. ಇದು ಸ್ಟಾಲಿನ್ನನಿಗೆ ಒಗ್ಗದೆ ಅವನು ಅಸಮ್ಮತಿ (೧೯೪೧ ಮಾರ್ಚ) ಸೂಚಿಸಿದ. ರುಮೇನಿಯಕ್ಕೂ ನಿಷೇಧ ಪತ್ರ ಬರೆದ. ರುಮೇನಿಯ ಮತ್ತು ಬಲ್ಗೇರಿಯದ ಬಂದರಗಳಲ್ಲಿ ಜರ್ಮನ್ ನೌಕಾಪಡೆ ಆಶ್ರಯ ಪಡೆದುದರಿಂದ ಕಪ್ಪು ಸಮುದ್ರದ ತನ್ನ ಒಡೆತನಕ್ಕೆ ಧಕ್ಕೆಯುಂಟೆಂದು ಸ್ಟಾಲಿನ್ ಊಹಿಸಿದನೋ ಏನೋ! ಆ ಬಂದರಗಳಿಂದ ಕಾಕೇಶಿಯದ ಮೇಲೆ ಕಾಲು ಚಾಚಲು ಜರ್ಮನರಿಗೆ ಅನುಕೂಲ. ಇದರಿಂದ ಸ್ಟಾಲಿನ್ ನೊಂದುಕೊಂಡ.

ಯುಗೊಸ್ಲೋವಿಯಕ್ಕೂ ರಶಿಯದೊಡನೆ ಬಾಂಧವ್ಯವಿದೆ. ಆದಿಯಿಂದಲೂ ಯುಗೋಸ್ಲೋವಿಯವು ಫ್ಯಾಸಿಜಂವಿರೋಧಿ. ಆದರೆ ಬಲ್ಗೇರಿಯದಂತೆ ಅಲ್ಲಿಯೂ ರೀಜಂಟ ಪಾಲನಿಗೆ ಜರ್ಮನರ ಮೇಲೆ ಸಹಾನುಭೂತಿ. ಹಿಟ್ಲರನ ಹೊಸ ವ್ಯವಸ್ಥೆಗೆ ಅವನು ಸಹಿ ಹಾಕಿದ. ಇದು ಪ್ರಜೆಗಳಿಗೂ ರಾಜಕುಮಾರ ಪೀಟರನಿಗೂ ಸರಿ ತೋರಲಿಲ್ಲ. ಪೀಟರ ಪಾಲನನ್ನು ತಳ್ಳಿ ಹಾಕಿ ತಾನೇ ಆಡಳಿತೆ ವಹಿಸಿದನು. ಮಾರ್ಚ ೨೭ರಲ್ಲಿ ಪೀಟರ ಸರಕಾರವು ರಶಿಯದೊಡನೆ ಒಪ್ಪಂದವನ್ನು ಮಾಡಿಕೊಂಡಿತು. ಹಿಟ್ಲರನ ಸಂಕಟಕ್ಕೆ ಆಳತೆಯಿಲ್ಲ. ಇಡೀ ಯುರೋಪವನ್ನು ಗೆದ್ದ ಮದೋನ್ಮತ್ತತೆಯಿಂದ ಅವನ ಮತಿ ಮಂಕಾಗಿ ರಶಿಯದೊಡನೆ ಸಂಗ್ರಾಮ ಹೂಡಿದ. (೧೯೪೧ ಜೂನ್)

ಕಳೆದ ಕೆಲವು ಶತಮಾನಗಳಲ್ಲಿ ರಶಿಯಾದ ಮೇಲೆ ದಂಡೆತ್ತಿ ಹೋಗದ ರಾಷ್ಟ್ರವೇ ಇಲ್ಲ. ಮೊಂಗೋಲ ಖಾನರೂ; ಟರ್ಕಿಯ ಸುಲ್ತಾನರೂ ಸ್ವೀಡನಿನ ಜಹಗೀರುದಾರರೂ ಈ ದೇಶದ ಮೇಲೆ ಏರಿ ಹೋಗಿ ರಕುತದ ಕಾಲುವೆಯನ್ನು ಹರಿಸಿದರು. ಜರ್ಮನಿಯೇ ಒಮ್ಮೆ ೧೨೪೨, ೧೯೪೧ರಲ್ಲಿ ಹೀಗೆರಡುಬಾರಿ ಯುದ್ಧ ಹೂಡಿದೆ. ಸ್ವಾತಂತ್ರ್ಯ ಸರಿಸಮಾನತೆ, ಭ್ರಾತೃ ಭಾವವೆಂದು ಪುರಾಣ ಓದಿದ ಫ್ರಾನ್ಸ್ ಕೂಡಾ ನೆಪೋಲಿಯನ್ನನ ಕಾಲದಲ್ಲಿ ರಶಿಯಾದ ಕಡೆ ಹರಿಹಾಯ್ದಿತು. ಹಿಂದಿನ ಮಹಾಯುದ್ಧಕಾಲದಲ್ಲಿ ಲೋಕದ ೧೪ ರಾಷ್ಟ್ರಗಳು ತಮ್ಮ ಸೇನೆಗಳನ್ನು ಕಳಿಸಿದುದು ಸರ್ವಶ್ರುತ. ಈಗ ಹಿಟ್ಲರನ ಸರತಿ

## ರಶಿಯಾದ ಶಕ್ತಿಯ ರಹಸ್ಯ

ಹಳೇ ರಶಿಯಾವು ದುರ್ಬಲರಾಷ್ಟ್ರ. ಹೊಲೆಹದಿನೆಂಟು ಜಾತಿ, ಮತಗಳಿಂದ ರಾಜಕೀಯ ಐಕ್ಯವಿರಲಿಲ್ಲ. ಅಂತಃಕಲಹದಿಂದ ಭದ್ರ ಸರಕಾರ ಇಲ್ಲದೆ ಹೋಯಿತು. ಮಿಲಿಟರಿ ದೃಷ್ಟಿಯಿಂದಲೂ ಅಶಕ್ತವೇ. ಶಿಕ್ಷಣ, ಕೃಷಿ, ಔದ್ಯೋಗಿಕ ಕ್ಷೇತ್ರಗಳಲ್ಲೂ ಹಿಂದುಳಿದುದು. ಹೀಗಾಗಿ ಅದು ಪರರಾಷ್ಟ್ರಗಳಿಂದ ಅನೇಕ ಒದೆತಗಳನ್ನು ತಿಂದಿತು. ಅನೇಕರು ಅದರ ಸಂಪತ್ತು ಸೂರೆ ಮಾಡಿದರು. ಆದರೆ ಅದರ ಇತಿಹಾಸದಲ್ಲಿ ಒಂದು ಆಶ್ಚರ್ಯಕರ ಸಂಗತಿಯನ್ನು ನಾವು ಕಾಣುತ್ತಿದ್ದೇವೆ. ಅದು ರಶಿಯಾದ ಸಹನಶಕ್ತಿ. ಇದರಿಂದ, ಮೊದಲು ಸೋಲು ಹಿನ್ನಡೆಗಳೊದಗಿದರೂ ಕೊನೆಗೆ ಜಯ ದೊರೆತಿರುವುದು ರಶಿಯಕ್ಕೇ. ರಶಿಯಾದ ದೈತ್ಯಾಕೃತಿ, ಹವಾಮಾನಗಳು ಅದರ ಈ ಅಜೇಯಶಕ್ತಿಯ ರಹಸ್ಯಗಳಾಗಿವೆ. ನಡೆದು ಮುಗಿಸದ ವೈಶಾಲ್ಯತೆ ಇದ್ದ ದೇಶದಲ್ಲಿ ಕೆಲವು ಸಾವಿರ ಲಕ್ಷ ಸೈನಿಕರು ಸಾಗರದಲ್ಲಿ ಕೆಲವು ಹನಿಗಳಿದ್ದಂತೆ. ಕಾಲಕ್ರಮೇಣ ವೈರಿಗಳ ಶಕ್ತಿಯು ಕುಂದಿತು. ರಶಿಯಾವು ಅವರನ್ನು ಬತ್ತಿದ ಕೆರೆಯಂತೆ ಹೀರಿಕೊಂಡಿತು. ಬರ್ಬರರಾದ ಮೊಂಗೋಲರನ್ನೇ ಜೀರ್ಣಿಸಿಕೊಂಡಿತಂತೆ! ಇನ್ನು ಅಂಥಿಂಥವರ ಪಾಡು

ಪಟ್ಟೇನು ? ಮುಂದೆ ಮುಂದೆ ಹೋದಂತೆ ಕ್ಷೀಣವಾಗುತ್ತಿರುವ ತನ್ನ ಸೇನೆಯ ಗತಿಯನ್ನು ನೋಡಿ ನೇಪೋಲಿಯನ್ನನು ಹಿಂತಿರುಗಿ ಬಂದ. ಹಿಮವೇ ಆತನ ಸೈನಿಕರಿಗೆ ಗೋರಿಯಾಗಿ ಪರಿಣಮಿಸಿತು. ಹಿಟ್ಲರ್ ಇದನ್ನರಿಯದ ರಾಜಕಾರಣಿಯೇನೂ ಅಲ್ಲ ಹೀಗಿದ್ದರೂ ರಶಿಯವನ್ನು ಕೆಣಕಿ ಅವನು ಕೆಟ್ಟ.

**ತಾತ್ಕಾಲಿಕ ವಿಜಯ**

ಮೊದಲಿನ ನಾಲ್ಕಾರು ತಿಂಗಳುಗಳಲ್ಲಿ ದೊರೆತ ವಿಜಯಗಳಿಂದ ಫ್ಯಾಸಿಸ್ಟರು ಉಬ್ಬಿಹೋದರು. ಅವರ ತೋಳತೀಟೆಯನ್ನು ಕಂಡು ಅಖಿಲ ಜಗತ್ತೇ ಬೆಕ್ಕಸ ಬೆರಗಾಯಿತು. ಬಾಲ್ಟಿಕ್ ತ್ರೈರಾಷ್ಟ್ರಗಳನ್ನು ನಾಝಿಗಳು ಆಕ್ರಮಿಸಿದರು. ಉಕ್ರೇನಿಯದ ಕನಕ ಭೂಮಿ. ಡಾನದ ಔದ್ಯೋಗಿಕ ಪ್ರದೇಶವು ಅವರ ಕೈವಶವಾಯಿತು. ಕಾಕೇಶಿಯದ ಹೆಬ್ಬಾಗಿಲೆಂದು ಹೆಸರುಪಡೆದಿರುವ ರೊಸ್ಟೊವ್ ನಗರಕ್ಕೆ ಪ್ರವೇಶಿಸಿದರು. ಉತ್ತರದಲ್ಲಿ ಲೆನಿನ್‌ಗ್ರಾಡಕ್ಕೆ ಮುತ್ತಿಗೆ ಹಾಕಿದರು. ಸೋವಿಯೆಟ್ ಯೂನಿಯನ್‌ದ ಮಾಸ್ಕೋ ಮುಖ್ಯ ಪಟ್ಟಣದ ಹೆಬ್ಬಾಗಿಲು ತಟ್ಟಿದರು. ಅಲ್ಪಾವಧಿಯೊಳಗೆ ನೂರಕ್ಕೆ ೭೫ರಷ್ಟು ಔದ್ಯೋಗಿಕ ಮಹತ್ವವುಳ್ಳ ಪ್ರದೇಶವನ್ನು ಸ್ಟ್ಯಾಲಿನ್ ಕಳೆದುಕೊಂಡ. ಸರ್ವಸಾಧಾರಣವಾಗಿ ಲೆನಿನ್‌ಗ್ರಾಡದಿಂದ ಹಿಡಿದು ರೊಸ್ಟೊವ್‌ವರೆಗಿನ ಭಾಗವು ಫ್ಯಾಸಿಝಂ ಪ್ರಳಯ ಜಲಧಿಯಲ್ಲಿ ಮುಳುಗಿಹೋಯಿತೆಂದರೆ ತಪ್ಪಲ್ಲ. ೫೦ಲಕ್ಷ ಸೈನಿಕರು ಸಾವುನೋವುಗಳಿಗೀಡಾದರು. ಇತಿಹಾಸದಲ್ಲಿ ರಶಿಯವು ಹಿಂದೆಂದೂ ಇಂತಹ ಪೆಟ್ಟನ್ನು ತಿಂದಿರಲಿಲ್ಲ.

ಸ್ಟ್ಯಾಲಿನ್-ರಶಿಯದ ಈ ದುರ್ದಶೆಗೆ ಕಾರಣವೇನೆಂದು ಅನೇಕರು ವಿಹ್ವಲರಾಗಿದ್ದಾರೆ. ರಶಿಯವನ್ನು ತಿವಿದ ಹಿಟ್ಲರನ ತೋಳ್ಬಲವನ್ನರಿತರೆ ಆ ಪ್ರಶ್ನೆಗೆ ಉತ್ತರ ದೊರೆಯುತ್ತಿದೆ. ರಶಿಯವನ್ನು ಮುರಿಯಲು ಫ್ಯಾಸಿಸ್ಟರು ಹಲವು ವರುಷಗಳಿಂದ ಸಿದ್ಧತೆ ನಡೆಸಿದ್ದರು. ಆಕ್ರಮಿತ ರಾಷ್ಟ್ರಗಳ ಕಾರ್ಖಾನೆ, ಶಸ್ತ್ರಾಸ್ತ್ರಗಳು ಅವರಿಗೆ ಲಭಿಸಿದುವು. ರಶಿಯಕ್ಕೆ ಈ ಸೌಲಭ್ಯಗಳಿಲ್ಲ. ಮೊನ್ನೆಮೊನ್ನೆಯ ವರೆಗೆ ಅದು ವ್ಯವಸಾಯಿ ರಾಷ್ಟ್ರವಾಗಿಯೇ ಉಳಿದಿತ್ತು. ದೇಶರಕ್ಷಣೆಗೆ ಅವಶ್ಯವಿದ್ದ ಕಾರ್ಖಾನೆಗಳ ವಿಷಯದಲ್ಲಿ ಬಾಲ್ಶೆವಿಕರು ಶ್ರೀಗಣೇಶಾಯನಮಃ ಮಂತ್ರವನ್ನೇ ಪಠಿಸಬೇಕಾಗಿ ಬಂದಿತು.

ಹೀಗಾಗಿ ಶಸ್ತ್ರಸಂಗ್ರಹ ಓಟದಲ್ಲಿ ಫ್ಯಾಸಿಸ್ಟ್ ರಾಷ್ಟ್ರಗಳನ್ನು ಹಿಂದೆ ಹಾಕಲು ಆಗಲಿಲ್ಲವೋ ಏನೋ? ಇದಲ್ಲದೆ ಜರ್ಮನಿಯ ಯುದ್ಧತಂತ್ರವೂ ಹೊಸತು. ಇದಕ್ಕೆ 'ಬ್ರಿಜ್‌ಕ್ರೆಗ್' ಎಂದು ನಾಮಕರಣಮಾಡಿದ್ದಾರೆ. ಬ್ಲಿಜ್‌ಕ್ರೆಗ್ ಮಿಂಚಿನಯುದ್ಧ. ವಾಯುವಿನಷ್ಟು ವೇಗ, ಭೂಕಂಪದಷ್ಟು ಆಕಸ್ಮಿಕವಾಗಿ ಹೊಡೆಯುವುದೇ ಬ್ಲಿಜ್‌ಕ್ರೆಗ್ ರಣಕೌಶಲವಾಗಿದೆ. ಯಾಂತ್ರಿಕಬಲ ಬ್ಲಿಜ್‌ಕ್ರೆಗ್ ಯುದ್ಧದ ತಳಹದಿ. ಜರ್ಮನರು ಈ ಕಲೆಯನ್ನು ಅಭ್ಯಸಿಸುತಿದ್ದರು. ರಶಿಯನರಿಗೆ ಈ ವಿದ್ಯೆ ಸಹೀನವೇನೂ ಇಲ್ಲ. ಆದರೆ ಜರ್ಮನರಿಗೆ ಬಹಳ ತರಬೇತಿ ದೊರೆತಿದೆ. ಸ್ಪೇನ ಯುದ್ಧದಲ್ಲಿ ಅದನ್ನು ಒರೆಗಲ್ಲಿಗೆ ಹಚ್ಚಿ ಇದ್ದಬಿದ್ದ ಲೋಪದೋಷಗಳನ್ನು ತಿದ್ದಿಕೊಂಡರು. ಪಶ್ಚಿಮ ರಣರಂಗಗಳಲ್ಲಿ ನಡೆದ ಯುದ್ಧಗಳಿಂದಲೂ ಅವರಿಗೆ ಅನುಭವ ದೊರೆತಿದೆ. ಇಷ್ಟು ಜರ್ಮನರು ಹೆಸರಾದ ಯೋಧರೆಂಬುದನ್ನು ಮರೆಯತಕ್ಕದ್ದಲ್ಲ. ಆದುದರಿಂದ ಮೊದಲು ಅವರು ಬಹಳ ದೂರದ ವರೆಗೆ ನುಗ್ಗಲು ಸಮರ್ಥರಾದರು. ಆದರೂ ಆಕಸ್ಮಿಕ ಏಟಿಗೆ ರಶಿಯವನ್ನು ಸೋಲಿಸಬೇಕೆಂಬ ಹಿಟ್ಲರನ ಆಶೆ ಕೈಗೂಡಲಿಲ್ಲ.

## ಮಾಸ್ಕೋ ಸೋಲು

ಜರ್ಮನರು ಗಡಿ ದಾಟಿದಂದಿನಿಂದ ರಶಿಯನ್ನರು ಮಹೋಗ್ರವಾಗಿ ಪ್ರತಿಭಟಿಸಿದರು. ಬಡಿದಾಟವಿಲ್ಲದೆ ಅಂಗೈ ಅಗಲದಷ್ಟು ಸ್ಥಳವನ್ನು ಬಿಟ್ಟುಕೊಡಲಿಲ್ಲ. ಫ್ಯಾಸಿಸ್ಟರು ಮುಂದೆ ಮುಂದೆ ಒಂದಂತೆ ಸುವ್ಯವಸ್ಥಿತ ರೀತಿಯಿಂದ ರಶಿಯನ್ನರು ಹಿಂದೆ ಸರಿದರು. ಮುಖ್ಯ ಕಾರ್ಖಾನೆಗಳನ್ನೆಲ್ಲ ಕಳಚಿ ಒಳನಾಡಿಗೆ ಒಯ್ದರು. ಮಾಸ್ಕೋ ನಗರದ ಹೆಬ್ಬಾಗಿಲಿನ ವರೆಗೆ ಫ್ಯಾಸಿಸ್ಟರು ವಿಜಯ ಯಾತ್ರೆ ಕೈಕೊಂಡರು. ಆದರೆ ಹೆಬ್ಬಾಗಿಲಿನಲ್ಲಿ ರಶಿಯನ್ನರು ಶತ್ರುಗಳನ್ನು ತಡೆದರು. ಬಹಳ ದೂರದ ವರೆಗೆ ಬಂದ ಜರ್ಮನ ಸೇನೆ ದಣಿದಿದೆ. ಕೆಂಪು ಸೇನೆಯ ಕಠೋರ ಪ್ರತಿಭಟನೆಯಿಂದಲೂ ಬಲಹೀನವಾಗಿದೆ. ರಶಿಯನ್ ಗೊರಿಲ್ಲಾ ದಳ ಜರ್ಮನ್ ಸೇನೆಯ ಹಿಂಬದಿ ಸೇರಿ ವಾಹನಗಳು ಸೌಕರ್ಯ ನಾಶ ಮಾಡಿದ್ದುವು. ಚಳಿಗಾಲ ತಲೆದೋರಿ ಹಿಮ ಸುರಿಯತೊಡಗಿತ್ತು. ರಶಿಯವು ಶಕ್ತಿ ಸಂಗ್ರಹ ಮಾಡುತ್ತಿತ್ತು. ಆದುದರಿಂದ ರಶಿಯನ್ನರು ಮಾಸ್ಕೋದ ಹೆಬ್ಬಾಗಿಲ್ಲಿ ಜರ್ಮನರಿಗೆ ಬಲವಾದ ಪೆಟ್ಟು

ಕೊಟ್ಟರು. ಜರ್ಮನ್ ಸೇನೆ ತತ್ತರಿಸಿ ಹೋಯಿತು. ಹಿಟ್ಲರನ ರಥದ ಗಾಲಿ ಮುರಿಯಿತು. ಫ್ಯಾಸಿಸ್ಟರು ಹಿಂದೋಡತೊಡಗಿದರು. ರಶಿಯನ ಸೇನೆ ಅವರ ಬೆಂಬತ್ತಿತು. ಮಾಸ್ಕೋ ಯುದ್ಧವು ಫ್ಯಾಸಿಝಂಕ್ಕೆ ದೊರೆತ ಮಹತ್ತ್ವದ ಪರಾಜಯ. ಬಾಲ್ಶೆವಿಝಂನ್ನು ಮುರಿಯಲು ಬಯಸಿದ ಫ್ಯಾಸಿಝಂ ತನ್ನ ಕಾಲಮೇಲೆಯೇ ಕಲ್ಲು ಚೆಲ್ಲಿಕೊಂಡಿತು.

## ಸ್ಟಾಲಿನ್‌ಗ್ರಾಡ್

೧೯೪೨ ನೆಯ ಇಸವಿ ಬಂದಿತು. ರಶಿಯವು ಸೋಲಲಿಲ್ಲ. ಶರಣು ಹೋಗಲಿಲ್ಲ. ಕೆಂಪು ಸೇನೆ ನುಚ್ಚುನೂರಾಗಿ ಹೋಗಲಿಲ್ಲ. ಅದರ ಶಕ್ತಿ ದಿನದಿನಕ್ಕೆ ಬೆಳೆಯ ತೊಡಗಿದೆ. ರಶಿಯನ್ನರೇ ಪ್ರತಿ ದಾಳಿ ಹೂಡುತ್ತಿದ್ದಾರೆ ರಶಿಯವನ್ನು ಸೋಲಿಸುವ ಬಗೆ ಹೇಗೆ? ಹಿಟ್ಲರ್ ತನ್ನ ತಂತ್ರವನ್ನು ಬದಲಿಸಿ ಆರ್ಥಿಕ ಯುದ್ಧವನ್ನು ಕೈಕೊಳ್ಳಲೆತ್ನಿಸಿದ. ದಕ್ಷಿಣ ರಶಿಯದ ಡಾನದ ಎಲ್ಲ ಭೂಭಾಗ ಮತ್ತು ಕಾಕೇಶಿಯವನ್ನು ಆಕ್ರಮಿಸಲು ಹೊರಟ. ಡಾನ ಪ್ರದೇಶವು ರಶಿಯದ ಕಣಜ. ಕಾಕೇಶಿಯದಿಂದಲೇ ರಶಿಯಕ್ಕೆ ಅವಶ್ಯವಿದ್ದ ಎಣ್ಣೆ ಬರುತ್ತದೆ. ಈ ಭಾಗವನ್ನು ಪ್ರತ್ಯೇಕಿಸಿ, ಆಕ್ರಮಿಸಿ, ರಶಿಯವು ಉಸಿರುಗಟ್ಟಿ ಸಾಯುವಂತೆ ಮಾಡುವದೇ ಹಿಟ್ಲರನ ಯೋಜನೆ. ಫ್ಯಾಸಿಸ್ಟ ಸೇನೆ ರೊಸ್ಟೊವ್ ನಗರದ ಮೂಲಕ ಕಾಕೇಶಿಯಕ್ಕೂ ಕಾಲಿಟ್ಟಿತು. ಒಂದು ದಂಡು ಸ್ಟಾಲಿನ್‌ಗ್ರಾಡ್ (ಹಿಂದಿನ ಝಾರಿಸ್ತಾನ್)ಕ್ಕೆ ಸಮೀಪಿಸಿತು. ಸ್ಟಾಲಿನ್‌ಗ್ರಾಡದ ವರೆಗೆ ಹಿಂದೆ ಸರಿದ ರಶಿಯನರು ಅಲ್ಲಿ ಜರ್ಮನರನ್ನು ಪ್ರತಿಭಟಿಸಿದರು. ಅದು ಎಂತಹ ಪ್ರತಿಭಟನೆ! ಯಾವ ರೀತಿಯ ಹೋರಾಟ! ಹಿಂದೆಂದೂ ಅಂತಹ ಸಂಗ್ರಾಮ ನಡೆದಿರಲಿಕ್ಕಿಲ್ಲ. ಇತ್ತಂಡದವರ ಲಕ್ಷಗಟ್ಲೆ ಸೇನೆ, ಸಾವಿರಾರು ಟ್ಯಾಂಕು ಹಾಗು ವಿಮಾನಗಳು ಭಾಗವಹಿಸಿದವು. ಆದರೂ ರಶಿಯನರು ತಮ್ಮ ನಾಯಕನ ಹೆಸರಿನಿಂದ ಕರೆಯಲ್ಪಡುತ್ತಿರುವ ಈ ನಗರವನ್ನು ಬಿಟ್ಟುಕೊಡಲಿಲ್ಲ. ಜರ್ಮನರಿಗೆ ಮಹತ್ತ್ವದ ಸೋಲು ಸಂಭವಿಸಿತು. ಜರ್ಮನರ ರಕುತ ನದಿಯಂತೆ ಹರಿಯಿತೆಂದು ಹಿಟ್ಲರನೇ ಒಪ್ಪಿಕೊಂಡ. ಸ್ಟಾಲಿನ್‌ಗ್ರಾಡವು ಫ್ಯಾಸಿಝಂದ ಸಮಾಧಿ. ಈ ಕಾಳಗವು ಯುದ್ಧ ಪರಿಸ್ಥಿತಿಯನ್ನೇ ಬದಲಿಸಿತು. ಅಂದಿನಿಂದ ರಶಿಯಾ ರಣರಂಗದಲ್ಲಿ ಜರ್ಮನ್ ಸೈನಿಕರು ಒಂದು ಹೆಜ್ಜೆ ಮುಂದಿ

ಡಲು ಶಕ್ತರಾಗಲಿಲ್ಲ. ಜರ್ಮನ್ ಸೇನೆಗಳು ಹಿಂದೆ ಹಿಂದೆ ಸರಿಯುತೊಡಗಿ ದವು. ರಶಿಯನರು ಪ್ರತಿದಾಳಿ ಹೂಡಿ ಆಕ್ರಮಿತ ಭೂಮಿಯಿಂದ ಶತ್ರು ಗಳನ್ನು ಹೊಡೆದಟ್ಟುತ್ತ ಬಂದರು. ಸ್ಟಾಲಿನ್‌ಗ್ರಾಡದಲ್ಲಿ ಹಿಟ್ಲರನಿಗೆ ಜಯ ಲಕ್ಷ್ಮಿ ಮಾಲೆ ಹಾಕುತ್ತಿದ್ದರೆ ಜಾಗತಿಕ ಪರಿಸ್ಥಿತಿಯೇ ಬೇರೆಯಾಗುತಿತ್ತು. ಜರ್ಮನ್ ಸೈನಿಕರು ಇರಾಣ ಇರಾಕಗಳಿಗೆ ಕಾಲಿಡುತ್ತಿದ್ದರು. ಇತ್ತ ಇಜಿಪ್ತದಲ್ಲಿದ್ದ ಅವನ ಸೇನಾಪತಿ ಸುವೇಜ್ ಕಾಲುವೆ ದಾಟುತಿದ್ದನು. ಸೋವಿಯೆಟ್ ಯೂನಿಯನ್ನದ ಸೈನಿಕರು ತಮ್ಮ ರಕ್ತ ಸುರಿಸಿ ಮಧ್ಯ ಪೂರ್ವ ರಾಷ್ಟ್ರಗಳನ್ನು ಉಳಿಸಿದರು. ಆಂಗ್ಲೋ ಅಮೇರಿಕನ್ನರನ್ನು ಬದು ಕಿಸಿದರು. ಏಕೆಂದರೆ ರಶಿಯದ ಪ್ರತಿಭಟನೆಯಿಂದ ಸಮರ ಸನ್ನಾಹಕ್ಕೆ ಆಂಗ್ಲೋ-ಅಮೇರಿಕನ್ನರಿಗೆ ಸಮಯ ಲಭಿಸಿತು.

### ಕೆಂಪು ಸೇನೆಯ ವಿಜಯ

೧೯೪೩ರಲ್ಲಿ ಕೆಂಪು ಸೇನೆಯ ವಿಜಯ ಯಾತ್ರೆಯು ಆರಂಭವಾಗು ತ್ತದೆ. ಡಾನ ಪ್ರದೇಶದಿಂದ ಜರ್ಮನರನ್ನು ಹೊಡೆದಟ್ಟಿದರು. ಉಕ್ರೇ ನಿಯಾ ಪ್ರಾಂತವು ಅವರ ಸ್ವಾಧೀನಕ್ಕೆ ಬಂತು. ಲೆನಿನ್‌ಗ್ರಾಡಕ್ಕೆ ಶತ್ರು ಗಳು ಹಾಕಿದ್ದ ಮುತ್ತಿಗೆಯನ್ನು ಮುರಿದರು. ಪೋಲಂಡದ ಪೂರ್ವಭಾಗವು ಕೈಸೇರಿತು. ರುಮೇನಿಯವು ವಶಪಡಿಸಿಕೊಂಡಿದ್ದ ಬೆಸ್ಸಾರಬಿಯಾ ಪ್ರಾಂತ ವನ್ನು ಸ್ಟಾಲಿನ್ ಸಂಪಾದಿಸಿಕೊಂಡಿದ್ದಾನೆ. ಈಗ ರಶಿಯನ್ ದಂಡುಗಳು ಹಂಗರಿ, ಜೆಕೊಸ್ಲೊವಾಕಿಯಗಳ ಗಡಿನಾಡುಗಳಲ್ಲಿ ಡೇರೆ ಹೊಡೆದಿವೆ. ತಮ್ಮ ತಾಯ್ನಾಡಿಂದ ವೈರಿಗಳನ್ನು ಹೊಡೆದೋಡಿಸುವ ಯತ್ನದಲ್ಲಿ ಕೆಂಪು ಸೇನೆಗೆ ಯಶಸ್ಸು ದೊರೆತಿದೆ. ಫ್ಯಾಸಿಸ್ಟರು ಇನ್ನೊಮ್ಮೆ ಪ್ರತಿದಾಳಿ ಕೈ ಕೊಳ್ಳಬಹುದೇನೋ ನಿಜ. ಆದರೆ ರಶಿಯವನ್ನು ಸೋಲಿಸುವುದು ಅಸಾಧ್ಯ. ಹಿಟ್ಲರನ ಸೇನೆ ಅಖಂಡವಿದ್ದಾಗ, ಯುರೋಪಿನ ಇನ್ನಿತರ ರಾಷ್ಟ್ರಗಳ ಧನ, ಜನ ಬೆಂಬಲ ದೊರೆತಿದ್ದಾಗ ಸೋವಿಯೆಟ್ ಯೂನಿಯನವನ್ನು ಬಗ್ಗಿ ಸಲು ಆಗಲಿಲ್ಲವಂತೆ! ಇನ್ನು ಶಕ್ಯವಿದೆಯೇ? ಜಗತ್ತಿನ ಇನ್ನಿತರ ಬಂಡ ವಲು ರಾಷ್ಟ್ರಗಳು ಬೆಂಬಲ ಕೊಟ್ಟರೂ ಆಗಲಿಕ್ಕಿಲ್ಲ. ಸೋವಿಯೆಟ್ ಯೂನಿಯನ್ನದ ಶಕ್ತಿ ಅಷ್ಟು ಅಜೇಯವಿದೆ. ಇಂದಿನ ಈ ಹೋರಾಟದಲ್ಲಿ ಕೆಂಪು ಸೇನೆಯು ಅದನ್ನು ಪ್ರದರ್ಶಿಸಿರುವದು.

## ಸಾಮ್ಯವಾದದ ಯುಗ ಬಂತು

ಫ್ಯಾಸಿಝಂಕ್ಕೆ ದೊಡ್ಡ ಸೋಲು ಪ್ರಾಪ್ತವಾಗಿದೆ. ಫ್ಯಾಸಿಝಂದ ಸೋಲು ಸಾಮ್ರಾಜ್ಯಶಾಹಿಯ ಸೋಲು. ಬಂಡವಲುವಾದದ ಸೋಲು. ಯುರೋಪಿನಲ್ಲಿ ಮಾತ್ರವಲ್ಲ, ಇಡೀ ವಿಶ್ವದಲ್ಲಿ. ಇಡೀ ವಿಶ್ವದಲ್ಲಿ ಅದರ ಪರಿಣಾಮವಾಗಿದೆ. ಸೋವಿಯೆಟ್ ಯೂನಿಯನ್ ಲೋಕದ ಎಲ್ಲ ರಾಷ್ಟ್ರಗಳ ಆದರಕ್ಕೆ ಪಾತ್ರವಾಗಿರುವುದು. ರಶಿಯದ ಬಗ್ಗೆ ಜನ ಸಹಾನುಭೂತಿ ತೋರಿಸುತ್ತಿದ್ದಾರೆ. ಕೆಂಪು ಸೇನೆಯ ಧೈರ್ಯ, ಶೌರ್ಯ, ದೇಶಾಭಿಮಾನ ಬಲಿದಾನವನ್ನು ಬಣ್ಣಿಸಿ ಹೆಮ್ಮೆಯಿಂದ ಮಾತನಾಡಿ ಹರಸುತಿದ್ದಾರೆ. ಬಾಲ್ಶೆವಿಸಂ ತತ್ವ, ಆದರ್ಶ, ಜನರ ಮನವನ್ನು ಆಕರ್ಷಿಸತೊಡಗಿದೆ. ಚೀಣ ದಲ್ಲಿ ಅದರ ಪ್ರಭಾವ ವಿಶೇಷವಾಗಿರುವುದು. ಹಿಂದುಸ್ತಾನದ ನವಜನಾಂಗದ ಹೃದಯದಲ್ಲಿ ಅದು ಬೇರೂರತೊಡಗಿದೆ. ಇರಾಣ, ಇರಾಕ, ಇಜಿಪ್ತ ಮೊದಲಾದ ಮಧ್ಯ ಪ್ರಾಚ್ಯ ದೇಶಗಳು ಮಾಸ್ಕೋದ ಕಡೆ ನೋಡತೊಡಗಿವೆ. ಬಾಲ್ಶೆವಿಸಂ ಪ್ರೇರಣೆಯಿಂದ ಬಾಲ್ಕನ್ ರಾಷ್ಟ್ರಗಳ ಜನರ ತನು ಪುಳಕಿತವಾಗಿದೆ. ಹೋ, ಬಂತು! ಬಂತೋ ಬಂತು! ಸಾಮ್ಯವಾದದ ಯುಗ ಬಂತು! *

---

* ಕೊನೆಯ ಒಂದೆರಡು ಅಧ್ಯಾಯಗಳನ್ನು ಸ್ವಲ್ಪ ಸಂಕ್ಷೇಪವಾಗಿ ವಿವರಿಸಲಾಗಿದೆ. ಒಂದನೆಯದು ಸ್ಥಳಾಭಾವವು ಕಾರಣ. ಎರಡನೆಯದಾಗಿ ಇನ್ನೂ ಯುದ್ಧವು ನಡೆಯುತ್ತಿರುವುದರಿಂದ ಭವಿಷ್ಯತ್ಕಾಲದ ನಿರ್ಣಯವನ್ನು ತರ್ಕದಿಂದ ಚರ್ಚಿಸುವುದು ಅಷ್ಟು ಸಹಜವಲ್ಲವಾದುದೆಂದು ಸಂಕ್ಷೇಪಿಸಿದೆ. —ಲೇಖಕ